ಡಾ. ಎಂ. ಚಿದಾನಂದಮೂರ್ತಿ

# ಹೊಸ ಬೆಳಕಿನಲ್ಲಿ ಬಸವಣ್ಣ



# ಹೊಸ ಬೆಳಕಿನಲ್ಲಿ ಬಸವಣ್ಣ

ಡಾ. ಎಂ. ಚಿದಾನಂದಮೂರ್ತಿ




ಸಪ್ನ ಬುಕ್ ಹೌಸ್®
3ನೇ ಮುಖ್ಯ ರಸ್ತೆ, ಗಾಂಧಿನಗರ, ಬೆಂಗಳೂರು - 560 009
ದೂರವಾಣಿ : 40114455

**Hosa Belakinalli Basavanna :** Collected Papers by **Dr. M. Chidananda-murthy,** published by **Sapna Book House (P) Ltd.,** R.O. # 11, 3rd Main Road, Gandhinagar, Bengaluru - 9. Tel. : 40114455.

[K.B. 1857]

**ISBN** : **978-81-280-1917-3**



ಪ್ರಥಮ ಮುದ್ರಣ : **ಜುಲೈ 2012**

ಪುಟಗಳು : **x+146+16 (ಚಿತ್ರಗಳು) = 172**

ಹಂಚಿಕೆದಾರರು : **ನಾಲೆಡ್ಜ್ ಬುಕ್ ಇಂಟರ್‌ನ್ಯಾಷನಲ್**
ರೂಮ್ ನಂ. 1, ಕೇನಿ ಬಿಲ್ಡಿಂಗ್
3/2, 1ನೇ ಅಡ್ಡರಸ್ತೆ, ಗಾಂಧಿನಗರ
ಬೆಂಗಳೂರು–560 009

ಅಕ್ಷರ ಜೋಡಣೆ : **ದಿವ್ಯ ಪ್ರಿಂಟ್ರಾನಿಕ್ಸ್, ಬೆಂಗಳೂರು**

ಮುಖಪುಟ ವಿನ್ಯಾಸ : **ಶ್ರೀಪಾದ, ಬೆಂಗಳೂರು**

# ಪ್ರಸ್ತಾವನೆ

28.2.2012ರಂದು ತುಮಕೂರು ವಿಶ್ವವಿದ್ಯಾಲಯದ ಡಾ. ಡಿ.ವಿ. ಗುಂಡಪ್ಪ ಕನ್ನಡ ಅಧ್ಯಯನ ಕೇಂದ್ರದಲ್ಲಿ "ಬಸವತತ್ವ ಅಧ್ಯಯನ ಕೇಂದ್ರ"ವನ್ನು ಪರಮಪೂಜ್ಯ ಡಾ. ಶ್ರೀ ಶಿವಕುಮಾರ ಸ್ವಾಮಿಗಳು ಉದ್ಘಾಟಿಸಿದ ಸಂದರ್ಭದಲ್ಲಿ ನಾನು ವಿಶೇಷ ಉಪನ್ಯಾಸವನ್ನು ನೀಡಿದೆ. ಬಸವಣ್ಣನ ಬಗ್ಗೆ ನಾನು ಹಲವು ಹೊಸ ವಿಷಯಗಳನ್ನು ಪ್ರಸ್ತಾಪಿಸಿ, ಬಸವತತ್ವ ಅಧ್ಯಯನ ಕೇಂದ್ರವು ಸಂಶೋಧನೆಗಳ ಕಡೆ ವಿಶೇಷ ಗಮನ ನೀಡಿ, ಅದರ ಜೊತೆ ಜೊತೆಗೇ ಬಸವನ ತತ್ವಗಳನ್ನು ಜನಸಾಮಾನ್ಯರಿಗೆ ಬಿಂಬಿಸುವ ಕೆಲಸವನ್ನೂ ಮಾಡಬೇಕೆಂದು ಸೂಚಿಸಿದೆ. ಆ ದಿನದ ನನ್ನ ಉಪನ್ಯಾಸದಲ್ಲಿ ನನ್ನ ಹಲವು ಲೇಖನಗಳ ಸಾರಾಂಶವನ್ನು ನೀಡಿದೆ. ಆ ಲೇಖನಗಳಲ್ಲಿ ಕೆಲವು ಪ್ರಕಟಿತ, ಕೆಲವು ಅಪ್ರಕಟಿತ ಲೇಖನಗಳೂ ಇದ್ದುವು. ಈ ಕೃತಿ ಅವುಗಳ ಸಂಕಲನ. ಇಲ್ಲಿಯ ಲೇಖನಗಳು ಒಂದೊಂದೂ ಸ್ವತಂತ್ರವಾಗಿರುವಂತೆಯೇ ಪರಸ್ಪರ ಸಂಬಂಧಿತ ಕೂಡ ಆಗಿವೆ. ಬಸವಪೂರ್ವ ಯುಗದ ಶೈವಧರ್ಮದ, ಅದರಲ್ಲೂ ಲಕುಲೀಶ ಪಾಶುಪತದ ಪರಿಚಯ, ವೀರಶೈವದ ಪ್ರಪ್ರಾಚೀನ ಲಿಖಿತ ದಾಖಲೆ, ಬಸವನ ಹಿರಿಯ ಸಮಕಾಲೀನ ರೇವಣಸಿದ್ಧನ ಪರಿಚಯ ಇವುಗಳ ಹಿನ್ನೆಲೆಯಲ್ಲಿ ಬಸವಣ್ಣನ ವಾಂಶಿಕ ಹಿನ್ನೆಲೆ, ಅವನ ವೈಶಿಷ್ಟ್ಯ, ಅವನೊಬ್ಬ ವೀರಶೈವದ ಆನ್ವಯಿಕ ವಿಜ್ಞಾನಿ ಇತ್ಯಾದಿ ಸಂಪ್ರಬಂಧಗಳಿವೆ. ಒಂದೊಂದರಲ್ಲೂ ಹೊಸ ಸಂಗತಿಗಳಿವೆ; ಹೊಸ ದೃಷ್ಟಿಕೋನವಿದೆ; ಹೊಸ ಚಿಂತನೆ ವ್ಯಾಖ್ಯಾನಗಳಿವೆ; ಚಿಂತನೆಗೆ ದಾರಿ ಮಾಡಿಕೊಡುವ ಹೊಳಹುಗಳು ಕೂಡ ಇವೆ. ಬಸವನನ್ನು ಆಧುನಿಕ ಪೂರ್ವ ಕಾಲದ ಜನತೆ ಕಂಡಿದ್ದ ರೀತಿಯನ್ನು ಬಿಂಬಿಸುವ ಅವರವರ ಬರಹಗಳನ್ನು ಹಾಗೆಯೇ ಉಲ್ಲೇಖಿಸಿದೆ. ಇದು ಬಸವಣ್ಣನನ್ನು ಹೊಸ ಬೆಳಕಿನಲ್ಲಿ ಕಂಡಿರುವ ಒಂದು ಪ್ರಯತ್ನ.

ಕೆಲವು ಸಂಗತಿಗಳು ಮತ್ತೆ ಮತ್ತೆ ಆವೃತ್ತವಾಗಿರುವುದು ಅನಿವಾರ್ಯ – ಅದಕ್ಕೆ ನನ್ನ ಕ್ಷಮೆ ಇರಲಿ.

ಈ ಸಂದರ್ಭದಲ್ಲಿ ನಾನು ವಿಶೇಷವಾಗಿ ತುಮಕೂರು ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ. ಎಸ್.ವಿ. ಶರ್ಮ, ಕನ್ನಡ ವಿಭಾಗದ ಮುಖ್ಯಸ್ಥರಾದ ಡಾ. ಡಿ.ವಿ. ಪರಶಿವಮೂರ್ತಿಯವರನ್ನು ಕೃತಜ್ಞತೆಯಿಂದ ಸ್ಮರಿಸಲೇಬೇಕು. ಅವರು

ಆಹ್ವಾನಿಸಿ ಉಪನ್ಯಾಸಕ್ಕೆ ಅವಕಾಶ ಮಾಡಿಕೊಟ್ಟದ್ದೇ ಈ ಕೃತಿ ರೂಪುಗೊಳ್ಳಲು ಪ್ರಮುಖ ಕಾರಣ.

ಈ ಕೃತಿಯನ್ನು ಎಂದಿನಂತೆ ಪ್ರಕಟಿಸಲು ಮುಂದೆ ಬಂದಿರುವ ಸಪ್ನಾ ಬುಕ್ ಹೌಸ್‌ನ ಶ್ರೀ ನಿತಿನ್ ಷಾ ಮತ್ತು ದೊಡ್ಡೆಗೌಡರಿಗೆ ನಾನು ಬಹುವಾಗಿ ಋಣಿಯಾಗಿದ್ದೇನೆ. ಅಕ್ಷರ ಜೋಡಣೆ ಮಾಡಿರುವ ದಿವ್ಯ ಪ್ರಿಂಟ್ರಾನಿಕ್ಸ್‌ನ ಶ್ರೀ ರಾಮಕೃಷ್ಣರಿಗೂ ಸುಂದರವಾಗಿ ಅಚ್ಚುಮಾಡಿರುವ ಪ್ರಿಂಟೆಕ್ ಪ್ರಿಂಟರ್ಸ್‌ನವರಿಗೂ ನಾನು ಕೃತಜ್ಞತೆ ಅರ್ಪಿಸುತ್ತೇನೆ.

ಮೈಸೂರಿನ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಬಹು ಶ್ರದ್ಧೆ ಶ್ರಮಗಳಿಂದ ಸಿದ್ಧಪಡಿಸಿ ಹೊರತಂದಿರುವ "12ನೆಯ ಶತಮಾನದ ಶರಣ ಕ್ಷೇತ್ರಗಳು – ಒಂದು ಸಚಿತ್ರ ಪರಿಚಯ" ಎಂಬ ಮೌಲಿಕ ಗ್ರಂಥವು (2010) ಎಲ್ಲ ಸಾಹಿತ್ಯಾಭಿಮಾನಿಗಳ ಮೆಚ್ಚುಗೆ ಪಡೆದಿದೆ (ಪ್ರಧಾನ ಸಂಪಾದಕ – ಗೊ.ರು. ಚನ್ನಬಸಪ್ಪ; ಸಂಪಾದಕ – ಡಾ. ಬಸವರಾಜ ಮಲಶೆಟ್ಟಿ). ನನ್ನ ಈ ಕೃತಿಯಲ್ಲಿ ಪ್ರಕಟವಾಗಿರುವ ಚಿತ್ರಗಳೆಲ್ಲ ಐದನ್ನು ಬಿಟ್ಟರೆ ಉಳಿದುವೆಲ್ಲ ಆ ಕೃತಿಯಲ್ಲಿನ ಚಿತ್ರಗಳು. ಈ ಕೃತಿಯ ಮೌಲ್ಯವನ್ನು ಹೆಚ್ಚಿಸಿರುವ ಚಿತ್ರಗಳನ್ನು ಬಳಸಿಕೊಳ್ಳಲು ಒಪ್ಪಿಗೆ ನೀಡಿರುವ ಶ್ರೀ ಗೊ.ರು. ಚನ್ನಬಸಪ್ಪನವರಿಗೆ ಬಹುವಾಗಿ ಋಣಿಯಾಗಿದ್ದೇನೆ.

ಬೆಂಗಳೂರು **ಎಂ. ಚಿದಾನಂದಮೂರ್ತಿ**
5.5.2010 (080–23300687)

# ಚಿತ್ರಗಳು

18. ತಂಗಡಗಿ (ಬಿಜಾಪುರ ಜಿಲ್ಲೆ) : ನೀಲಲೋಚನೆ ಗುಡಿ

19. ಬಳ್ಳಿಗಾವೆ (ಶಿವಮೊಗ್ಗ ಜಿಲ್ಲೆ) : ಅಲ್ಲಮಪ್ರಭು ಹುಟ್ಟಿದ ಮನೆಯ ನಿವೇಶನ

20. ಬಸವಕಲ್ಯಾಣ : ಪ್ರಭುದೇವರ ಗದ್ದುಗೆ ಮಠ

21. ಬಸವಕಲ್ಯಾಣ : ಪ್ರಭುದೇವರ ಗದ್ದುಗೆ ಮಠ (ಒಳಾಂಗಣ)

22. ಬಳ್ಳಿಗಾವೆ : ಮಹಾದೇವಿಯಕ್ಕನ ಗುಡಿ

23. ಶ್ರೀಶೈಲ (ಆಂಧ್ರ ಪ್ರದೇಶ) : ಮಲ್ಲಿಕಾರ್ಜುನ ದೇವಾಲಯ

24. ಶ್ರೀಶೈಲ : ಮಹಾದೇವಿಯಕ್ಕನ ಗವಿ

25. ಶ್ರೀಶೈಲ : ಕದಳಿವನದಲ್ಲಿ ಗುಹೆ (ಬಾಳೆಗಿಡಗಳನ್ನು ಗಮನಿಸಿ, ಕದಳಿ=ಬಾಳೆ)

26. ಸೊಲ್ಲಾಪುರ (ಮಹಾರಾಷ್ಟ್ರ) : ಸಿದ್ಧರಾಮ ಕಟ್ಟಿಸಿದ ಕೆರೆ

27. ಬಳ್ಳಿಗಾವೆ ಪಕ್ಕದ ಅನಿಮಿಷಯ್ಯನ ಕೊಪ್ಪಲು : ಅನಿಮಿಷನ ಸಮಾಧಿ ಗದ್ದುಗೆ

28. ಮಸಳಿಕಲ್ಲು (ರಾಯಚೂರು ಜಿಲ್ಲೆ) : ಅಜಗಣ್ಣನ ಗವಿ – ಗುಡ್ಡ

29. ಮಸಳಿಕಲ್ಲು (ರಾಯಚೂರು ಜಿಲ್ಲೆ) : ಮುಕ್ತಾಯಕ್ಕನ ಸಮಾಧಿ ಗುಡಿ

# ಪರಿವಿಡಿ

# 1

# ಲಕುಲೀಶನ 'ನೇರ'(!) ಶಿಷ್ಯರೊಡನೆ ಸಂದರ್ಶನ

1958–60ರಲ್ಲಿ ನಾನು ಪಿಎಚ್.ಡಿ. ಪದವಿಗಾಗಿ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಎಂಬ ವಿಷಯದ ಬಗ್ಗೆ ಅಭ್ಯಸಿಸುತ್ತಿರುವಾಗ ಶಾಸನಗಳಲ್ಲಿ ಬಂದಿರುವ ಲ(ನ)ಕುಲೀಶ ಸನ್ಯಾಸಿಗಳ ಬಗ್ಗೆ ಹೆಚ್ಚು ತಿಳಿಯಲು ಪರಾಮರ್ಶನ ಗ್ರಂಥಗಳನ್ನು ಓದಿದಾಗ ಅವರ ಮೂಲವು ಗುಜರಾತಿನ ವಡೋದರ ಜಿಲ್ಲೆಯ ಕಾಯಾವರೋಹಣ ಎಂಬ ಹಳ್ಳಿ ಎಂದು ತಿಳಿಯಿತು. ಈಚೆಗೆ (2012, ಫೆಬ್ರವರಿ 19ರ ಭಾನುವಾರ, ಶಿವರಾತ್ರಿಯ ಹಿಂದಿನ ದಿನ) ಬೆಂಗಳೂರಿನ ರಜಪೂತ ಮಹಾಸಭಾ ದವರು ಏರ್ಪಡಿಸಿದ್ದ ಪ್ರವಚನ ಸಮಾರಂಭದ ಜಾಹಿರಾತಿನಲ್ಲಿ 'ಶಿವನ ಅವತಾರ ಲಕ್ಕುಲೀಶನ ಶಿಷ್ಯರಾದ ಪೂಜ್ಯ ಶ್ರೀ ಪ್ರೀತಂ ಮುನಿಗಳಿಂದ ಪ್ರವಚನ' ಎಂಬ ಸುದ್ದಿ ಓದಿ, ಅದೇ ದಿನ ರಾತ್ರಿ ಆತ್ಮೀಯ ಡಾ. ಸಿ.ಯು. ಮಂಜುನಾಥ್ ಜೊತೆ ಶ್ರೀ ಪ್ರೀತಂ ಮುನಿಗಳು ಉಳಿದಿದ್ದ ಮನೆಗೇ ಹೋಗಿ ಅವರ ಆಶ್ರಮವಿರುವ ಕಾಯಾವರೋಹಣ ಅಥವಾ ಕಾರೋಣ್ ಊರಿನ ಭಕ್ತರ ಜತೆ ಮತ್ತು ಶ್ರೀ ಪ್ರೀತಂ ಮುನಿಗಳ ಜತೆ ಒಂದು ಗಂಟೆ ಮಾತನಾಡಿ, ಸಂಶೋಧನೆಯ ದೃಷ್ಟಿಯಿಂದ ಮುಖ್ಯವಾದ ಕೆಲವು ಅಪೂರ್ವ ಸಂಗತಿಗಳನ್ನು ಸಂಗ್ರಹಿಸಿದೆ. ಇದನ್ನೆಲ್ಲ ನಮಗೆ ಕೊಟ್ಟಿದ್ದು ಆ ಸ್ವಾಮಿಗಳೇ. ಅದು ಕೆಳಕಂಡಂತಿದೆ.

ಕಾಯಾವರೋಹಣ ಅಥವಾ ಕಾರ್ವಾಣ್ ಗ್ರಾಮದ ಲಕುಲೀಶ್ ಧಾಮ ಎಂಬ ಹೆಸರಿನ ಆಶ್ರಮದಲ್ಲಿ ಈಗಿನ ಪ್ರೀತಂ ಮುನಿಗಳು ವಾಸವಾಗಿದ್ದಾರೆ. ಆ ಆಶ್ರಮಕ್ಕೆ ಸಮೀಪದಲ್ಲೇ ಲಕುಲೀಶನ ವಿಗ್ರಹವಿರುವ ದೇವಾಲಯವಿದೆ. ಶ್ರೀ ಪ್ರೀತಂ ಮುನಿ ಗಳೇ ಹೇಳಿಕೊಂಡಂತೆ ಅವರಿಗೆ ಕ್ರಿ.ಶ. 2007ರ ಜನವರಿಯಲ್ಲಿ ಶಿವನ ಅವತಾರ ಲಕುಲೀಶನೇ ಸ್ವತಃ ಬಂದು ದರ್ಶನ ನೀಡಿ ತನ್ನ ಸಂದೇಶವನ್ನು ಜನರಲ್ಲಿ ಪ್ರಸಾರ ಮಾಡಲು ಆಜ್ಞಾಪಿಸಿದ. ಅವರ ಗುರುಗಳಾದ ರಾಜಋಷಿ ಮುನಿಗಳಿಗೆ 1993ರಲ್ಲಿ, ಅವರ ಗುರು ಕೃಪಾಲು ಮುನಿಗಳಿಗೆ 1956ರಲ್ಲಿ, ಅವರ ಗುರು ಪ್ರಣವ್ ಮುನಿಗಳಿಗೆ 1913ರಲ್ಲಿ ಲಕುಲೀಶನು ಹೀಗೆಯೇ ಆಜ್ಞೆಮಾಡಿದ್ದ. ಎಂದರೆ ಒಂದರ್ಥದಲ್ಲಿ

ಅವರೆಲ್ಲರ ನೇರ ಗುರು ಶಿವನ ಅವತಾರವಾದ ಲಕುಲೀಶನೇ. (ಇದೊಂದು ಅತ್ಯಂತ ರೋಮಾಂಚನಕಾರಿ ಸಂಗತಿ. ಅಂತಹುದನ್ನು ನಾನು ಅನ್ಯತ್ರ ಕೇಳಿಯೂ ಇಲ್ಲ; ಓದಿಯೂ ಇಲ್ಲ.) ಅಂತಹ ಲಕುಲೀಶ ಪರಂಪರೆಯ ಗುರುಗಳು ಕಾವಿಬಟ್ಟೆ ಧರಿಸುತ್ತಾರೆಯೇ ಹೊರತು ಭಸ್ಮಸ್ನಾನ, ಭಸ್ಮಧಾರಣೆ ಮಾಡುವುದಿಲ್ಲ. ಮೈಮೇಲೆ ರುದ್ರಾಕ್ಷಿ ಇತ್ಯಾದಿ ಯಾವುದೇ ಚಿಹ್ನೆ ಧರಿಸುವುದಿಲ್ಲ (ಕೆಲವರು ಭಸ್ಮಧಾರಣೆ ಮಾಡುವ ಸಾಧ್ಯತೆ ಇದೆ). ಅವರೆಲ್ಲರೂ ಧ್ಯಾನ, ಯೋಗ ಸಾಧನೆಯಲ್ಲಿ ಮಗ್ನರು. ಅವರೆಲ್ಲ ಅದ್ವೈತದ ಪ್ರಾಣೋಪಾಸಕರು. ಬಲಗೈಯಲ್ಲಿ ಧರ್ಮದಂಡ (ಅದೇ ಲಕುಟ, ಲಗುಡ=ಚಿಕ್ಕ ದಂಡ ಅಥವಾ ಕೋಲು) ಹಿಡಿದಿರುತ್ತಾರೆ. ಕೆಲವು ವಿಶೇಷ ಸಮಯಗಳಲ್ಲಿ ಅವರು ಎಡಗೈಯಲ್ಲಿ ಮಾತುಲುಂಗ ಅಥವಾ ಮಾದಲದ ಹಣ್ಣು ಹಿಡಿದಿರುತ್ತಾರೆ (ಮಾದಲ=ಹೆಚ್ಚು ಬೀಜವಿರುವ, ಸ್ವಲ್ಪ ಸಿಹಿ ಸ್ವಲ್ಪ ಹುಳಿ ಇರುವ ಹಣ್ಣು). ಎಲ್ಲ ಲಕುಲೀಶ ವಿಗ್ರಹಗಳ ಕೈಯಲ್ಲಿ ಆ ಎರಡೂ ಚಿಹ್ನೆಗಳು ಇರುವುದು ಕಡ್ಡಾಯ. ಆ ವರ್ಗದಲ್ಲಿ ಸನ್ಯಾಸಿನಿಯರು ಇಲ್ಲ. ಯೋಗ ಸಾಧನೆಯಲ್ಲಿ ಅವರು ಆವೇಶದಿಂದ ಗಾಯನ ನೃತ್ಯ ಮಾಡುವುದೂ ಉಂಟು.

ಈ ವರ್ಗದ ಸನ್ಯಾಸಿಗಳಿಗೆ ಭಾರತದ ಎಲ್ಲ ಕಡೆ ಅನುಯಾಯಿಗಳಿದ್ದಾರೆ (ಉದಾ.: ಬೆಂಗಳೂರಿನ ರಜಪೂತ ಕ್ಷತ್ರಿಯ ವರ್ಗದವರು); ಮತ್ತು ಹಲವೆಡೆ ಆಶ್ರಮಗಳಿವೆಯಾದರೂ ಮೂಲ ಆಶ್ರಮ ಗುಜರಾತಿನ ಕಾಯಾವರೋಹಣ ಅಥವಾ ಕಾರ್‍ವಾಣ್‌ನದು. 2ನೇ ಶತಮಾನದ ಲಕುಲೀಶನು ಶಿವನ ನೇರ ಅವತಾರವೆಂದು ಎಲ್ಲರೂ ನಂಬಿದ್ದಾರೆ. ಇದಿಷ್ಟೂ ಆ ಸ್ವಾಮಿಗಳು ಕೊಟ್ಟ ಮಾಹಿತಿ.

## ಕರ್ನಾಟಕದಲ್ಲಿ ಲಕುಲೀಶ ಸನ್ಯಾಸಿಗಳು

ಕ್ರಿ.ಶ. 2ನೇ ಶತಮಾನದಿಂದ ಮುಂದೆ ಭಾರತಾದ್ಯಂತ ಹಬ್ಬಿದ ಲಕುಲೀಶ ಶೈವ ಧರ್ಮವು ಗುಜರಾತಿನಿಂದ ಕರ್ನಾಟಕವನ್ನೂ ಯಾವಾಗಲೋ ಪ್ರವೇಶಿಸಿತು. ಅವರನ್ನು ಲಾಕುಳ ಶೈವರು, ಪಾಶುಪತರು ಎಂದೂ ಕರೆಯುತ್ತಿದ್ದರು. ಕ್ರಿ.ಶ. 700ರ ಕಿಗ್ಗ ಗ್ರಾಮದ (ಕೊಪ್ಪ ತಾಲೂಕು) ಶಾಸನದಲ್ಲಿ ಪಾಶುಪತರ ಹೆಸರು ಬಂದಿದೆ. ಲಕುಲೀಶ ಪಾಶುಪತರಲ್ಲಿ ಪ್ರಸಿದ್ಧರಾಗಿದ್ದ ಶಾಸನೋಕ್ತ ಹಲವರಲ್ಲಿ ಇಲ್ಲಿ ಕೆಲವರ ಹೆಸರುಗಳನ್ನು ಸೂಚಿಸುತ್ತೇನೆ. ರುದ್ರಶಕ್ತಿ (ಕ್ರಿ.ಶ. 1049), ಲಕುಲೀಶ್ವರ ಭಟಾರ (ಕ್ರಿ.ಶ. 908), ಲಕುಲೀಶನ ಅವತಾರ ಪುರುಷನೆಂದೇ ಜನ ನಂಬಿದ್ದ ಚೆಲ್ಲುಕಾರ್ಯ (ಕ್ರಿ.ಶ. 943), ಪರಮತತ್ವಜ್ಞಾನ ಮತ್ತು ಸರ್ವಜ್ಞತ್ವದಲ್ಲಿ ಲಕುಲೀಶನೇ ಆಗಿದ್ದ ವಿಮಳಶಕ್ತಿ ಪಂಡಿತ (ಕ್ರಿ.ಶ. 1024) ಇತ್ಯಾದಿ. ಕಳೇಶ್ (=ನಕುಳೇಶ್) ಎಂಬ ಯೋಗಿಯು ಜಡೆ, ಲಾಕುಳ (ಯೋಗದಂಡ), ಮೇಖಲೆ (ಸೊಂಟಪಟ್ಟಿ) ಉಳ್ಳವನಾಗಿದ್ದ ವ್ಯಕ್ತಿಯಾಗಿದ್ದು ಲಕುಲೀಶ್ವರನ ಬಾಯಿಂದ ಹೊರಟ ಎಲ್ಲ ಶಾಸ್ತ್ರತತ್ವಗಳನ್ನು ಬಲ್ಲವನಾಗಿದ್ದ. ವರ್ಣನೆ ನೋಡಿದರೆ ಇವರೂ ಕೂಡ ಲಕುಲೀಶನ ನೇರ ಶಿಷ್ಯರು!

ಬ್ರಹ್ಮಚಾರಿ ಲಕುಲೀಶ ಶೈವರು ಬಹು ದೊಡ್ಡ ಸಂಸ್ಕೃತ ವಿದ್ವಾಂಸರಾಗಿದ್ದು ಎಲ್ಲ ವೇದ, ಆಗಮ, ಶಾಸ್ತ್ರಗಳನ್ನು ಬಲ್ಲವರಾಗಿದ್ದರು. ದೇವಸ್ಥಾನಗಳ ಶಿವಾರಾಧಕ ರಾಗಿದ್ದ ಅವರು ದೇವಾಲಯಗಳ ಸಮೀಪದ ಆಶ್ರಮಗಳಲ್ಲಿ ಅಥವಾ ದೇವಾಲಯ ಗಳ ಪ್ರಾಂಗಣಗಳಲ್ಲಿ ವಾಸಿಸುತ್ತಿದ್ದರು. ಅವರಿಂದಾಗಿ ಹಲವು ದೇವಾಲಯಗಳು ವಿದ್ಯಾದಾನ ಕೇಂದ್ರಗಳಾಗಿಯೂ ಪರಿಣಮಿಸಿದವು. ಉದಾಹರಣೆಗೆ, 11–12ನೇ ಶತಮಾನಗಳಲ್ಲಿ ಶಿಕಾರಿಪುರ ತಾಲೂಕಿನ ಬಳ್ಳಿಗಾವೆಯು – ವಿಶೇಷವಾಗಿ ಅಲ್ಲಿನ ಕೋಡಿಮಠವು – ಕರ್ನಾಟಕದ ಸಾಂಸ್ಕೃತಿಕ ಕೇಂದ್ರವಾಗಿ ರೂಪುಗೊಳ್ಳಲು ನಕುಲೀಶ ಪಾಶುಪತಿ ಮುನಿಗಳು ಕಾರಣ. ಇವರಲ್ಲಿ ಹಲವರು ಚಾಲುಕ್ಯ ಚಕ್ರವರ್ತಿಗಳಿಗೆ ರಾಜಗುರುಗಳೂ ಆಗಿದ್ದರು. ವಿದ್ಯಾರಾಶಿ ಎಂಬ ಮುನಿಯ ವರ್ಣನೆ ಹೀಗಿದೆ (ಕ್ರಿ.ಶ. 1162) – ಅವನು ದೇಶದ ಎಲ್ಲೆಡೆಗಳಿಂದ ಬಂದ ಅನಾಥರಿಗೆ ಬಡವರಿಗೆ ಅನ್ನದಾನ ವಿನೋದನಾಗಿದ್ದನಂತೆ. ಆಹಾರವನ್ನು ನೀಡುವಲ್ಲಿ ಅವನಿಗೆ ಸಂತೋಷ ವಿತ್ತು. ಬಳ್ಳಿಗಾವೆಯ ಮಠವು ಅನಾಥ ರೋಗಿಗಳಿಗೆ ವೈದ್ಯಕೀಯ ಚಿಕಿತ್ಸೆ ನೀಡುವ ವೈದ್ಯಾಲಯವಾಗಿತ್ತು. ದೀನರು, ಅನಾಥರು, ಕುರುಡರು, ಕುಂಟರು, ಮೂಕರು, ಬಡ ಕಲಾವಿದರು, ಸನ್ಯಾಸಿಗಳಿಗೆ ಅನ್ನದಾನವನ್ನು ನೀಡುತ್ತಿತ್ತು. ಬಳ್ಳಿಗಾವೆ ಸಮೀಪದ ಬನವಾಸಿಯೂ ಕೂಡ ಲಾಕುಳ ಶೈವರ ಕೇಂದ್ರವಾಗಿದ್ದು, ಅಲ್ಲಿಯ ಮಧುಕೇಶ್ವರ ದೇವಾಲಯದ ಉಸ್ತುವಾರಿ ಅವರ ಕೈಯಲ್ಲಿತ್ತು. ಲಕುಲೀಶ ಪಾಶುಪತ ಸನ್ಯಾಸಿಗಳಿಗೆ ಅಪಾರವಾದ ಸಾಮಾಜಿಕ ಕಳಕಳಿಯೂ ಇತ್ತು. ಕ್ರಿ.ಶ. 1336ರಲ್ಲಿದ್ದ ಹಕ್ಕ ಬುಕ್ಕರ ರಾಜಗುರು ಕಾಶೀವಿಲಾಸ ಕ್ರಿಯಾಶಕ್ತಿಯು ಲಾಕುಳ ಸಂಪ್ರದಾಯದವರು. ಅವರ ಗಮನವೆಲ್ಲ ಹೆಚ್ಚಾಗಿ ವಿದ್ವತ್ತು, ತಪಸ್ಸು, ಸಮಾಜದ ಕಡೆ ಇದ್ದಿತಾದರೂ ಅವರೆಲ್ಲರು ಕನ್ನಡದಲ್ಲಿ ಯಾವುದೇ ಕೃತಿ ರಚನೆ ಮಾಡಿದಂತೆ ಕಾಣದು. 14ನೇ ಶತಮಾನದ ಬಳಿಕ ಆ ಪಂಥವು ವೀರಶೈವದಲ್ಲಿ ಲೀನವಾಯಿತು.

### ಆಧುನಿಕ ಕಾರ್ವಾಣ್

ಕಾರ್ವಾಣ್‌ನಲ್ಲಿರುವ ಆಧುನಿಕ ಲಕುಲೀಶ ದೇವಾಲಯದ ನಗ್ನಶಿಲ್ಪದಲ್ಲಿ ಕೈಯಲ್ಲಿ ಕೋಲು, ಹಣ್ಣು ಹಿಡಿದಿರುವುದರ ಜತೆ ಶಿಶ್ನವು ಎದ್ದು ನಿಂತಿರುವುದೂ ಕಾಣಿಸುತ್ತದೆ. ಭಾರತದ ಹಲವೆಡೆ ಇರುವ ಶಿಲ್ಪಗಳಲ್ಲೂ ಹಾಗೇ ಇದೆ. ಮೇಲೆ ಶಿವಲಿಂಗ, ಅದರ ಕೆಳಗೆ ಲಕುಲೀಶ ಮುನಿಯ ಯೋಗಮಗ್ನ ಚಿತ್ರವನ್ನು ನೋಡಬಹುದು. 6–10ನೇ ಶತಮಾನಗಳಲ್ಲಿ ಹಿಂದೂಗಳಿಗೆ ಪವಿತ್ರವಾಗಿದ್ದ ದೇವಾಲಯಗಳನ್ನು ನಾಶಪಡಿಸಿದ ಘಜ್ನಿ ಮಹಮದ್‌ನ ಕಾಲದಿಂದ (11ನೇ ಶ.) 17ನೇ ಶತಮಾನದವರೆಗೆ ನಡೆದ ದೇವಗೃಹ ಧ್ವಂಸ ಕಾರ್ಯಗಳಿಂದಾಗಿ ಕಾಯಾವರೋಹಣದ ನೂರಾರು ದೇವಾಲಯಗಳು ನಾಶವಾದವು. ಕಾಶಿಯಷ್ಟೇ ಪವಿತ್ರವಾಗಿದ್ದ ಮೂಲ ದೇವಸ್ಥಾನವಲ್ಲದೆ, ಹಲವು ಶಿವ ದೇವಸ್ಥಾನಗಳು ನಾಶವಾಗಿ

ಈಗಲೂ ಪೂಜೆಯಿಲ್ಲದ ಹಲವು ಶಿವಲಿಂಗಗಳು ಅಲ್ಲಿವೆ. ಹಲವನ್ನು ಭೂಶೋಧದ ಮೂಲಕ ಹೊರತೆಗೆಯಲಾಗಿದೆ. ಆ ಶಿವಲಿಂಗಗಳ ಮೇಲೆ ಈಗ ಗುಡಿಗಳಿಲ್ಲ. ಕೃಪಾಲು ಮುನಿಗಳಿಂದಾಗಿ 20ನೇ ಶತಮಾನದ ಉತ್ತರಾರ್ಧದಲ್ಲಿ ಹಲವು ದೇವಾಲಯಗಳನ್ನು ಪುನರ್ನಿರ್ಮಿಸಲಾಗಿದೆ. ಅಲ್ಲಿನ ಭಗ್ನ ಸುಂದರ ದೇವಾಲಯ ಗಳು, ಶಿಲ್ಪಗಳು, ಮೂರ್ತಿಗಳು ಅಸಂಖ್ಯಾತ ಹಿಂದೂ ದೇವತಾ ಮೂರ್ತಿಗಳು, ಪ್ರಾಚೀನ ನಾಣ್ಯಗಳು ಇತ್ಯಾದಿಗಳಿಂದಾಗಿ ಕಾಯಾವರೋಹಣವನ್ನು (ಕಾರ್ವಾರ್ಣ್) ವಿಶ್ವಸಂಸ್ಥೆಯು ವಿಶ್ವಪರಂಪರೆ ಪಟ್ಟಿಗೆ (International Heritage Sites) ಸೇರಿಸಿದೆ. ಮುಸ್ಲಿಮರಿಂದಾಗಿ ನಾಶಗೊಂಡ ಹಂಪಿಯನ್ನೂ ಕೂಡ ಅದೇ ವಿಶ್ವ ಪರಂಪರೆ ಪಟ್ಟಿಗೆ ಸೇರಿಸಲಾಗಿದೆ ಎಂಬ ಸಂಗತಿ ಸಂತೋಷ ನೀಡುವುದಾದರೂ ದೇವಾಲಯ ಗಳ ಧ್ವಂಸಕ್ಕೆ ಕಾರಣವಾದ ಪ್ರಚೋದನೆಯು ಅಷ್ಟೇ ತೀವ್ರ ನೋವನ್ನೂ ತರುತ್ತದೆ. ಅದೊಂದು ಭಾರತದ ವ್ಯಥೆಯ ಕತೆ. ಮಧ್ಯ ಭಾರತದ ಒಂದು ಧಾರ್ಮಿಕ ಕೇಂದ್ರವು ಪ್ರಾಚೀನ ಕರ್ನಾಟಕದ ಸಂಸ್ಕೃತಿಯನ್ನು ವರ್ಧಿಸಲು ಕಾರಣವಾಯಿತು ಎಂಬುದನ್ನು ಎತ್ತಿ ಹಿಡಿಯುವುದು ಈ ಲೇಖನದ ಆಶಯ (ಈಗಲೂ ಗೋವೆಯ ಮಂಗೇಶ್ ದೇವಾಲಯದಲ್ಲಿ 'ನಕ್ಲೀಶ' – ಎಂದರೆ, ಲಕುಲೀಶ – ಎಂದು ಕರೆದುಕೊಳ್ಳುವ ಅರ್ಚಕರಿದ್ದಾರೆಂದು ಹಿಂದೆ 'Illustrated Weekly of India' ವಾರಪತ್ರಿಕೆಯೊಂದರಲ್ಲಿ ಓದಿದ್ದೆ).



# 2

# ಶೈವ : ಲಾಕುಳ ಶೈವ ಮತ್ತು ವೀರಶೈವ

ವೇದಗಳ ಕಾಲದಲ್ಲಿ ಬೇರೆ ಬೇರೆ ಎಂದೇ ಭಾವಿಸಲಾಗಿದ್ದ ರುದ್ರ, ಶಿವ ದೇವತೆಗಳು ಮುಂದೆ ಒಂದಾಗಿ ಶಂಭು, ಮಹಾದೇವ, ಈಶ್ವರ, ಮಹೇಶ್ವರ ಇತ್ಯಾದಿ ಹೆಸರುಗಳನ್ನು ಪಡೆದ ಶಿವನು ಭಾರತಾದ್ಯಂತ ಉಪಾಸನಾ ದೈವವಾಗಿ ಪರಿಣಮಿಸಿದ. ಅವನ ಆರಾಧಕರೇ ಶೈವರು, ಅವರ ಧರ್ಮವೇ ಶೈವ ಧರ್ಮ. ಈ ಶೈವ ಧರ್ಮದ ಕೆಲವು ಪ್ರಮುಖ ಶಾಖೆಗಳು ಇವು : ಲಕುಲೀಶ ಪಾಶುಪತ, ಕಾಳಾಮುಖ, ಕಾಪಾಲಿಕ, ಕಾಶ್ಮೀರ ಶೈವ, ಶೈವಸಿದ್ಧಾಂತ (ತಮಿಳುನಾಡು) ಮತ್ತು ವೀರಶೈವ. ಕರ್ನಾಟಕದಲ್ಲಿದ್ದುವೆಂದರೆ ಕಾಳಾಮುಖ, ಲಕುಲೀಶ ಪಾಶುಪತ ಮತ್ತು ಈಗಿನ ವೀರಶೈವ. ಕಾಳಾಮುಖರು ಹಣೆಗೆ ಕಪ್ಪು ಬಣ್ಣದ ಬೊಟ್ಟನ್ನು ಇಡುತ್ತಿದ್ದ ಪಂಥದವರಾಗಿದ್ದು ಇವರೂ 7–12ನೇ ಶತಮಾನಗಳ ಅವಧಿಯಲ್ಲಿ ಲಕುಲೀಶ ಪಾಶುಪತ ವರ್ಗಕ್ಕೆ ಸೇರಿದವರೆಂದು ಹೇಳಬಹುದು. ಭೈರವಾರಾಧಕರಾಗಿದ್ದು ಮನುಷ್ಯನ ತಲೆ ಬುರುಡೆಯಲ್ಲಿ ನೀರನ್ನು ಕುಡಿಯುತ್ತ ಕೊರಳಲ್ಲಿ ತಲೆ ಬುರುಡೆಗಳ ಮಾಲೆಯನ್ನು ಧರಿಸುತ್ತ ನರವಧೆಯನ್ನೂ ಮಾಡುತ್ತಿದ್ದ ಕಾಪಾಲಿಕ ಎಂಬ ಭಯಾನಕ ವರ್ಗದ ಶೈವರೂ ಇದ್ದು ಇಂದು ಭಾರತಾದ್ಯಂತ ಮರೆಯಾಗಿ ಕರ್ನಾಟಕದಲ್ಲಿ ತೀರ ಸೌಮ್ಯರೂಪವನ್ನು ಆಚರಿಸುತ್ತಿರುವ ಕೆಲವರು ಇದ್ದಾರೆ. ಅವರು ಭೈರವನ ಆರಾಧಕರಾಗಿದ್ದು ಮಾಂಸಾಹಾರವನ್ನು ಮಾಡುವವರೇ ಹೊರತು ತಲೆ ಬುರುಡೆ ಹಾರ ಧರಿಸುವುದಿಲ್ಲ; ನರಬಲಿಯ ಆಲೋಚನೆಯೂ ಅವರಲ್ಲಿಲ್ಲ – ಅವರಿಗೇ ಅದು ನೆನಪಿಲ್ಲ.

ಹಿಂದಿನ ಲೇಖನದಲ್ಲಿ ಸೂಚಿಸಿದಂತೆ ಲಕುಲೀಶ ಪಾಶುಪಂಥವು ಲ(ನ)ಕುಲೀಶನಿಂದ ಕ್ರಿ.ಶ. 2ನೇ ಶತಮಾನದಲ್ಲಿ ಸ್ಥಾಪಿತವಾಯಿತು. ಆತ್ಮ, ಈಶ್ವರ ಇವುಗಳನ್ನು ಒಂದಾಗಿಸುವ ಯೋಗಕ್ಕೆ ಇಲ್ಲಿ ಪ್ರಾಮುಖ್ಯವುಂಟು. ಲಕುಲೀಶನ ಮೊದಲ ನಾಲ್ವರು ಶಿಷ್ಯರು ಕುಶಿಕ, ಗಾರ್ಗ್ಯ, ಕೌರುಷ ಮತ್ತು ಮೈತ್ರೇಯ. ಈ ಪಂಥದ ಅನುಯಾಯಿಗಳಿಗೆ 'ಪಶುಪತಿ'ಯೇ ('ಪಶು'ಗಳಿಗೆ, ಸಕಲ ಜೀವಿಗಳಿಗೆ ಒಡೆಯ – Supreme Lord) ಜಗತ್ತಿನ ಕರ್ತೃ, ಸಂರಕ್ಷಕ. ಅವನನ್ನು ಚಿತ್ತದ

ಮೂಲಕ ಒಡಗೂಡುವುದೇ, ಎಂದರೆ ಆತ್ಯಂತಿಕ ಅರಿವೇ 'ಜ್ಞಾನ.' ಭಸ್ಮಧಾರಣೆ, ಭಸ್ಮಸ್ನಾನ ಇವು ಪಾಶುಪತರ ದೈನಂದಿನ ಕಾರ್ಯಗಳು. ಅಹಿಂಸೆ, ಬ್ರಹ್ಮಚರ್ಯ, ಸತ್ಯ, ಅಸಂವ್ಯವಹಾರ, ಶೌಚ, ಆಹಾರಲಾಘವ ಮತ್ತು ಅಪ್ರಮದ ಇವು ಯೋಗಿಯು ಅನುಸರಿಸಬೇಕಾದ ನೀತಿಗಳು. ಅವರಲ್ಲಿ ಬ್ರಹ್ಮಚಾರಿಗಳೂ ಉಂಟು, ವಿವಾಹಿತರೂ ಉಂಟು. ಕೆಲವು ಇಂದ್ರಿಯ ವಿಜಯಿ ಸನ್ಯಾಸಿಗಳು ನಗ್ನರಾಗಿದ್ದುದೂ ಉಂಟು. "ಓಂ ನಮಃ ಶಿವಾಯ" ಅವರ ಪವಿತ್ರ ಜಪ. ಅವರು ಸ್ಫಟಿಕ ಲಿಂಗವನ್ನು ಪೂಜಿಸುತ್ತಾರೆ. ಅದನ್ನು ವೇದಿಕೆಯ ಮೇಲೆ ಇಟ್ಟು ಪೂಜಿಸುತ್ತಾರೆ. ಕೆಲವು ಪಾಶುಪತ 'ವ್ರತಿ'ಗಳು (ಸನ್ಯಾಸಿಗಳು) ಅದನ್ನು ದೇಹದ ಮೇಲೆ ಧರಿಸಿ ಸಂಚರಿಸುತ್ತಿದ್ದರು. ಪಾಶುಪತ ವ್ರತಿಯು ಸದಾ ಲಿಂಗಸಂಗಿಯಾಗಿರುತ್ತಿದ್ದ. ಅಂತಹ 'ಪ್ರಾಣಲಿಂಗ'ವನ್ನು ತೋಳು, ತಲೆ ಅಥವಾ ಜಡೆಯಲ್ಲಿ ಧರಿಸುತ್ತಿದ್ದರು.

ಲಕುಲೀಶ ಪಾಶುಪತವು ಕ್ರಿ.ಶ. 6ರಿಂದ 14ನೇ ಶತಮಾನಗಳವರೆಗೆ ಕರ್ನಾಟಕಾದ್ಯಂತ ಪ್ರಚಲಿತವಾಗಿತ್ತು. ಬಾದಾಮಿ ಸಮೀಪದ ಮಹಾಕೂಟದಲ್ಲಿ ಲಕುಲೀಶನ ಗುಡಿ ಇದೆ–ಅದು ಬಾದಾಮಿ ಚಾಲುಕ್ಯರ ಕಾಲದ ಒಂದು ಪವಿತ್ರ ಕ್ಷೇತ್ರ. ಪಟ್ಟದಕಲ್ಲಿನ ಗುಡಿಗಳಲ್ಲಿ ಲಕುಲೀಶನ ವಿಗ್ರಹಗಳಿವೆ. ಎಲ್ಲೋರದಲ್ಲಿಯೂ ಲಕುಲೀಶನ ವಿಗ್ರಹವಿದೆ.

ಲಕುಲೀಶ ಪಾಶುಪತರು ಹಲವು ದೇವಾಲಯಗಳನ್ನು ನಿರ್ಮಿಸಿದ್ದಾರೆ. ಅವುಗಳಲ್ಲಿ ಹಲವು ವಿದ್ಯಾಕೇಂದ್ರಗಳೂ ದೀನರಿಗೆ ಅನಾಥರಿಗೆ ರೋಗಿಗಳಿಗೆ ಆಶ್ರಯ ಸ್ಥಾನಗಳೂ ಆಗಿದ್ದುವು. ಬಹುದೊಡ್ಡ ವಿದ್ವಾಂಸರಾಗಿದ್ದ ಅವರು ದೇವಾಲಯಗಳನ್ನೇ ವಿದ್ಯಾಕೇಂದ್ರಗಳನ್ನಾಗಿ ಪರಿವರ್ತಿಸಿ ಅಲ್ಲಿ ವಿದ್ಯಾರ್ಥಿಗಳಿಗೆ ಜ್ಞಾನಬೋಧನೆ ಮಾಡುತ್ತಿದ್ದರು. ವಿಶೇಷವಾಗಿ 10–12ನೇ ಶತಮಾನಗಳಲ್ಲಿ ಅವರು ಕರ್ನಾಟಕ ಸಂಸ್ಕೃತಿಯ ಬೆಳವಣಿಗೆಗೆ ನೀಡಿದ ಕೊಡುಗೆ ಅವಿಸ್ಮರಣೀಯ. ಮಹಾಕೂಟ, ಬಳ್ಳಿಗಾವೆ, ಬನವಾಸಿ, ಚಿತ್ತಾಪುರ ತಾಲೂಕಿನ ನಾಗಾಯಿ ಇತ್ಯಾದಿಗಳು ಅವರ ಪ್ರಮುಖ ಕೇಂದ್ರಗಳಾಗಿದ್ದುವು.

ಅವರಲ್ಲಿ ಹಲವರು ರಾಜಗುರುಗಳೂ ಆಗಿದ್ದರು. ಹಕ್ಕ ಬುಕ್ಕರು ಕ್ರಿ.ಶ. 1336ರಲ್ಲಿ ವಿಜಯಪುರ ಸಾಮ್ರಾಜ್ಯವನ್ನು ಸ್ಥಾಪಿಸಿದ್ದು ಒಂದು ಅವಿಸ್ಮರಣೀಯ ಚಾರಿತ್ರಿಕ ಘಟನೆ. ಅಂತಹ ಹಕ್ಕ ಬುಕ್ಕರ 'ರಾಜಗುರು'ಗಳು ಕಾಶೀವಿಲಾಸ ಕ್ರಿಯಾಶಕ್ತಿ ಒಬ್ಬ ಲಕುಲೀಶ ಪಾಶುಪತ (ಕಾಳಾಮುಖ) ಸಂಪ್ರದಾಯದ ಗುರು. ಅವನೇ ಆ ಸಂಪ್ರದಾಯದ ಕೊನೆಯ ದೊಡ್ಡ ಹೆಸರು ಎಂದು ಹೇಳಬಹುದು. (ಮೇಲಿನ ಮಾಹಿತಿಗೆ ಆಕರ : Karnataka through the Ages; Vasundhara Filliozat : Kalamukha and Pashupata Temples in Dharwar; Swami Harshananda : A Concise Encyclopaedia of Hinduism; ಎಂ. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ.)

ಹದಿನಾಲ್ಕನೇ ಶತಮಾನದ ಬಳಿಕ ಲಕುಲೀಶ ಪಾಶುಪತವು ವೀರಶೈವದಲ್ಲಿ ವಿಲೀನವಾಯ್ತು. ಲಕುಲೀಶ ಪಾಶುಪತವೇ ಮುಂದೆ ವೀರಶೈವ ಎನ್ನಿಸಿಕೊಂಡಿತು ಎಂಬ ವಿವರಣೆ ಸರಿಯಾದುದಲ್ಲ. ವೀರಶೈವದ ಉಗಮದ ಚರಿತ್ರೆ ಇನ್ನೂ ನಿಗೂಢ – ಅದು ಮುಂದಿನ ಬರಹಗಳಲ್ಲಿ ಸ್ಪಷ್ಟವಾಗುತ್ತದೆ. ಲಕುಲೀಶ ಪಾಶುಪತಕ್ಕೂ ವೀರಶೈವಕ್ಕೂ ಕೆಲವು ದಟ್ಟ ಹೋಲಿಕೆಗಳು ಇವೆ; ಭಿನ್ನತೆಗಳೂ ಇವೆ. ಎರಡೂ ಶಿವ ಕೇಂದ್ರಿತ ಧರ್ಮಗಳು, ಶೈವ ಧರ್ಮಗಳು. ಪಾಶುಪತರು ದೇವಾಲಯ ಲಿಂಗವನ್ನು ಪೂಜಿಸಿದರೂ, ಮೈಮೇಲೆ ಅದರ ಸಂಕ್ಷಿಪ್ತ ರೂಪವನ್ನೂ ಧರಿಸುತ್ತಿದ್ದರು. ವೀರಶೈವರು ದೇವಾಲಯದ ಶಿವಲಿಂಗ ಪೂಜೆಗೆ ವಿರೋಧಿಗಳಲ್ಲದಿದ್ದರೂ* ಅವರು ಹೆಚ್ಚು ಒತ್ತು ಕೊಡುವುದು ಇಷ್ಟಲಿಂಗ ಧಾರಣೆಗೆ. ಪಾಶುಪತದಲ್ಲಿ ಜ್ಞಾನಕ್ಕೆ, ಸಾಂಪ್ರದಾಯಕ ಪುಸ್ತಕ ವಿದ್ಯೆಗೆ, ಶಾಸ್ತ್ರೋಕ್ತ ಪೂಜೆಗಳಿಗೆ ಮಹತ್ವ; ಅಲ್ಲಿ ಜಾತಿಭೇದಕ್ಕೆ ಅವಕಾಶವಿತ್ತು. ವೀರಶೈವದಲ್ಲಿ ಭಕ್ತಿಗೆ ಹೆಚ್ಚು ಮಹತ್ವ; ಜಾತಿಭೇದಕ್ಕೆ ಅಲ್ಲಿ ಅವಕಾಶವಿರಲಿಲ್ಲ. ದೇವಸ್ಥಾನ ಪ್ರವೇಶಕ್ಕೆ ಕೆಳವರ್ಗದವರಿಗೆ ಅವಕಾಶವಿರಲಿಲ್ಲ, ಪಾಶುಪತರ ದೇವಾಲಯಗಳಲ್ಲಿ. ವೀರಶೈವರದು ಇಷ್ಟಲಿಂಗಾರಾಧನೆಯಾದ್ದರಿಂದ ಅಲ್ಲಿ ದೇವಾಲಯದ ಪ್ರವೇಶದ ಪ್ರಶ್ನೆಯೇ ಇರಲಿಲ್ಲ – ಎಲ್ಲ ಜಾತಿಯವರೂ ಲಿಂಗ ಧಾರಣೆ ಮಾಡಿಕೊಂಡು ತಮ್ಮ ಮನೆಗಳಲ್ಲಿ ಇಷ್ಟಲಿಂಗದ ಪೂಜೆ ಮಾಡಿಕೊಂಡಿರಲು ಅವಕಾಶವಿತ್ತು. ಸ್ಥೂಲವಾಗಿ ಇದು ವೀರಶೈವವು ಒಂದು ಪ್ರಬಲಶಕ್ತಿಯಾಗಿ ಬೆಳೆಯಲು ಅವಕಾಶವಾಯಿತು. ಬಸವನ ನೇತೃತ್ವದ ಶರಣ ಚಳವಳಿಯು ಹನ್ನೆರಡನೆಯ ಶತಮಾನದಲ್ಲಿ ಹೆಚ್ಚಿನ ಶಕ್ತಿಯನ್ನು ಪಡೆದುಕೊಂಡು ಬೆಳೆದು ಬ್ರಾಹ್ಮಣರೂ ಸೇರಿದಂತೆ ಎಲ್ಲ ವರ್ಗದ ಜನರನ್ನೂ ತನ್ನತ್ತ ಸೆಳೆದುದೇ ಅದು ಪ್ರಬಲವಾಗಲು, ಪಾಶುಪತ ಶೈವ ಧರ್ಮವು ಕ್ಷೀಣಿಸುತ್ತ ಹೋಗಲು ಕಾರಣವಾಗಿರುವಂತಿದೆ. ಎರಡೂ ಶೈವ ಧರ್ಮಗಳೇ ಆದರೂ, ಎರಡಕ್ಕೂ ಸಾಮ್ಯತೆ ಇರುವಂತೆ ಭಿನ್ನತೆಯೂ ಇದೆ; ಅವೆರಡೂ ಒಂದೇ ಶೈವ ಧರ್ಮದ ಎರಡು ಶಾಖೆಗಳು – ಲಕುಲೀಶ ಪಾಶುಪತವು ಕ್ರಿಶ್ಚಿಯನ್ ಧರ್ಮದ ರೋಮನ್ ಕ್ಯಾಥೋಲಿಕ್ ಪಂಗಡ ವಿದ್ದಂತೆ; ಇನ್ನೊಂದು, ಎಂದರೆ ವೀರಶೈವವು ಪ್ರಾಟೆಸ್ಟೆಂಟ್ ಪಂಗಡವಿದ್ದಂತೆ.

ಪ್ರಾಸಂಗಿಕವಾಗಿ ಒಂದು ಪ್ರಮೇಯವನ್ನು ಇಲ್ಲಿ ಪ್ರಸ್ತಾಪಿಸುತ್ತೇನೆ. ಮೊದಲು

---

* ಹನ್ನೆರಡನೆಯ ಶತಮಾನದ ಶರಣರು ಸ್ಥಾವರಲಿಂಗ ವಿರೋಧಿಗಳು ಎಂಬ ಕಲ್ಪನೆ ಸರಿಯಲ್ಲ. ಅವರು ಸ್ಥಾವರಲಿಂಗ ವಿರೋಧಿಗಳಾಗಿದ್ದರೆ ಸ್ಥಾವರಲಿಂಗ ಕೇಂದ್ರಗಳಾದ ಕೂಡಲಸಂಗಮ, ಶ್ರೀಶೈಲ ಇತ್ಯಾದಿ ಕಡೆಗಳಲ್ಲಿ ಬಸವ, ಅಕ್ಕಮಹಾದೇವಿ, ಅಲ್ಲಮ ತಮ್ಮ ಕೊನೆಯ ದಿನಗಳನ್ನು ಕಳೆಯಲು ಅಲ್ಲಿಗೆ ಹೋಗುತ್ತಿರಲಿಲ್ಲ. ಜನರು 'ಕಟ್ಟಿದ ಲಿಂಗ'ವನ್ನು ಉಪೇಕ್ಷೆ ಮಾಡುತ್ತಿದ್ದಾರೆಂದು 'ಬೆಟ್ಟದ ಲಿಂಗ'ಕ್ಕೆ ಹೆಚ್ಚು ಮಹತ್ವ ನೀಡುತ್ತಿದ್ದಾರೆಂಬುದನ್ನು ವಿರೋಧಿಸಲು ಕೆಲವು ವಚನಕಾರರು ಸ್ಥಾವರಲಿಂಗ ಪೂಜೆ ಅಷ್ಟು ಸರಿಯಲ್ಲ ಎಂದರು; ಆದರೆ ಅವರು ಸ್ಥಾವರಲಿಂಗ ವಿರೋಧಿಗಳಲ್ಲ.

ಇದ್ದುದು ದೇವಾಲಯಗಳ ಸ್ಥಾವರಲಿಂಗಗಳೇ. ಅವುಗಳನ್ನು ಶ್ರದ್ಧೆಯಿಂದ ದಿನವೂ ಪೂಜೆ ಮಾಡುತ್ತಿದ್ದವರು ಬೇರೆ ಊರುಗಳಿಗೆ ಹೋದರೆ ತಮ್ಮ ಆರಾಧ್ಯ ಮೂರ್ತಿಯ ಪೂಜೆಯಿಂದ ವಂಚಿತರಾಗುತ್ತಿದ್ದರು. ಹಾಗಾಗಿ ಅವರು ತಮ್ಮ ಆರಾಧ್ಯ ಮೂರ್ತಿಯ ಸಂಕ್ಷಿಪ್ತವಾದ ಮೂರ್ತಿಯನ್ನು ತಮ್ಮ ಜೊತೆ ಚೀಲದಲ್ಲೋ ಬುಟ್ಟಿಯಲ್ಲೋ ಒಯ್ದು, ತಾವು ಇಳಿದುಕೊಂಡಿದ್ದ ಜಾಗದಲ್ಲಿ ಪೂಜಿಸಿ ಮತ್ತೆ ಹಿಂದಕ್ಕೆ ತರುತ್ತಿದ್ದರು; ಮನೆಯಲ್ಲಿ ಇಟ್ಟುಕೊಂಡು ಪೂಜಿಸುತ್ತಿದ್ದರು. ಈಗಲೂ ಕಾಶಿ, ಶ್ರೀಶೈಲದಂತಹ ಪುಣ್ಯ ಕ್ಷೇತ್ರಗಳಿಗೆ ಹೋದವರು ಅಲ್ಲಿಂದ ಚಿಕ್ಕ ಮೂರ್ತಿಗಳನ್ನು ತಂದು ತಾವಿದ್ದಲ್ಲಿ ಸ್ಥಾಪಿಸುತ್ತಾರೆ. ಚೀಲ, ಬುಟ್ಟಿಗಳಲ್ಲಿ ಒಯ್ಯುವುದಕ್ಕಿಂತ ಸುಲಭವಾದ ಮಾರ್ಗ – ಆ ಚಿಕ್ಕ ಮೂರ್ತಿಗಳನ್ನು ಇನ್ನೂ ಚಿಕ್ಕದಾಗಿಸಿ ಅವನ್ನು ಬಟ್ಟೆಯಲ್ಲಿ ಸುತ್ತಿ ಕೊರಳಿಗೆ ಅಥವಾ ತೋಳಿಗೆ ಕಟ್ಟಿಕೊಳ್ಳಬಹುದು – ಅವೇ ಈಗಿನ ಇಷ್ಟಲಿಂಗಗಳು. ಆ ಇಷ್ಟಲಿಂಗಗಳ ಮೇಲೆ 'ಕಂತೆ' ಕಟ್ಟಿಸುತ್ತಿದ್ದರು – ಎಡಗೈಯಲ್ಲಿ ಹಿಡಿದುಕೊಂಡು ಪೂಜಿಸಲು ಅನುಕೂಲವಾಗುವಂತೆ. ಅದನ್ನು ಹೀಗೆ ತೋರಿಸಬಹುದು : ದೊಡ್ಡ ಸ್ಥಾವರಲಿಂಗ → ಬುಟ್ಟಿಯಲ್ಲಿ ಹೊತ್ತು ಒಯ್ಯಬಹುದಾದ ಅದರ ಪ್ರತಿಕೃತಿಯಾದ ಚಿಕ್ಕ ಲಿಂಗ → ಬಟ್ಟೆಯಲ್ಲಿಟ್ಟು ಕಟ್ಟಿ ಕೊರಳಿನಲ್ಲಿ ಕಟ್ಟಿಕೊಳ್ಳಬಹುದಾದ ಇನ್ನೂ ಚಿಕ್ಕ ಲಿಂಗ. ಇದೇ ಇಷ್ಟಲಿಂಗ. ಕಂತೆ ಬಿಗಿದ ಇಷ್ಟಲಿಂಗದ ಒಳಗಿನ ಚಿಕ್ಕ ಲಿಂಗಮೂರ್ತಿಯೇ ಅದರ ಮುಖ್ಯವಾದ ಭಾಗ. ಕಂತೆ ಎನ್ನುವುದು ಒಂದು ರೀತಿ ಮನುಷ್ಯ ಹೊದೆದ ಬಟ್ಟೆಯಂತೆ. ಆಕಾರದಲ್ಲಿ ಮೂಲ ಸ್ಥಾವರಲಿಂಗಕ್ಕೂ ಇಷ್ಟಲಿಂಗದ ಒಳಗಿನ ಪುಟ್ಟ ಲಿಂಗಕ್ಕೂ ಯಾವುದೇ ವ್ಯತ್ಯಾಸವಿಲ್ಲ.

ದೇವಾಲಯದ ಸ್ಥಾವರಲಿಂಗ ಪೂಜೆಗೆ ಅರ್ಚಕರ ಅನುಮತಿ ಬೇಕು; ಅದೂ ದಿನವಿಡೀ ತೆರೆದಿರುವುದಿಲ್ಲ; ಮತ್ತು ಭಕ್ತರೇ ಮೂರ್ತಿ ಪೂಜೆಯನ್ನು ನೇರವಾಗಿ ಮಾಡುವಂತಿಲ್ಲ, ಅರ್ಚಕರ ಮೂಲಕ ಮಾಡಿಸಬೇಕು, ಮತ್ತು ಎಲ್ಲರಿಗೂ ಒಳಕ್ಕೆ ಪ್ರವೇಶವಿಲ್ಲ. ಇಷ್ಟಲಿಂಗ ಪೂಜೆಯಾದರೆ ಅದು ವ್ಯಕ್ತಿಗೆ ಬಿಟ್ಟಿದ್ದು; ಅದಕ್ಕೆ ನಿರ್ದಿಷ್ಟ ಕಾಲ ಎಂಬುದಿಲ್ಲ; ಯಾರು ಬೇಕಾದರೂ ತನ್ನ ಇಷ್ಟಲಿಂಗ ಪೂಜೆಯನ್ನು ಏಕಾಂತ ದಲ್ಲಿ ಮಾಡಬಹುದು. ಕೆಲವು ನಿರ್ದಿಷ್ಟ ವಿಧಿ ನಿಯಮಗಳಿಗೊಳಗಾಗಿದ್ದ ಶೈವ ಧರ್ಮದಿಂದ ಭಿನ್ನವಾದ ನಿಲುವನ್ನು ತಾಳಿದ ಲಿಂಗಾಯತ ಅಥವಾ ವೀರಶೈವವು ಎಂದು ಬೇರೆಯಾಯಿತೋ ಕಾಲವನ್ನು ನಿಗದಿಪಡಿಸುವುದು ಕಷ್ಟ. ಅದರ ಸ್ಥಾಪಕರು ಯಾರೋ ತಿಳಿಯದು. ವೀರಶೈವದ ಪ್ರಾಚೀನತೆಯು ಕ್ರಿಸ್ತಶಕ ಹನ್ನೊಂದನೆಯ ಶತಮಾನಕ್ಕಿಂತ ಹಿಂದಕ್ಕೆ ಹೋಗುತ್ತದೆ.



# 3

# ವಚನಕಾರರು ಮತ್ತು ಕಾಳಾಮುಖಿ–ಪಾಶುಪತರು

ವಚನಕಾರರು ಒಟ್ಟು ಆರು ಬಗೆಯ 'ದರ್ಶನ'ದವರನ್ನು, ಅರ್ಥಾತ್ ತತ್ವ ಶಾಸ್ತ್ರದ ಅನುಯಾಯಿಗಳನ್ನು ಗುರುತಿಸುತ್ತಾರೆ – ಶೈವ, ಪಾಶುಪತಿ, ಕಾಳಾಮುಖಿ, ಮಹಾವ್ರತಿ, ಸನ್ಯಾಸಿ, ಕಾಪಾಲಿ – ಇವು "ಆರು ಭಕ್ತಸ್ಥಲಕ್ಕೆ ಸಲ್ಲವು" ಎನ್ನುತ್ತಾನೆ ಚನ್ನಬಸವಣ್ಣ (ವ. 597).* ಅದೇ ಚನ್ನಬಸವಣ್ಣ ಯೋಗಿ, ಜೋಗಿ, ಶ್ರವಣ, ಸನ್ಯಾಸಿ, ಕಾಳಾಮುಖಿ, ಪಾಶುಪತಿ ಇವರು "ಷಡುದರ್ಶನ ಶೈವ ಕರ್ಮಿಗಳು" ಎನ್ನುತ್ತಾನೆ (ವ. 1170; ವ. 593). ಹಡಪದ ಅಪ್ಪಣ್ಣನೂ ಕೂಡ ಯೋಗಿ, ಜೋಗಿ, ಶ್ರವಣ, ಸನ್ಯಾಸಿ, ಕಾಳಾಮುಖಿ, ಪಾಶುಪತಿಯರನ್ನು 'ಷಡ್ದರ್ಶನ' ಅನುಯಾಯಿಗಳು ಎಂದು ಹೆಸರಿಸುತ್ತಾನೆ (ವ. 1018). ಅಲ್ಲಮಪ್ರಭು (ವ. 792), ಜಕ್ಕಣಯ್ಯ ಇವರೂ ಕೂಡ ಅದೇ ಆರು ದರ್ಶನಗಳನ್ನು ಹೆಸರಿಸುತ್ತಾರೆ. ಎಲ್ಲರ ಏಕಾಭಿಪ್ರಾಯವೆಂದರೆ ಕಾಳಾಮುಖರು ಪಾಶುಪತರು ಇವರು ಶೈವ ಧರ್ಮದ ಎರಡು ಭಿನ್ನ ವರ್ಗಗಳಿಗೆ ಸೇರಿದವರು. ಒಂದು ವಿಷಯದಲ್ಲಿ ಎಲ್ಲ ವಚನಕಾರರ ಏಕಾಭಿಪ್ರಾಯವೆಂದರೆ, ಅವರೆಲ್ಲರೂ "ಶೈವಕರ್ಮಿಗಳು", ಆ ದರ್ಶನಗಳೆಲ್ಲವೂ "ಭಕ್ತಿ ಸ್ಥಲಕ್ಕೆ ಸಲ್ಲವು" – ನಿಜವಾದ ಶಿವಭಕ್ತರು (=ವೀರಶೈವರು) ಅವರನ್ನು "ಅನಾಮಿಕ"ರಂತೆ ಕಡೆಗಣಿಸ ಬೇಕು, ಅವರ ಮುಖಗಳನ್ನೂ ನೋಡಕೂಡದು. ಶೈವರಿಗೆ ಸಿದ್ಧರಾಮನ ಪ್ರಕಾರ, "ವಿಭೂತಿ, ರುದ್ರಾಕ್ಷಿ, ಪಂಚಾಕ್ಷರ" ಇವುಗಳ ರಹಸ್ಯ ತಿಳಿಯದು. ಅವರನ್ನು ಮನೆಯ ಅಂಗಳಕ್ಕೆ ಕೂಡ ಬಿಟ್ಟುಕೊಳ್ಳಬಾರದು ಎನ್ನುತ್ತಾನೆ ಅಲ್ಲಮ (ವ. 913). ಪಾಶುಪತರು ಕೈಯಲ್ಲಿ "ಲಾಕುಳ" ಹಿಡಿದಿರುತ್ತಿದ್ದ ಸೂಚನೆ ಸಕಲೇಶ ಮಾದರಸನಲ್ಲಿದೆ (ವ. 471). ದಾಸೋಹದ ಸಂಗಣ್ಣ ಎಂಬ ವಚನಕಾರನ ಅಂಕಿತ "ಮಾತುಳುಂಗ ಮಧುಕೇಶ್ವರ"; ಅವನು ಬನವಾಸಿಯ ಮಧುಕೇಶ್ವರ ದೇವರ ಭಕ್ತನಾಗಿದ್ದ. "ಮಾತುಳುಂಗ" ಎಂಬ ಮಾತು ಆ ಮಧುಕೇಶ್ವರ ದೇವಾಲಯವು ಲಕುಲೀಶ ಪಾಶುಪತರ ಕೇಂದ್ರವಾಗಿದ್ದಿ ತೆಂಬುದನ್ನು ಸೂಚಿಸುತ್ತದೆ.

---

* ವಚನಗಳು ವಚನಸಾಹಿತ್ಯದ ಸಮಗ್ರ ಸಂಪುಟಗಳ ಎರಡನೆಯ ಆವೃತ್ತಿಯಲ್ಲಿನ ಸಂಖ್ಯೆ ಗಳನ್ನು ಸೂಚಿಸುತ್ತವೆ.

ಒಂದಂತೂ ಸ್ಪಷ್ಟ – ಪಾಶುಪತ ಶೈವರು, ಹಿಂದೆಯೇ ಸೂಚಿಸಿದಂತೆ, ಶಿವಾರಾಧಕರಾಗಿದ್ದರೂ ಯೋಗಕ್ಕೆ, ದೇವಾಲಯದ ಶಾಸ್ತ್ರೋಕ್ತ ಪೂಜಾವಿಧಿಗಳಿಗೆ ಬದ್ಧರಾಗಿದ್ದು ಭಕ್ತಿಗೆ ಹೆಚ್ಚಿನ ಪ್ರಾಶಸ್ತ್ರ ನೀಡುತ್ತಿರಲಿಲ್ಲ. ಆ ಕಾರಣ ಅದು ದೇವಾಲಯ ಮಠಗಳಿಗೆ ಮಾತ್ರ ಸೀಮಿತವಾಗಿತ್ತು; ಮತ್ತು ಲಕುಲೀಶ ಪಾಶುಪತರು ಆಗಲೇ ಸಿದ್ಧವಾಗಿದ್ದ ಸಂಸ್ಕೃತದಲ್ಲಿ ಪಾಂಡಿತ್ಯವನ್ನು ಪಡೆದಿದ್ದರೇ ಹೊರತು ತಮ್ಮ ಅನುಭವ ಗಳನ್ನು ತಮ್ಮ ಭಾಷೆಯಲ್ಲಿ–ಕನ್ನಡದಲ್ಲಿ ವ್ಯಕ್ತಪಡಿಸುವ ಕಾರ್ಯಕ್ಕೆ ಕೈಹಾಕಲಿಲ್ಲ. ಅವರಲ್ಲಿ ಸಾಂಪ್ರದಾಯಕ ಜಾತಿಭೇದಕ್ಕೆ ಅವಕಾಶವಿತ್ತು; ಮತ್ತು ಆ ಮತ ಇಡೀ ದಕ್ಷಿಣ ಭಾರತದಲ್ಲಿ ಪ್ರಚಲಿತವಾಗಿತ್ತು. ಹನ್ನೊಂದನೇ ಶತಮಾನಕ್ಕಿಂತ ಹಿಂದೆ ಪ್ರಗತಿಪರ ಅಂಶಗಳನ್ನೊಳಗೊಂಡಿದ್ದ ಮತ್ತು ಕೆಲವೇ ಅನುಯಾಯಿಗಳನ್ನು ಪಡೆದಿದ್ದ ವೀರಶೈವದ ಶ್ರೇಷ್ಠತೆಯನ್ನು ಗುರುತಿಸಿ ತನ್ನ ಹುಟ್ಟು ಬ್ರಾಹ್ಮಣ್ಯವನ್ನು ತ್ಯಜಿಸಿ ವೀರಶೈವ ನಾದ ಬಸವಣ್ಣನ ನಡೆ, ನುಡಿಗಳಿಂದಾಗಿ ವೀರಶೈವವು ಪಾಶುಪತ ಕಾಳಾಮುಖವನ್ನು ಹಿಂದಿಕ್ಕಿ ಬೆಳೆಯಿತು; ಜನಪ್ರಿಯವಾಯ್ತು. ಲಿಂಗಾಯತರ ಜನಸಂಖ್ಯೆ ಹೆಚ್ಚಾಯ್ತು, ಎಲ್ಲ ವರ್ಗದವರೂ ಆ ಮಾರ್ಗವನ್ನು ಒಪ್ಪಿಕೊಂಡದ್ದರಿಂದ ಅವರ ಸಂಖ್ಯೆ ಹೆಚ್ಚುತ್ತ ಬಂದು ಲಕುಲೀಶ ಪಾಶುಪತರ ಸಂಖ್ಯೆ, ಪ್ರಾಬಲ್ಯ ಕ್ಷೀಣಿಸುತ್ತ ಬಂದಿತು. ಕ್ರಮೇಣ ಅದು ಹದಿಮೂರನೇ ಶತಮಾನದ ಬಳಿಕ ವೀರಶೈವದಲ್ಲಿ ವಿಲೀನವಾಯ್ತು.

ಈ ಬಗ್ಗೆ ಶಾಸನಗಳು, ವಚನ ವಾಙ್ಮಯ, ಇತರ ಪುರಾಣ ಇತ್ಯಾದಿ ಕೃತಿ ಗಳಿಂದ ಮಾಹಿತಿ ಸಂಗ್ರಹಿಸಿ ಒಂದು ಸಮಗ್ರ ಚಿತ್ರವನ್ನು ನೀಡುವ ಕೆಲಸ ಆಗ ಬೇಕಾಗಿದೆ. 'ಯೋಗಿ', 'ಜೋಗಿ', 'ಸನ್ಯಾಸಿ', 'ಕಾಳಾಮುಖಿ', 'ಪಾಶುಪತಿ' ಇವು ಗಳಿಗಿದ್ದ ಸೂಕ್ಷ್ಮ ವ್ಯತ್ಯಾಸಗಳನ್ನು ಗುರುತಿಸುವ ಕೆಲಸ ಕೂಡ ನಡೆಯಬೇಕು.

ಇಷ್ಟಂತೂ ನಿಜ – ವೀರಶೈವವು ಪಾಶುಪತಕ್ಕಂತ ಭಿನ್ನವಾದ ಶೈವ ಶಾಖಾ ಧರ್ಮವಾಗಿದ್ದು ಅದರ ಇತಿಹಾಸ ಹನ್ನೊಂದನೇ ಶತಮಾನಕ್ಕಿಂತ ಹಿಂದಕ್ಕೆ ಹೋಗುತ್ತದೆ. ಅದರ ವಿವರಗಳು ಮುಂದಿನ ಪುಟಗಳಲ್ಲಿವೆ.



# 4

# "ವೀರಶೈವ"ದ ಅತ್ಯಂತ ಪ್ರಾಚೀನ ತೇದಿಯುಕ್ತ ದಾಖಲೆ

ಕ್ರಿ.ಶ. 1160ರ ಬಸವಣ್ಣನವರ ವಚನಗಳಲ್ಲಿ "ವೀರಶೈವ"ದ ಉಲ್ಲೇಖ ಹಲವು ಕಡೆ ಬಂದಿದೆ. ಶೈವರಾಗಿದ್ದ ತಾವು ವೀರಶೈವ "ಭಕ್ತಿ" ಪರಿಕಲ್ಪನೆಗೆ ಮನಸೋತು ವೀರಶೈವನಾದೆನೆಂದು ಹೇಳಿಕೊಂಡಿದ್ದಾರೆ (ವ. 1098. "ಎನ್ನ ಬಂದ ಭವಂಗಳನು ಪರಿಹರಿಸಿ, ಎನಗೆ ಭಕ್ತಿ ಘನವನೆತ್ತಿ ತೋರಿ, ಎನ್ನ ಹೊಂದಿದ ಶೈವಮಾರ್ಗಂಗಳನತಿ ಗಳೆದು ನಿಜ ವೀರಶೈವಾಚಾರವನರುಹಿ ತೋರಿ..."). ಅವರು ಉಲ್ಲೇಖಿಸಿರುವ ವಚನವೊಂದರಲ್ಲಿ 'ಇಷ್ಟಲಿಂಗ'ದ ಉಲ್ಲೇಖ ಬಂದಿದೆ (252). ಅಷ್ಟೇ ಅಲ್ಲ, ಅವರ ಇನ್ನೊಂದು ವಚನದಲ್ಲಿ ಅವರು ಉದ್ಧರಿಸಿರುವ ಪ್ರಾಚೀನ ಸಂಸ್ಕೃತ ಶ್ಲೋಕವೊಂದ ರಲ್ಲಿಯೂ 'ವೀರಶೈವ'ದ ಮಾತಿದೆ (ವ. 1202). ಚನ್ನಬಸವಣ್ಣ, ಅಕ್ಕಮಹಾದೇವಿ ಇತ್ಯಾದಿ ವಚನಕಾರರಲ್ಲಿಯೂ ಹಲವೆಡೆ 'ವೀರಶೈವ'ದ ಉಲ್ಲೇಖವಿದೆ. ಸಿದ್ಧರಾಮನು "ಚತುರ್ವರ್ಣಿಯಾದಡೇನು, ಚತುರ್ವರ್ಣಾತೀತನೆ ವೀರಶೈವ ನೋಡಾ" ಎಂಬ ಅಪೂರ್ವ ವಚನವೊಂದರಲ್ಲಿ ವೀರಶೈವದ ವರ್ಣಾತೀತವಾದ ಜಾತ್ಯತೀತ ಉದಾತ್ತ ಗುಣವನ್ನು ಎತ್ತಿ ಹಿಡಿದಿದ್ದಾನೆ. ಅಕ್ಕಮಹಾದೇವಿಯ ವಚನವೊಂದರಲ್ಲಿ ಆಕೆಯು ಉದ್ಧರಿಸಿರುವ ಪ್ರಾಚೀನ ಸಂಸ್ಕೃತ ಶ್ಲೋಕದಲ್ಲಿಯೂ "ವೀರಶೈವ"ದ ಮಾತಿದೆ (ವ. 314). ಆ ಶ್ಲೋಕದ ಪ್ರಕಾರ, ಶಿವಭಕ್ತನಾದ ವ್ಯಕ್ತಿಯ ಮನೆಯಲ್ಲಿ ಅವನ ಜಾತಿ ಧರ್ಮಾದಿಗಳನ್ನು ಅಲಕ್ಷಿಸಿ ಭೋಜನ ಮಾಡಬೇಕು ("ಅವಿಚಾರೇಷು ಭಕ್ತೇಷು ಜಾತಿ ಧರ್ಮಾದಿ ಸೂತಕಾನ್ ॥ ತದ್ಗೃಹೇಷ್ವನ್ನಪಾನಾದಿ ಭೋಜನಂ ಕ್ರೀಯತೇ ಸದಾ"). ಅದರ ಪ್ರಕಾರ, ವೀರಶೈವವು ಬ್ರಾಹ್ಮಣ ಅಸ್ಪೃಶ್ಯ ಎಂಬ ಭೇದವನ್ನು ಮಾಡದೆ ಎಲ್ಲರನ್ನೂ ಸಮಾನವಾಗಿ ಗುರುತಿಸುತ್ತದೆ. ಇಂತಹ ಉದಾತ್ತ ಅತ್ಯಂತ ಕ್ರಾಂತಿಕಾರಕ ತತ್ವಗಳನ್ನು ಒಳಗೊಂಡಿದ್ದ ವೀರಶೈವದ ಕಡೆ ಬ್ರಾಹ್ಮಣನಾಗಿದ್ದ ಬಸವಣ್ಣನವರ ಮನಸ್ಸು ಒಲಿಯಿತು. ಅವರು ವೀರಶೈವಕ್ಕೆ ಮತಾಂತರ ಹೊಂದಲು ಏನು ಕಾರಣವೆಂಬುದು ಅವರ ವಚನಗಳಿಂದಲೇ ಸೂಚಿತವಾಗುತ್ತದೆ. ಕರ್ಮ

ಮಾರ್ಗಕ್ಕಿಂತ ಭಕ್ತಿಮಾರ್ಗ, ಜಾತಿಭೇದಕ್ಕಿಂತ ಮನುಷ್ಯ ಸಮಾನತೆ ಅವರಿಗೆ ಮುಖ್ಯ ವಾಗಿತ್ತು.

ಬಸವಣ್ಣನವರಿಗಿಂತ ಹಿಂದೆ ಇದ್ದ ಕೊಂಡಗುಳಿ ಕೇಶಿರಾಜನಲ್ಲೂ (ಕ್ರಿ.ಶ. 1107) "ವೀರಶೈವ" ಮಾತು ಬಂದಿದೆ. ಅವನು ನಿಜವಾದ ಶಿವಭಕ್ತನೆಂದೂ, ತನ್ನ ಬಗ್ಗೆ ಅವನಿಗೆ 'ರಾಜಭಕ್ತಿ'ಯಿಲ್ಲವೆಂದೂ ತಿಳಿದ ಚಕ್ರವರ್ತಿಗೆ ಅಸಮಾಧಾನವಾದಾಗ ಅವನು ರಾಜನ ಭಂಡಾರದ ಪದವಿಯನ್ನು ತಿರಸ್ಕರಿಸಿ ರಾಜಧಾನಿಯ ಹೊರಗಿನ ಕೆಳವರ್ಗದ ಮೇದರ ಜಾತಿಯ ಶಿವಭಕ್ತನ ಮನೆಗೆ ಹೋಗಿ ಕೆಲಕಾಲವಿದ್ದ ಎಂಬ ಕತೆ ಇದೆ. ವೀರಶೈವದ ಪ್ರಕಾರ ಹಿಂದೆ ನೋಡಿದಂತೆ ಶಿವಭಕ್ತನಾದ ಕೆಳವರ್ಗದವನು ಶಿವಭಕ್ತನಲ್ಲದ ರಾಜನಿಗಿಂತ ಶ್ರೇಷ್ಠ. ಅವನ ಕೃತಿಯೊಂದರಲ್ಲಿ (ಶೀಲಮಹತ್ವದ ಕಂದಪದ್ಯ 21) "ವೀರಶೈವ"ದ ಉಲ್ಲೇಖವಿದೆ ("ವರ ವೀರಶೈವ ಸಿದ್ಧವ ಪರಿಯಾಯಗಳಿಂದಲರಿದು").

ಮೇಲಿನ ಕೆಲವು ಉಲ್ಲೇಖಗಳಿಂದ ವೀರಶೈವ ಮತವು ಬಸವಣ್ಣನವರಿಗಿಂತ ಹಿಂದೆ ಇತ್ತು ಎಂಬುದು ಸ್ಪಷ್ಟವಾಗುತ್ತದೆ. ಆದರೆ ಆಕಸ್ಮಿಕವಾಗಿ ನನ್ನ ಗಮನಕ್ಕೆ ಬಂದ ಶಾಸನೋಕ್ತ ವೀರಶೈವ ಪದ ಬಹಳ ಗಮನಾರ್ಹವಾದುದು. "ಪಂಪಾಪುರ"ದ (ಹಂಪಿ) ದಕ್ಷಿಣ ದ್ವಾರವೆಂದೇ ಪ್ರಸಿದ್ಧವಾದ, ಹಂಪಿಯಿಂದ 10 ಕಿ.ಮೀ. ದೂರವಿರುವ ಸೋಮೇಶ್ವರ ಬೆಟ್ಟದ ಮೇಲೆ ಇರುವ ಸೋಮೇಶ್ವರ ದೇವಾಲಯದ ಪಕ್ಕದ ಗವಿಯಲ್ಲಿ 13.11.1033 ತೇದಿಯಿರುವ ಶಾಸನವು ತ್ರೈಲೋಕ್ಯಮಲ್ಲನ ಕಾಲದ್ದು. ಅದರಲ್ಲಿ ಬನವಾಸಿ "ಪುರವರಾಧೀಶ್ವರ ವೀರಮಾಹೇಶ್ವರ ಕದಂಬ ಕುಳಾಭರಣಂ" ಆದ ತ್ರೈಲೋಕ್ಯಮಲ್ಲನ ಸಾಮಂತ ಪಂಪರಸನ ಹೆಸರಿದೆ. "ವೀರಮಾಹೇಶ್ವರ" ಎಂದರೆ ವೀರಶೈವ. ಶಿವನ ಭಕ್ತನು ಶೈವನೆನ್ನಿಸಿದರೆ, ಮಹೇಶ್ವರನ ಭಕ್ತ ಮಾಹೇಶ್ವರ ನೆನ್ನಿಸಿಕೊಳ್ಳುತ್ತಾನೆ. "ವೀರಮಾಹೇಶ್ವರ", "ವೀರಶೈವ" ಎರಡೂ ಸಮಾನಾರ್ಥಕಗಳು. "ವೀರಮಾಹೇಶ್ವರಾಚಾರ ಸಂಗ್ರಹ" ಎಂಬ ಹೆಸರಿನ ಹಿಂದಿನ ಸಂಸ್ಕೃತ ಕೃತಿ ವೀರಶೈವದರ್ಶನದ ವಿವರಗಳನ್ನು ಒಳಗೊಂಡಿದೆ. (ಮೇಲಿನ ಶಾಸನದ ಪಾಠಕ್ಕೆ ನೋಡಿ – ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ 2 : ಸಂಖ್ಯೆ 159, ಪು. 153, ಸಂಪಾದಕರು, ದೇವರಕೊಂಡಾರೆಡ್ಡಿ.)

ಕ್ರಿ.ಶ. 1612ರ ಒಂದು ಶಾಸನದಲ್ಲಿ (ಅದೇ ಶಾಸನ ಸಂಪುಟ–3, ಸಂಖ್ಯೆ 396, ಪು. 280) "ವೀರಶೈವ", "ವೀರಮಾಹೇಶ್ವರ" ಎಂಬ ಎರಡೂ ಪದಗಳು ಒಂದೇ ಅರ್ಥದಲ್ಲಿ ಬಳಕೆಯಾಗಿರುವುದೂ ಗಮನಾರ್ಹ ("ಶ್ರೀಮದ್ವೇದಾಂತೋದಿತ ವೀರಶೈವ ಸಮಯೋಚಿತ ಲಿಂಗಾಂಗ ಸಂಬಂಧ ಭಸ್ಮ ಸ್ನಾನೋದ್ಧೂಲಿತ ತ್ರಿಪುಂಡ್ರ ಧಾರಣಕ್ರಮ ವೀರಶೈವಾಗಮೋಕ್ತ... ವೀರಮಾಹೇಶ್ವರ ಸದಾಚಾರ ಸ್ಥಾಪನ..."). ನನಗೆ ತಿಳಿದ ಮಟ್ಟಿಗೆ ಕ್ರಿ.ಶ. 1033ರ "ವೀರಮಾಹೇಶ್ವರ"ದ ಉಲ್ಲೇಖವೇ

"ವೀರಶೈವ" ಅಥವಾ "ವೀರಮಾಹೇಶ್ವರ"ದ ಅತ್ಯಂತ ಪ್ರಾಚೀನ ಸ್ಪಷ್ಟ ತೇದಿಯುಕ್ತ ದಾಖಲೆ. ವೀರಶೈವದ ಚರಿತ್ರೆ ಅದಕ್ಕಿಂತ ಹಿಂದಕ್ಕೆ ಹೋಗುತ್ತದೆ ಎಂಬುದು ಸ್ಪಷ್ಟ.

ವೀರಶೈವ ಪಂಥ ಬಸವಣ್ಣನವರಿಗಿಂತ ಹಿಂದಿನದು; ಮತ್ತು ಅದು ಎಲ್ಲ ಪ್ರಗತಿಪರ ಅಂಶಗಳನ್ನು ಗರ್ಭೀಕರಿಸಿಕೊಂಡಿತ್ತು. ಆದರೆ ಏಕೋ ಏನೋ ಅದು ಜನಪ್ರಿಯವಾಗಿರಲಿಲ್ಲ; ಅದರ ಪ್ರಗತಿಪರ ಅಂಶಗಳು ಜನತೆಯ ಆಚರಣೆಯ ಭಾಗವಾಗಿರಲಿಲ್ಲ. ಎಲ್ಲೋ ಕೆಲವರು ಆ ಪ್ರಗತಿಪರ ಆಚರಣೆಗಳನ್ನು ಬದುಕಿದ್ದರು, ತಮ್ಮ ಜೀವನದಲ್ಲಿ ಅವುಗಳನ್ನು ಅಳವಡಿಸಿಕೊಂಡರೂ ಅದರ ಮಹತ್ವ ಅವರಿಗೆ ತಿಳಿದಿರಲಿಲ್ಲ. ಸಾಂಪ್ರದಾಯಕ ವರ್ಗದಲ್ಲಿ ಜನಿಸಿದ ಬಸವಣ್ಣನವರಿಗೆ ಆ ವೀರಶೈವದ ಪ್ರಗತಿಪರ ಅಥವಾ ಕ್ರಾಂತಿಕಾರಕ ಗುಣವನ್ನು ಗುರುತಿಸುವುದು ಸಾಧ್ಯವಾಯ್ತು. ಅದಕ್ಕಾಗಿಯೇ ಅವರು 'ಶೈವ'ವನ್ನು ಬಿಟ್ಟು ವೀರಶೈವರಾದದ್ದು; ಮತ್ತು ಸಾಮಾನ್ಯ ಜನತೆಯಲ್ಲಿ ಅಪಾರ ಕಳಕಳಿಯನ್ನು ಬೆಳೆಸಿಕೊಂಡಿದ್ದ ಅವರು ಅಂತಹ ವೀರಶೈವ ವನ್ನು ಪ್ರಚಾರಮಾಡಿ ಅದನ್ನು ಜನಪ್ರಿಯಗೊಳಿಸಿದರು. ಈಗಿನ ಪರಿಭಾಷೆಯಲ್ಲಿ ಹೇಳುವುದಾದರೆ ಅವರಿಗಿಂತ ಹಿಂದೆ ವೀರಶೈವವು ಶುದ್ಧ ವಿಜ್ಞಾನದಂತಿತ್ತು (Pure Science); ಅದನ್ನು ಅವರು ಆನ್ವಯಿಕ ವಿಜ್ಞಾನವಾಗಿ (Applied Science) ಪರಿವರ್ತಿಸಿದರು; ಅದನ್ನು ಜನೋಪಯೋಗಿಯಾಗುವಂತೆ ಮಾಡಿದರು. ಅವರೊಬ್ಬ ವಿರಳ ಸಮಾಜ ಸುಧಾರಕ (Social Reformer) ಅಥವಾ ವೀರಶೈವದ ಆನ್ವಯಿಕ ವಿಜ್ಞಾನಿ (Applied Scientist).



# 5

# "ವೀರಶೈವ" : ಬಸವ ಪೂರ್ವ ಕಾಲದ್ದು – ಹೆಚ್ಚಿನ ಆಧಾರ

ಹರಿಹರನ (ಸು. ಕ್ರಿ.ಶ. 1220) ಮಹಾದೇವಿಯಕ್ಕನ ರಗಳೆಯ ಪ್ರಕಾರ, ಅಕ್ಕ ಮಹಾದೇವಿ ಕೌಶಿಕನ ಕೈಹಿಡಿದ ಮೇಲೆ ಅವಳಿದ್ದ ಅರಮನೆಗೆ "ಕಕ್ಷ" (ಹಸ್ತಮೂಲ) ಅಥವಾ ಬಗಲಿಗೆ (ಕಂಕುಳಿಗೆ) ಶಿವಲಿಂಗವನ್ನು ಕಟ್ಟಿದ್ದ 'ಮಾಹೇಶ್ವರ'ರು (ವೀರಶೈವರು) ಬಂದಾಗ ಅವರಿಗೆ ಭಕ್ತಿ ಸಮರ್ಪಣೆ ಮಾಡುತ್ತಾಳೆ. ಅವಳು ಕೌಶಿಕನ ಅರಮನೆಯನ್ನು ತ್ಯಜಿಸಿ ಶ್ರೀಶೈಲಕ್ಕೆ ತನ್ನ ಪೂಜಾಗೃಹದ ವೇದಿಕೆಯ ಮೇಲಿದ್ದ ಲಿಂಗವನ್ನು ಕೈಯಲ್ಲಿ ಹಿಡಿದುಕೊಂಡು ಹೋಗುತ್ತಾಳೆ. ಈ ಸೂಚನೆಗಳು ಅವಳು ಇಷ್ಟಲಿಂಗಪೂಜಕಳು ಎಂಬುದರ ದ್ಯೋತಕ. (ಇಷ್ಟಲಿಂಗವನ್ನು ತೋಳಿಗೆ ಕಟ್ಟುತ್ತಿದ್ದ, ಅದನ್ನು ಮನೆಯಲ್ಲಿ ವೇದಿಕೆಯ ಮೇಲಿಟ್ಟು ಪೂಜಿಸುತ್ತ, ಸಮಯ ಬಂದರೆ ಕೈಯಲ್ಲಿ ಹಿಡಿದು ಒಯ್ಯುವ ಪದ್ಧತಿ ಇತ್ತು. ಆ ಪದ್ಧತಿ ಈಗಲೂ ಇದೆಯಾದರೂ ಒಟ್ಟಾರೆ ಅದನ್ನು ಜನ ಎದೆಯ ಮೇಲೆ ಧರಿಸುತ್ತಾರೆ.) ಬಾಲ್ಯದಲ್ಲೇ ಅವಳು ವೀರಶೈವ ಕುಟುಂಬದವಳು; ಅವಳ ತಂದೆ ತಾಯಿಗಳು ಜನ್ಮತಃ ವೀರಶೈವರಾಗಿದ್ದರು. ಕೌಶಿಕನ ಜೊತೆ ಮದುವೆಯಾದ ಮೇಲೂ ಅವಳ ಜಂಗಮಾರಾಧನೆ, ಇಷ್ಟಲಿಂಗ ಪೂಜೆಗಳನ್ನು ಅವಳು ಮುಂದುವರಿಸಿಕೊಂಡೇ ಬಂದಳು.

ಅದೇ ಹರಿಹರನ ಪ್ರಭುದೇವರ ರಗಳೆಯ ಪ್ರಕಾರ ಅಲ್ಲಮ ಜನ್ಮತಃ ವೀರಶೈವನಲ್ಲ; ಅಕ್ಕಮಹಾದೇವಿಯ ಉಡುಗಣಿ ಊರಿಗೆ (ಈಗಿನ ಉಡುಗಣಿ, ತಡುಗಣಿ ಎಂಬ ಜೋಡಿ ಊರುಗಳು) ಸಮೀಪದ ಬಳ್ಳಿಗಾವೆಯ ಪರಿಸರದವನು. ಅವನು ಗೊಗ್ಗೇಶ್ವರ ಎಂಬ ದೇವಾಲಯದಲ್ಲಿ ವಾದಕನಾಗಿದ್ದು ಅಲ್ಲಿಗೆ ಬಂದಿದ್ದ ಕಾಮಲತೆಯೆಂಬ ತರುಣಿಯಲ್ಲಿ ಅನುರಕ್ತನಾಗುತ್ತಾನೆ. ಅವರಿಬ್ಬರೂ ಯೌವನದಲ್ಲಿ ಸುಖ ದಾಂಪತ್ಯ ಜೀವನದಲ್ಲಿರುವಾಗ ಕಾಮಲತೆ ತೀವ್ರ ಜ್ವರ ಬಂದು ಮರಣ ಹೊಂದುತ್ತಾಳೆ. ಅದರಿಂದ ತೀರ ದುಃಖಿತನಾದ ಅಲ್ಲಮ ದಿಕ್ಕು ತೋಚದೆ ಊರ ಹೊರಗೆ ಏಕಾಂಗಿಯಾಗಿ ಕುಳಿತಿರುವಾಗ ಆಕಸ್ಮಿಕವಾಗಿ ಒಂದು ಭೂಗತ ಕಟ್ಟಡದ

ತುದಿ ಕಾಣಿಸಿತು (ಅವನು ನೆಲವನ್ನು ಕೆರೆದಾಗ ಮಣ್ಣ ಕೆಳಗಿನ ಚಿಕ್ಕ ಕಟ್ಟಡದ ಶಿಖರ ಕಾಣಿಸಿರಬಹುದು – ಅದೊಂದು ಅಪೂರ್ವ ಘಟನೆ). ಅಲ್ಲಿ ಅಗೆಯಿಸಿ ನೋಡಿದಾಗ ಆ ಕಟ್ಟಡದ ಒಳಗೆ ಒಂದು ಕೈಯಲ್ಲಿ ಲಿಂಗ ಧರಿಸಿದ ಮನುಷ್ಯ ದೇಹದ ಕಂಕಾಲ ಅಥವಾ ಎಲುಬಿನ ಪಂಜರ ಕಾಣಿಸಿತು. (ಆ ಎಲುಬಿನ ಪಂಜರವನ್ನು ಹರಿಹರ ಅನಿಮಿಷದೇವ ಎಂದು ಕರೆದಿದ್ದಾನೆ.) ಆ ಪಂಜರದ ಕೈಯ ಇಷ್ಟಲಿಂಗವನ್ನು ಅಲ್ಲಮ ಪಡೆಯುತ್ತಿದ್ದಂತೆ ಅವನಿಗೆ ಮುಂದಿನ ದಿಕ್ಕು ಕಾಣಿಸಿತು – ತಾನೂ ಅವನಂತೆ ಶಿವಧ್ಯಾನಿ ಸಾಧಕನಾಗಬೇಕು ಎಂಬ ಹಂಬಲ ಅವನಲ್ಲಿ ಮೂಡಿತು. ಜನರಿಗೆಲ್ಲ ಆಶ್ಚರ್ಯವಾಯಿತು – ಕಾಮಲತೆಯ ಸಾವಿನಿಂದ ಎಲ್ಲರಂತೆ ಗೋಳಿಡುತ್ತಿದ್ದ ಆ ಅಲ್ಲಮನೆಲ್ಲಿ! ಈ ಲಿಂಗಧಾರಿ ಸಾಧಕ ಅಲ್ಲಮನೆಲ್ಲಿ! ಅವನ ಜೀವನದ ದಿಕ್ಕೇ ಆ ಲಿಂಗಧಾರಣೆಯಿಂದ ಬದಲಾಯಿತು. ಮುಂದೆ ಅಲ್ಲಮ ಸಾಧಕನಾಗಿದ್ದವನು ಸಿದ್ಧಪುರುಷನಾಗಿ ವಿಕಾಸ ಹೊಂದಿದ. ಇದು ಅಲ್ಲಮನ ಜೀವನದ ಪೂರ್ವ ವೃತ್ತಾಂತ.

ಇದೊಂದು ನಿಶ್ಚಿತವಾಗಿಯೂ ಐತಿಹಾಸಿಕ ಘಟನೆ. ಹಿಂದೆ ಇದ್ದ, ಈಗಲೂ ಇರುವ (ಅದನ್ನು ನಾನು ಪ್ರತ್ಯಕ್ಷದರ್ಶಿಗಳಿಂದ ಕೇಳಿದ್ದೇನೆ) ಒಂದು ಪದ್ಧತಿ ಇದು : ಇನ್ನು ತಾವಿರುವುದು ಸಾಕು ಎಂಬ ನಿರ್ಣಯಕ್ಕೆ ಕೆಲವು ಯೋಗಿಗಳು ಬಂದಾಗ ಆಳವಾಗಿ ಅಗೆಯಿಸಿದ ಸಮಾಧಿ ಗುಂಡಿಯಲ್ಲಿ ಕುಳಿತು ಧ್ಯಾನಸ್ಥರಾಗಿ ಅಲ್ಲೇ ಕೊನೆಯುಸಿರೆಳೆಯುತ್ತಿದ್ದರು. ಅವರ ಸೂಚನೆಯಂತೆ ಜನಗಳು ಆ ಸಮಾಧಿ ಗುಂಡಿಯನ್ನು ಮಣ್ಣಿಂದ ಮುಚ್ಚುತ್ತಿರಲಿಲ್ಲ. ಸಮಾಧಿ ಗುಂಡಿಯಲ್ಲಿ ಕುಳಿತು ಗಂಟೆಯ ಸದ್ದು ಮಾಡಿ ಅದು ತಮ್ಮ ಕೊನೆಯ ಕ್ಷಣವೆಂದು ಒಬ್ಬ ಯೋಗಿಗಳು ಸೂಚನೆ ನೀಡಿದ ಮೇಲೆ ಅವರ ದೇಹವನ್ನು ಅವರು ಕುಳಿತ ಭಂಗಿಯಲ್ಲೇ ಮಣ್ಣಿಂದ ಮುಚ್ಚಿ ಮೇಲೆ ಸಮಾಧಿ ಕಟ್ಟಿರುವುದನ್ನು ಉತ್ತರ ಕರ್ನಾಟಕದ ನನ್ನ ಗೆಳೆಯರೊಬ್ಬರು ತಿಳಿಸಿದ್ದಾರೆ. ಅನಿಮಿಷಯೋಗಿಯು ಅಲ್ಲಮನಿಗಿಂತ ಇನ್ನೂರು ಮುನ್ನೂರು ವರ್ಷಗಳ ಹಿಂದೆ ಹಾಗೆ ಸಮಾಧಿಸ್ಥನಾದ ವ್ಯಕ್ತಿಯಾಗಿರಬಹುದು. ಅಲ್ಲಮ ಕುಳಿತಿದ್ದ ಜಾಗದಲ್ಲಿ ಅನಿಮಿಷಯ್ಯನ ಸಮಾಧಿ ಇದ್ದುದು ಜನರಿಗೆ ಮರೆತು ಹೋಗಿತ್ತು ಎಂದು ಕಾಣುತ್ತದೆ. ಅಂತಹ ಸಮಾಧಿ ಗುಂಡಿಯನ್ನು ಅಲ್ಲಮನ ಕೋರಿಕೆಯಂತೆ ಜನರು ಅಗೆದಾಗ ಅಲ್ಲಿ ಯೋಗಿಯ ಎಲುಬಿನ ಪಂಜರದ ಸುತ್ತ ಕಲ್ಲಿನ ಕಟ್ಟಡದ ಸಮಾಧಿ ಇತ್ತು; ಆ ಅಸ್ಥಿಪಂಜರದ ಕೈಯಲ್ಲಿದ್ದ ಲಿಂಗವನ್ನು ಅಲ್ಲಮ ನಿರ್ಭೀತಿಯಿಂದ ತನ್ನ ಕೈಗೆ ತೆಗೆದುಕೊಂಡ. ಎಲುಬಿನ ಪಂಜರ ಮುಟ್ಟುವುದಿರಲಿ – ಅದರ ಹತ್ತಿರ ಹೋಗಲಿಕ್ಕೂ ಹೆದರುತ್ತಾರೆ ಎಂಬುದನ್ನು ನಾನು ಎಳೆಯ ವಯಸ್ಸಿನಲ್ಲಿ ಕಣ್ಣಾರೆ ನೋಡಿದ್ದೇನೆ. ಒಂದು ಮಣ್ಣಿನ ದಿಬ್ಬದ ಮೇಲೆ ನನ್ನ ಸಹಪಾಠಿಯ ಶವವನ್ನು ಹೂತರು. ಒಂದೆರಡು ವರ್ಷಗಳ ಬಳಿಕ ಯಾರೋ ತಿಳಿಯದೆಯೋ ಏನೋ ಆ ದಿಬ್ಬದ ಬದಿಯ ಮಣ್ಣನ್ನು ಅಗೆದಾಗ ಅ ಎಲುಬಿನ ಪಂಜರದ ತಲೆ, ಅವನ

ಉದ್ದನೆಯ ಕೂದಲು ಕಾಣಿಸಿತು. ನಾವೆಲ್ಲ ದೂರದಿಂದ ಆ ಎಲುಬಿನ ಪಂಜರವನ್ನು ಕುತೂಹಲಮಿಶ್ರಿತ ಭಯದಿಂದ ನೋಡುತ್ತಿದ್ದೆವು – ಕೆಲವು ಕಾಲ ಹಳ್ಳಿಯವರು ಅತ್ತ ಹೋಗುತ್ತಿರಲಿಲ್ಲ.

ಅನಿಮಿಷ ಎಂದರೆ ಸಂಸ್ಕೃತದಲ್ಲಿ ಕಣ್ಣು ಮಿಟುಕಿಸದವನು, ರೆಪ್ಪೆ ಹೊಡೆಯದವನು ಎಂದರ್ಥ. ಕಣ್ಣು ಮುಚ್ಚಿ ತೆಗೆಯದೆ ಧ್ಯಾನಾರೂಢ ನಿಶ್ಚಲದ ಯೋಗಿ ಎಂಬರ್ಥವೂ ಸಾಧ್ಯ. ಅನಿಮಿಷ ಹೆಸರು ಹರಿಹರ ಕವಿ ಕಲ್ಪಿತವಾದುದು ಎಂದು ಭಾವಿಸಲವಕಾಶವಿದೆ, ಅಥವಾ ಅಲ್ಲಮನ ಕಾಲದಲ್ಲೇ ಆ ಅಸ್ಥಿಪಂಜರದ ಯೋಗಿಯನ್ನು 'ಅನಿಮಿಷ' ಎಂದು ಕರೆಯುತ್ತಿದ್ದರು. ಬಳ್ಳಿಗಾವೆಯ ಬಳಿ 'ಗೊಗ್ಗಯ್ಯನ ಹೊಲ'ದ ಸಮೀಪ (ಅಲ್ಲಮ ಕಂಡಿದ್ದ ಗೊಗ್ಗೇಶ್ವರ ದೇವಾಲಯದ ಜಾಗ : ಆ ದೇವಾಲಯ ಇಂದು ಭೂಗತವಾಗಿದ್ದು ಅದರ ಅವಶೇಷಗಳಿವೆ) ಈಗಲೂ ಅನಿಮಿಷಯ್ಯನ ಕೊಪ್ಪಲು ಎಂಬ ಹೆಸರಿನ ಹಳ್ಳಿ, ಅಲ್ಲೇ ಅನಿಮಿಷಾರಣ್ಯ ಎಂಬ ಬಿಲ್ವಪತ್ರೆ ವನ ಇದೆ. ಆ ಬಿಲ್ವಪತ್ರೆ ವನದಲ್ಲಿ ಚಾಲುಕ್ಯರ ಕಾಲದ (12 ಶ.) ಒಂದು ದೇವಾಲಯವಿದ್ದು ಆ ದೇವಾಲಯದ ಶಿವಲಿಂಗದ ಮೇಲೆ ನೂರಾರು ಕೊಡ ನೀರು ಸುರಿದರೂ ಆ ನೀರು ಕೆಳಗಿನ ರಂಧ್ರದ ಮೂಲಕ ಭೂಮಿಯ ಒಳಭಾಗಕ್ಕೆ ಸೇರುತ್ತದೆ; ಸ್ವಲ್ಪವೂ ಉಕ್ಕಿ ಹರಿದು ಬರುವುದಿಲ್ಲ. ಆ ಶಿವಲಿಂಗದ ಕೆಳಗೆ ಅಲ್ಲಮ ದರ್ಶಿಸಿದ್ದ ಅನಿಮಿಷನ ಸಮಾಧಿ ಇದ್ದು ಆ ಸಮಾಧಿಯ ಮೇಲೆ ಈಚಿನವರು, ಕ್ರಿ.ಶ. 1160ರ ಬಳಿಕ ಒಂದು ದೇವಾಲಯ ಕಟ್ಟಿಸಿರಬಹುದು. ಆದ್ದರಿಂದ ಆ ಯೋಗಿ ಅಲ್ಲಮನ ಕಾಲದಲ್ಲೇ ಅನಿಮಿಷ ಎಂದು ಜನಜನಿತನಾಗಿದ್ದಿರುವ ಸಾಧ್ಯತೆ ಇದೆ. ಆ ಹೆಸರು ಇಂದಿಗೂ ಹಳ್ಳಿಗರ ಬಾಯಲ್ಲಿ ಉಳಿದುಕೊಂಡು ಬಂದಿದೆ. ಆ ಕಾರಣ, ಅನಿಮಿಷ ಎಂಬ ಹೆಸರು ಹರಿಹರ ಕಲ್ಪಿತವಲ್ಲ – ಅದು ಅವನನ್ನು ವಾಸ್ತವವಾಗಿ ಜನ ಕರೆಯುತ್ತಿದ್ದ ಹೆಸರು. ಅವನ ಹೆಸರು ಇಂದಿಗೂ ಒಂದು ಸ್ಥಳನಾಮದಲ್ಲಿ ಉಳಿದು ಬಂದಿರುವುದು ಅತ್ಯಂತ ಸೋಜಿಗದ ಸಂಗತಿ.

ಆಗಲೇ ಸೂಚಿಸಿದಂತೆ ಅನಿಮಿಷನು ಸಮಾಧಿಸ್ಥನಾದುದು ಅಲ್ಲಮನಿಗಿಂತ ನೂರಿನ್ನೂರು ವರ್ಷಗಳ ಹಿಂದೆ. ಅವನ ಕೈಯಲ್ಲಿ ಇಷ್ಟಲಿಂಗವಿದ್ದಿತು ಎಂಬ ಸಂಗತಿಯೇ ಹೇಳುತ್ತದೆ – ಅವನೊಬ್ಬ ಇಷ್ಟಲಿಂಗಾರಾಧಕನಾದ ವೀರಶೈವ ಎಂಬುದನ್ನು, ಅವನಿಂದ, ಅವನ ಎಲುಬಿನ ಪಂಜರದಿಂದ ಇಷ್ಟಲಿಂಗ ಸ್ವೀಕರಿಸಿದ ಅಲ್ಲಮನೂ ವೀರಶೈವನಾಗುತ್ತಾನೆ. ಅಲ್ಲಮ ಖಂಡಿತ ಹುಟ್ಟಿನಿಂದ ವೀರಶೈವ ಅಲ್ಲ; ಇಷ್ಟಲಿಂಗವನ್ನು ಪಡೆದು ವೀರಶೈವನಾದವನು. (ಅನಿಮಿಷನ ಬಗ್ಗೆ ಹೆಚ್ಚಿನ ಮಾಹಿತಿ – ಲೇಖನದ ಕೊನೆಯಲ್ಲಿ.)

ಬಸವಣ್ಣನಿಗಿಂತ ಹಿಂದೆಯೇ ಇಷ್ಟಲಿಂಗದ ಪರಿಕಲ್ಪನೆ ಇದ್ದು ಅವನಿಗಿಂತ ಪೂರ್ವದ್ದು ವೀರಶೈವ ಎಂಬುದಕ್ಕೆ ಹಲವು ಪ್ರಬಲಾಧಾರಗಳಿವೆ. (ನೋಡಿ – ಎಂ.

ಚಿದಾನಂದಮೂರ್ತಿ : 'ವೀರಶೈವ–ಲಿಂಗಾಯತ.' "ಸ್ಥಾವರ ಜಂಗಮ" ಕೃತಿಯಲ್ಲಿ, ಪು. 761.) 'ವೀರಶೈವ' ಬೇರೆ, 'ಲಿಂಗಾಯತ' ಬೇರೆ; 'ಲಿಂಗಾಯತ' ಧರ್ಮದ ಸ್ಥಾಪಕ ಬಸವಣ್ಣ; ಅವನಿಗೂ 'ವೀರಶೈವ'ಕ್ಕೂ ಸಂಬಂಧವಿಲ್ಲ; ವೀರಶೈವರು ಗುರುಪೀಠದವರು, ಲಿಂಗಾಯತರು ವಿರಕ್ತಪೀಠದವರು; ಇಷ್ಟಲಿಂಗ ಪರಿಕಲ್ಪನೆಯ ಪ್ರಥಮ ಪ್ರತಿಪಾದಕ ಬಸವಣ್ಣ – ಇತ್ಯಾದಿ ವಿವೇಕವಲ್ಲದ ಈಚಿನ ವಾದಗಳಿವೆ.

19–20ನೇ ಶತಮಾನಗಳ ಕೆಲವು ವಾಸ್ತವಗಳನ್ನು ಗಮನಿಸಿ. "ವೀರಶೈವ ನಿಯತಕಾಲಿಕೆಗಳು" ಎಂಬ ಕೃತಿಯಲ್ಲಿ (ಪ್ರೊ. ಎಸ್.ಎಸ್. ಭೂಸರೆಡ್ಡಿ ಮತ್ತು ಡಾ. ಮಧು ವೆಂಕಾರೆಡ್ಡಿ; ಪ್ರ : ಬಸವ ಸಮಿತಿ, ಬೆಂಗಳೂರು) ಕ್ರಿ.ಶ. 1860–1934ರ ಅವಧಿಯ ತೊಂಬತ್ತೆರಡು ನಿಯತಕಾಲಿಕೆಗಳ ಪಟ್ಟಿಯಿದೆ. ಅದರಲ್ಲಿ "ವೀರಶೈವ" ಹೆಸರಿನ ಪೂರ್ವಾರ್ಧದ ಇಪ್ಪತ್ತು ಪತ್ರಿಕೆಗಳಿವೆ (ಉದಾ.: ವೀರಶೈವ ಗರ್ಜನೆ, ವೀರಶೈವ ಕೇಸರಿ, ವೀರಶೈವ ಧರ್ಮ ರಹಸ್ಯ). ಈ ಪತ್ರಿಕೆಗಳ ಸಂಪಾದಕರುಗಳಲ್ಲಿ ಜಂಗಮ ಲಿಂಗಾಯತರಿದ್ದಾರೆ, ಜಂಗಮೇತರ ಲಿಂಗಾಯತರೂ ಇದ್ದಾರೆ. ಉದಾ.ಗೆ "ವೀರಶೈವೋತ್ಕರ್ಷ ಮಾಲಾ" ಪತ್ರಿಕೆಯ ಸಂಪಾದಕರು (1907) ಜಂಗಮೇತರ ವರ್ಗದವರಾದ ವೀರಬಸವ ಶ್ರೇಷ್ಠಿ ಬಿ.ಎ.; ವೀರಶೈವ ಧರ್ಮ ಸಂಜೀವಿನಿಯ ಸಂಪಾದಕರು (1925) ಜಂಗಮ ವರ್ಗದ ಎಸ್.ಎನ್. ಬಸವ ಪ್ರಭಯ್ಯ. ಸ್ವಾರಸ್ಯ ವೆಂದರೆ "ಲಿಂಗಾಯತ" ಪೂರ್ವಪದವನ್ನುಳ್ಳ "ಲಿಂಗಾಯತ ಧರ್ಮ ಪ್ರಕಾಶ"ದ ಸಂಪಾದಕರು (1920) ಗುರುಪೀಠವೊಂದರ ಸ್ವಾಮಿಗಳಾಗಿದ್ದ ವಿರೂಪಾಕ್ಷ ದೇಶಿಕೇಂದ್ರರು. ಇವರು ನಿಶ್ಚಿತವಾಗಿ ಹುಟ್ಟುಜಂಗಮರು. ಆ ವಿರೂಪಾಕ್ಷ ದೇಶಿಕೇಂದ್ರರೇ 1932ರಲ್ಲಿ ವೀರಶೈವ ಗರ್ಜನೆ ಪತ್ರಿಕೆಯ ಸಂಪಾದಕರಾದರು. "ವೀರಶೈವ", "ಲಿಂಗಾಯತ" ಎಂಬ ಭೇದ ಇಪ್ಪತ್ತನೆ ಶತಮಾನದ ಅಂತ್ಯದ ವರೆಗೂ ಇರಲಿಲ್ಲ. ಆ ಭೇದ ಕಲ್ಪನೆಯಾದುದು ಇಪ್ಪತ್ತನೆಯ ಶತಮಾನದ ಅಂತ್ಯದ ಇಪ್ಪತ್ತೊಂದನೇ ಶತಮಾನದ ಆದಿಯ ಕೆಲವು "ಸಂಶೋಧಕ"ರೆಂದು ಕರೆದು ಕೊಳ್ಳುವ ವ್ಯಕ್ತಿಗಳಿಂದ.

ಇಷ್ಟು ಮಾತ್ರ ಸತ್ಯಸ್ಯ ಸತ್ಯ – ವೀರಶೈವ ಲಿಂಗಾಯತ ಎರಡೂ ಸಮಾನಾರ್ಥಕಗಳು. ವೀರಶೈವ (ಲಿಂಗಾಯತ) ಪಂಥದ ಸ್ಥಾಪಕ ಬಸವಣ್ಣ ಅಲ್ಲ. ವೀರಶೈವವು ಅವನಿಗಿಂತ ಹಿಂದಿನದು. ಶುದ್ಧ ವಿಜ್ಞಾನದಂತಿದ್ದ (Pure Science) ವೀರಶೈವವನ್ನು ಆನ್ವಯಿಕ ವಿಜ್ಞಾನವಾಗಿ (Applied Science) ಪರಿವರ್ತಿಸಿ ಅದನ್ನು ಜನಸಮೀಪಕ್ಕೆ ತಂದವನು, ಜನೋಪಯೋಗಿಯಾಗುವಂತೆ ಮಾಡಿದ ವ್ಯಕ್ತಿ ಬಸವಣ್ಣ. ಬಸವಣ್ಣ ವೀರಶೈವದ ಆನ್ವಯಿಕ ವಿಜ್ಞಾನಿ. ಗುರುಪೀಠ, ವಿರಕ್ತಪೀಠ ಎರಡಕ್ಕೂ ಕರ್ತವ್ಯ ಭೇದವಿರಬಹುದೇ ಹೊರತು ಸ್ವರೂಪ ಉದ್ದೇಶ ಒಂದೇ. ಎರಡೂ ಎಲ್ಲ ದೃಷ್ಟಿಗಳಿಂದಲೂ ಸಮಾನ. ವೀರಶೈವರು ಎಲ್ಲ ದೃಷ್ಟಿಗಳಿಂದಲೂ

ಹಿಂದೂಗಳು, ಈ ಮಾತುಗಳನ್ನು ಈ ಹಿಂದೆ ನಾನು ಹಲವು ಗ್ರಂಥ, ಲೇಖನಗಳಲ್ಲಿ ಮತ್ತೆ ಮತ್ತೆ ಒತ್ತಿ ಒತ್ತಿ ಹೇಳಿದ್ದೇನೆ.

ಈ ಚಿಕ್ಕ ಟಿಪ್ಪಣಿಯ ಅಂತ್ಯದಲ್ಲಿ ಇದಕ್ಕೆ ಹೊಂದುವ ಮತ್ತು ಮರುಚಿಂತನೆಗೆ ಎಡೆಮಾಡಿಕೊಡುವ ಒಂದು ಸಾಧಾರ ಊಹೆಯನ್ನು ಮೂಡಿಸುತ್ತಿದ್ದೇನೆ. ಹನ್ನೆರಡನೆಯ ಶತಮಾನದ ಪ್ರಮುಖ ವಚನಕಾರರೆಂದರೆ ಬಸವ, ಚನ್ನಬಸವ, ಸಿದ್ಧರಾಮ, ಅಲ್ಲಮ ಮತ್ತು ಅಕ್ಕಮಹಾದೇವಿ. ಇವರೂ ಸೇರಿದಂತೆ ಐತಿಹಾಸಿಕವಾಗಿ ಮೊದಲ ಹುಟ್ಟು 'ವೀರಶೈವ' ('ಲಿಂಗಾಯತ') ಯಾರು? ಬಸವ, ಚನ್ನಬಸವ ಇವರು ಶೈವ ಬ್ರಾಹ್ಮಣರಾಗಿದ್ದು ಬಳಿಕ ವೀರಶೈವರಾದವರು; ಸಿದ್ಧರಾಮ ಕುಡು ಒಕ್ಕಲಿಗನಾಗಿದ್ದು ಅಲ್ಲಮನಿಂದ ವೀರಶೈವನಾದವನು; ಅಲ್ಲಮ ಹುಟ್ಟಿನಿಂದ ಶೂದ್ರ ವರ್ಗಕ್ಕೆ ಸೇರಿದವನಾಗಿದ್ದು ಅನಿಮಿಷನ ಎಲುಬಿನ ಪಂಜರದ ಕೈಯಿಂದ ಲಿಂಗವನ್ನು ಪಡೆದವನು, ಎಂದರೆ ವೀರಶೈವನಾಗಿ ಪರಿವರ್ತಿತನಾದವನು. ಅಕ್ಕಮಹಾದೇವಿಯು ಹುಟ್ಟಿನಿಂದ ವೀರಶೈವಳು ಎಂದು ಹೇಳಲು ಆಧಾರಗಳಿದ್ದರೂ ಅವಳು ಬಾಲ್ಯದಲ್ಲಿ 'ಪಂಡಿತಾರಾಧ್ಯ'ರಿಂದ ಲಿಂಗದೀಕ್ಷೆ ಪಡೆದಳು ಎಂದು ಎರಡನೆಯ ಶೂನ್ಯಸಂಪಾದನೆ ಹೇಳುವುದರಿಂದ ಆ ಬಗ್ಗೆ ಸಂದೇಹವನ್ನು ಉಳಿಸಿಕೊಳ್ಳುವುದು ಅಗತ್ಯವಾಗಿದೆ ('ಪಂಡಿತಾರಾಧ್ಯ' ಯಾರೋ ತಿಳಿಯದು–ಆಂಧ್ರದ ಮಲ್ಲಿಕಾರ್ಜುನ ಪಂಡಿತಾರಾಧ್ಯ ಎಂಬ ಶಿವಭಕ್ತ ಬಸವಣ್ಣನ ಸಮಕಾಲೀನನಾಗಿದ್ದು ಶ್ರೀಶೈಲದ ಮಲ್ಲಿಕಾರ್ಜುನನ ಭಕ್ತ ಆಗಿದ್ದ). ಅವಳಿಗೆ ಲಿಂಗದೀಕ್ಷೆ ನೀಡಿದ ಗುರುವಿನ ಹೆಸರು ಚನ್ನಮಲ್ಲಪ್ರಭು (ಅಥವಾ ಚನ್ನಮಲ್ಲೇಶ) ಎಂದೂ ಬೇರೆ ಕಡೆ ಉಕ್ತವಾಗಿದೆ. ಮಲ್ಲಿಕಾರ್ಜುನ, ಚನ್ನಮಲ್ಲಪ್ರಭು ಇವುಗಳಲ್ಲಿ ಮಲ್ಲ ಅಥವಾ ಮಲ್ಲಿಕಾರ್ಜುನ ಇರುವುದರಿಂದ ಅವರಿಬ್ಬರೂ ಒಂದೇ ಇರುವಂತಿದೆ. ಮೇಲಿನ ವಚನಕಾರರಿಗಿಂತ (ಕ್ರಿ.ಶ. 1160) ಜೇಡರ ದಾಸಿಮಯ್ಯ (ಕ್ರಿ.ಶ. 1140) ಸೇರಿದಂತೆ ಉಳಿದ ಎಲ್ಲ ವಚನಕಾರರಿಗಿಂತ ಹಿಂದೆ ಇದ್ದ ಕೊಂಡಗುಳಿ ಕೇಶಿರಾಜ (ಕಾಲ : ಕ್ರಿ.ಶ. 1110–35) ಇವರೆಲ್ಲರಿಗಿಂತ ಹಿಂದಿನವನು; ಅವನು ವಚನಕಾರನಲ್ಲದಿದ್ದರೂ ವೃತ್ತ ಕಂದಪದ್ಯಗಳನ್ನು ಬರೆದ ವೀರಶೈವ ಕವಿ. ಇವನೇ ನಮಗೆ ತಿಳಿದ ಮಟ್ಟಿಗೆ ಸ್ವಲ್ಪ ಮಾಹಿತಿ ದೊರಕಿರುವ ಪ್ರಪ್ರಾಚೀನ ವೀರಶೈವ ಕೃತಿಕಾರ. ಆರನೆಯ ವಿಕ್ರಮಾದಿತ್ಯನಲ್ಲಿ ಮಂತ್ರಿಯಾಗಿದ್ದ ಅವನ ಕ್ರಿ.ಶ. 1107, 1132ರ ಶಾಸನಗಳೂ ಲಭ್ಯವಿವೆ. ಇವನಿಗಿಂತ ಬಹುಶಃ ಹಿಂದಿನವನು ಚಾಲುಕ್ಯ ಜಯಸಿಂಹನ ಕಾಲದಲ್ಲಿದ್ದ ದೇವರ ದಾಸಿಮಯ್ಯ (ಕ್ರಿ.ಶ. 1040) – ಇವನು ಪಟ್ಟದರಾಣಿ ಸುಗ್ಗಲೆಯ ರಾಜಗುರು. ಈ ದೇವರ ದಾಸಿಮಯ್ಯ ಬೇರೆ, ವಚನಕಾರ ಜೇಡರ ದಾಸಿಮಯ್ಯ (ಕ್ರಿ.ಶ. 1140) ಬೇರೆ. ದೇವರ ದಾಸಿಮಯ್ಯನ ಯಾವುದೇ ಕೃತಿಗಳು ಲಭ್ಯವಾಗಿಲ್ಲ. ಇಲ್ಲಿಯವರೆಗೆ ನಾನು ಇವನೇ ಐತಿಹಾಸಿಕವಾಗಿ ಲಭ್ಯವಾಗಿರುವ ಮೊದಲ ವೀರಶೈವ ಎಂದು ಭಾವಿಸಿದ್ದೆ – ಇಂದಿಗೂ ನಾನು ಅದನ್ನು ಕೈಬಿಟ್ಟಿಲ್ಲ. ಅಲ್ಲಮನಿಗೆ ಲಿಂಗಪ್ರದಾನ ಮಾಡಿದ ಅನಿಮಿಷ ಅವನ ಸಮಕಾಲೀನನಿರಬಹುದು;

ಅಥವಾ ಅವನಿಗಿಂತಲೂ ಪ್ರಾಚೀನ ಇರಬಹುದು. ದೇವರ ದಾಸಿಮಯ್ಯ ಮತ್ತು ಅನಿಮಿಷ ನಮಗೆ ಲಭ್ಯವಿರುವ ಪ್ರಪ್ರಾಚೀನ ಐತಿಹಾಸಿಕ ವೀರಶೈವರು ಎಂದು ಸದ್ಯಕ್ಕೆ ಇಟ್ಟುಕೊಳ್ಳಬಹುದು. ಅನಿಮಿಷನ ಪ್ರಾಮುಖ್ಯವನ್ನು ಇಲ್ಲಿ ಸ್ವಲ್ಪ ದೊಡ್ಡದು ಮಾಡಿದ್ದೇನೆ ಎಂಬ ತುಸು ಅಳುಕು ಇದ್ದೇ ಇದೆ.

## ಅನಿಮಿಷನ ಬಗ್ಗೆ – ಹೆಚ್ಚಿನ ಮಾಹಿತಿ

ಹಲವು ವಚನಕಾರರು ಅನಿಮಿಷನನ್ನು ಉಲ್ಲೇಖಿಸಿದ್ದಾರೆ. ಉದಾ.: "ಅನಿಮಿಷಂಗೆ ಲಿಂಗವ ಕೊಟ್ಟಾತ ಬಸವಣ್ಣ; ಆ ಲಿಂಗ ನಿನಗೆ ಸೇರಿತ್ತಾಗಿ ಬಸವಣ್ಣನ ಸಂಪ್ರದಾಯದ ಕಂದನು ನೋಡಾ... ಪ್ರಭುವೆ" (ಚನ್ನಬಸವಣ್ಣ, ವ. 924). "ಅನಿಮಿಷನ ಕೈಯಲ್ಲಿ ಲಿಂಗವನಲ್ಲನು ಕೊಂಡುದಿಲ್ಲಾಗಿ, ಆದಿಯಲ್ಲಿ ಬಸವಣ್ಣಂಗೆ ಗುರುಲಿಂಗವಿಲ್ಲಾಗಿ, ಬಸವ ಚನ್ನಬಸವಂಗೆ ಕಾರಣವಿಲ್ಲಾಗಿ, ಇವರಾರೆಂಬುದ ಕೇಳಿದ್ದು ಇಲ್ಲ ಇಲ್ಲಾ ಎಂಬೆನು..." (ಘಟ್ಟಿವಾಳಯ್ಯ, ವ. 409); "...ಅಂದಿಗೆ ಅನಿಮಿಷನ ಕೈಯಲ್ಲಿ, ಇಂದಿಗೆ ಪ್ರಭುವಿನ ಗುಹೆಯಲ್ಲಿ ಗುಹೇಶ್ವರನಾದೆ. ಎನ್ನ ಗುಡಿಗೆ ಬಂದು ಗುಮ್ಮಟಂಗೆ ಮಠಸ್ಥನಾದೆ..." (ಮನುಮುನಿ ಗುಮ್ಮಟದೇವ, ವ. 1092). ಚನ್ನಬಸವಣ್ಣನ ವಚನ ಗಮನಿಸಿದರೆ ಅನಿಮಿಷನು ತನ್ನ ಸಾವಿಗಿಂತ ಮೊದಲು ಬಸವನಿಂದ ಲಿಂಗವನ್ನು ಪಡೆದವನು ಎಂಬ ಕಲ್ಪಿತಾರ್ಥ ಸೂಚಿಸುತ್ತದೆ. ಒಟ್ಟಾರೆ ಅಲ್ಲಮನಿಗೆ ಲಿಂಗ ಪ್ರದಾನವಾದುದು ಅನಿಮಿಷನಿಂದ ಎಂಬುದು ಸ್ಪಷ್ಟವಾಗಿದೆ. ಆ ಅನಿಮಿಷ ಒಬ್ಬ ಐತಿಹಾಸಿಕ ವ್ಯಕ್ತಿ – ಅವನು ಬಹು ಹಿಂದೆಯೇ ಕೈಲಾಸವಾಸಿಯಾಗಿ ಅವನ ಎಲುಬಿನ ಪಂಜರದಿಂದ ಅಲ್ಲಮ ಲಿಂಗವನ್ನು ಪಡೆದ ಎಂಬುದೇ ಐತಿಹಾಸಿಕ ಸತ್ಯ. ಒಂದು ವೇಳೆ ಅದು ಕಲ್ಪಿತವೆಂದು ಭಾವಿಸಿದರೂ, ಅನಿಮಿಷ ತನ್ನ ಕೊನೆಯ ಕ್ಷಣದಲ್ಲಿ ಅಲ್ಲಮನಿಗೆ ಲಿಂಗ ಪ್ರದಾನಮಾಡಿ ಶಿವೈಕ್ಯನಾದ ಎಂಬ ಊಹೆಗೂ ಅವಕಾಶವುಂಟು. ಅಲ್ಲಮನಂತೂ ಅನಿಮಿಷನನ್ನು ತನ್ನ ಗುರುವೆಂದೇ ಭಾವಿಸಿದ್ದ. ಅನಿಮಿಷನಿಂದಾಗಿ ಅಲ್ಲಮ ವೀರಶೈವನಾದ ಎಂಬುದಂತೂ ಅಪ್ಪಟ ಸತ್ಯ.



# 6

# “ವೀರಶೈವ”ದ ಬಗ್ಗೆ ಕೆಲವು ಭ್ರಮಾಮೂಲ ಕಲ್ಪನೆಗಳು

ಕಳೆದ ಎಂಟು ಹತ್ತು ವರ್ಷಗಳಲ್ಲಿ ಕೆಲವು ವಿದ್ವಾಂಸರು ಅಥವಾ 'ಸಂಶೋಧಕ'ರೆಂದು ಭಾವಿಸಿಕೊಂಡಿರುವ ವ್ಯಕ್ತಿಗಳು ಕೆಲವು ಭ್ರಮೆಗಳನ್ನು ಹುಟ್ಟಿಸಿ ಆ ಭ್ರಮೆಗಳೇ ಸತ್ಯ ಎಂದು ಹೇಳಲು ಅಥವಾ ಸಾಧಿಸಲು ಮತ್ತೆ ಮತ್ತೆ ಅದೇ ಭ್ರಮೆಗಳನ್ನೇ ಎತ್ತಿ ಹಿಡಿದಿದ್ದಾರೆ. ಅವುಗಳಲ್ಲಿ ಇವು ಕೆಲವು –

(1) 'ವೀರಶೈವ' ಪಂಥ ಬೇರೆ, 'ಲಿಂಗಾಯತ' ಪಂಥ ಬೇರೆ.

(2) 'ವೀರಶೈವ' ಪದ ಸೃಷ್ಟಿಯಾದುದು 13ನೇ ಶತಮಾನದ ಬಳಿಕ.

(3) 'ಲಿಂಗಾಯತ'ವೇ ಮೂಲ ಪದ – ಆ ಪಂಥದ ಸ್ಥಾಪಕ ಬಸವಣ್ಣ.

(4) 'ವೀರಶೈವ'ರು ಪಂಚಾಚಾರ್ಯ ಮಠಗಳ ಅನುಯಾಯಿಗಳು – ಅವರು ಹಿಂದೂಗಳು; 'ಲಿಂಗಾಯತ'ರು ವಿರಕ್ತಪೀಠಗಳ ಅನುಯಾಯಿಗಳು – ಅವರು ಹಿಂದೂಗಳು ಅಲ್ಲ.

(5) ವೀರಶೈವರಿಗೆ ಪೂಜ್ಯಗ್ರಂಥ ಸಂಸ್ಕೃತ 'ಸಿದ್ಧಾಂತ ಶಿಖಾಮಣಿ' : ಅದು ಈಚಿನದು; ಲಿಂಗಾಯತರಿಗೆ ಪೂಜ್ಯ ಗ್ರಂಥವೆಂದರೆ ಹನ್ನೆರಡನೇ ಶತಮಾನದ ವಚನವಾಙ್ಮಯ ಇ. ಇ.

ಇವೆಲ್ಲವೂ ಸ್ವಕಪೋಲ ಕಲ್ಪಿತಗಳು ಎಂದು, ಇಂತಹ ಅಸತ್ಯಗಳಿಂದ ವೀರಶೈವ ಅಥವಾ ಲಿಂಗಾಯತ ಛಿದ್ರವಾಗುತ್ತದೆ; ಮತ್ತು ದುರ್ಬಲವಾಗುತ್ತದೆ (ದುರ್ಬಲವಾಗಿದೆ) ಎಂದು ನಾನು ಸ್ಪಷ್ಟ ಆಧಾರಗಳನ್ನು ನೀಡಿ ಲೇಖನಗಳನ್ನು ಬರೆದಿದ್ದೇನೆ. ಅವುಗಳ ಸಾರಾಂಶವನ್ನು ಪೂಜ್ಯ ಡಾ. ಶಿವಕುಮಾರ ಸ್ವಾಮಿಗಳ ಅಭಿವಂದನ ಸಂಪುಟಕ್ಕೆ ಲೇಖನರೂಪವಾಗಿ ನೀಡುತ್ತಿದ್ದೇನೆ.

ವೀರಶೈವ ಮತ್ತು ಲಿಂಗಾಯತ ಇವು ಒಂದೇ ಅರ್ಥದ, ಒಂದೇ ಪಂಥ

ವನ್ನು ಸೂಚಿಸುವ ಭಿನ್ನ ಪದಗಳು : ಲತೆ–ಬಳ್ಳಿ, ವೃಕ್ಷ–ಮರ, ದೈವ–ಭಗವಂತ ಇದ್ದಂತೆ. ಕರ್ನಾಟಕದ ಉದ್ದಗಲಕ್ಕೂ ವೀರಶೈವ, ಲಿಂಗಾಯತಗಳು ಏಕಾರ್ಥದಲ್ಲಿ ಬಳಕೆಯಾಗುತ್ತಿವೆ. 'ವೀರಶೈವ' ಹೆಚ್ಚು ಗ್ರಂಥೋಕ್ತ ಮತ್ತು ಬರಹಗಳಲ್ಲಿ ವಿದ್ಯಾವಂತರ ಆಡುಮಾತಿನಲ್ಲಿ ಬಳಕೆಯಾಗುವುದು ಹೆಚ್ಚು. 'ಲಿಂಗಾಯತ'ವು ಜನರ ಆಡುಮಾತಿನಲ್ಲಿ ಹೆಚ್ಚು ಪ್ರಚುರ. ಹಿಂದಿನಿಂದಲೂ "ಧರ್ಮ–ಜಾತಿ" ಎಂಬ ಶೀರ್ಷಿಕೆಯ ಮುಂದೆ ಜನರು "ಹಿಂದೂ–ವೀರಶೈವ" ಅಥವಾ "ಹಿಂದೂ–ಲಿಂಗಾಯತ" ಎಂದೇ ದಾಖಲಿಸುತ್ತಿದ್ದಾರೆ. ಒಂದು ಧಾರ್ಮಿಕ ಶಾಖೆ ಅಥವಾ ಪಂಥ ಎಂಬರ್ಥದಲ್ಲಿ ವೀರಶೈವಕ್ಕಿಂತ ಲಿಂಗಾಯತ ಪದವು ಈಚಿನದು; ವಚನಗಳಲ್ಲಿ ವೀರಶೈವವು ಧರ್ಮ ಅಥವಾ ಧಾರ್ಮಿಕ ಪಂಥ ಎಂಬ ಪದ ಬರುವಂತೆ 'ಲಿಂಗಾಯತ' ಪದ ಬರುವುದಿಲ್ಲ. 'ಲಿಂಗಾಯತ' ಪದಕ್ಕೆ ಇದ್ದ ಮೂಲಾರ್ಥ ಲಿಂಗವನ್ನು ಗುರುವಿನಿಂದ ಸ್ವೀಕರಿಸುವ ವಿಧಿ, ಶಾಸ್ತ್ರ ಅಥವಾ ಲಿಂಗಧಾರಣೆ ಎಂದಿದ್ದು, ಮುಂದೆ ಹಾಗೆ ಲಿಂಗಧಾರಣೆ ಮಾಡಿಕೊಂಡ ವ್ಯಕ್ತಿ ಅಥವಾ ವೀರಶೈವ ಎಂಬ ಅರ್ಥವು ಬಂದಿತು.

'ವೀರಶೈವ' ಪದವು ಹನ್ನೆರಡನೆಯ ಶತಮಾನದ ವಚನಗಳಲ್ಲಿ ಹಲವೆಡೆ ಬರುತ್ತದೆ. ಅಲ್ಲದೆ ವಚನಪೂರ್ವ ಯುಗದ, ಎಂದರೆ ಸು. 1120ರ ಕೊಂಡಗುಳಿ ಕೇಶಿರಾಜನ ಕಂದಪದ್ಯಗಳಲ್ಲಿ ಕಂಡುಬರುತ್ತದೆ. ಅಲ್ಲೆಲ್ಲ ಅದು ಸ್ಪಷ್ಟವಾಗಿ ಒಂದು ಪಂಥ, ಒಂದು ಧಾರ್ಮಿಕ ವರ್ಗ, ಆ ಪಂಥ ಅಥವಾ ವರ್ಗಕ್ಕೆ ಸೇರಿದ ವ್ಯಕ್ತಿ ಎಂಬ ಈಗಿನ ಅರ್ಥಗಳಲ್ಲಿ ಬರುತ್ತದೆ. 'ಲಿಂಗಾಯತ' ಪದವು ಅದೇ ಕೊಂಡಗುಳಿ ಕೇಶಿರಾಜನಲ್ಲಿ, ವಚನ ಸಾಹಿತ್ಯದಲ್ಲಿ ಬಹು ವಿರಳವಾಗಿದ್ದು, ಅದಕ್ಕೆ ಲಿಂಗಧಾರಣೆ ಎಂಬರ್ಥ ಮಾತ್ರವಿದ್ದಿತು. ಮುಂದೆ 15–16ನೇ ಶತಮಾನಗಳ ಬಳಿಕ ಲಿಂಗಧಾರಣೆ ಮಾಡಿಕೊಂಡ ವ್ಯಕ್ತಿ, ಅಂತಹ ವ್ಯಕ್ತಿಗಳ ವರ್ಗ ಎಂಬರ್ಥವನ್ನು ಪಡೆಯಿತು. ಹನ್ನೆರಡನೆಯ ಶತಮಾನದಲ್ಲಿ ಅವೆರಡಕ್ಕೂ ಭಿನ್ನಾರ್ಥಗಳಿದ್ದರೂ ಈಗ ಅವೆರಡಕ್ಕೂ ಒಂದೇ ಅರ್ಥವಿದೆ. ಯಾವನು ವೀರಶೈವನೋ ಅವನೇ ಲಿಂಗಾಯತ; ಯಾವನು ಲಿಂಗಾಯತನೋ ಅವನೇ ವೀರಶೈವ. ಹಿಂದೆ 'ಲಿಂಗವಂತ' ಎಂಬ ಪದವೂ ಬಳಕೆಯಾಗುತ್ತಿತ್ತು – ಈಗ ಅದನ್ನು ತೀರ ವಿರಳವಾಗಿ ಕೆಲವರು ಬಳಸುತ್ತಾರೆ. ದಕ್ಷಿಣ ಕರ್ನಾಟಕದಲ್ಲಿ ಅದೇ ವೀರಶೈವರು ಎಂಬ ಅರ್ಥದಲ್ಲಿ "ಶಿವಾಚಾರದವರು" ಪದ ಬಳಕೆಯಲ್ಲಿದೆ.

"ವೀರಶೈವ" ಪದವು ವಚನಗಳಲ್ಲಿ ಮಾತ್ರವಲ್ಲ, ವಚನಗಳಲ್ಲಿ ಉಕ್ತವಾಗಿರುವ ಸಂಸ್ಕೃತ ಶ್ಲೋಕಗಳಲ್ಲಿ ನಾಲ್ಕಾರು ಕಡೆ ಇದೆ. ಸಂಸ್ಕೃತ ಶ್ಲೋಕಗಳು ಕನ್ನಡ ವಚನಗಳಿಗಿಂತ ಹಿಂದಿನವರು ಬರೆದದ್ದು. ವಚನಗಳಿಗಿಂತ ಹಿಂದೆಯೇ ವೀರಶೈವ ಪಂಥವನ್ನು ಕುರಿತಂತೆ ಸಂಸ್ಕೃತ ಕೃತಿಗಳು ರಚನೆಯಾಗಿದ್ದುವು – ಅವು ಯಾವುವೂ ದೊರಕಿಲ್ಲ. ಸಂಸ್ಕೃತ 'ಸಿದ್ಧಾಂತ ಶಿಖಾಮಣಿ'ಯಲ್ಲಿ ವೀರಶೈವ ಪದವಿದ್ದರೂ ಅದರ

ರಚನೆಯ ಕಾಲದ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಕೆಲವರು ಅದು ವಚನಪೂರ್ವ ಕಾಲಕ್ಕೆ ಸೇರಿದ್ದು ಎಂದು ಇನ್ನು ಕೆಲವರು ವಚನೋತ್ತರ ಕಾಲಕ್ಕೆ ಸೇರಿದ್ದು ಎಂದು ವಾದಿಸಿದ್ದಾರೆ. ಆದರೆ ಹನ್ನೆರಡನೆಯ ಶತಮಾನದ ವಚನಗಳ ಸಂಸ್ಕೃತ ಶ್ಲೋಕಗಳು ಹನ್ನೆರಡನೆಯ ಶತಮಾನಕ್ಕಿಂತ ಹಿಂದಿನವು ಎಂಬುದು ಪ್ರಶ್ನಾತೀತ.

ವೀರಶೈವ ಪದವು 13–14ನೇ ಶತಮಾನಕ್ಕಿಂತ ಈಚಿನ ಸೃಷ್ಟಿ ಎಂದು ವಾದಿಸುವವರು 'ಲಿಂಗಾಯತ' ಪದದ ಪ್ರಾಚೀನತೆಯ ಬಗ್ಗೆ ಪ್ರಶ್ನಿಸ ಹೋಗುವುದಿಲ್ಲ. 'ಲಿಂಗಾಯತ'ವೇ ಮೂಲ ಪದ ಎಂದು ವಾದಿಸುವುದು ಅವರಿಗೆ ಮುಖ್ಯವಾಗಿದೆ. 'ಲಿಂಗಾಯತ' ಪದವು ಈಗಿನ ಅರ್ಥದಲ್ಲಿ ವಚನಗಳಲ್ಲಿ ಬಂದಿದೆಯೇ ಎಂಬ ಪ್ರಶ್ನೆ ವಿಷಯದಲ್ಲಿ ಮೌನವನ್ನು ವಹಿಸಿ ತಮ್ಮ ಮೊಂಡುವಾದವನ್ನೇ ಮುಂದುಮಾಡು ತ್ತಾರೆ. ನೇರವಾದ ಪ್ರಶ್ನೆಗಳನ್ನು ಎದುರಿಸುವ ಶಕ್ತಿ ಅವರಿಗಿಲ್ಲ ಎಂಬುದು ಸ್ಪಷ್ಟವಾಗಿದೆ.

ಬಸವಣ್ಣ, ಹಿಂದೆ ನೋಡಿದಂತೆ ವೀರಶೈವ ಅಥವಾ ಲಿಂಗಾಯತ ಪಂಥದ ಸ್ಥಾಪಕ ಖಂಡಿತ ಅಲ್ಲ. ಅವನಿಗಿಂತ ಹಿಂದೆ ಇದ್ದ ವೀರಶೈವ ಧರ್ಮದ ಪ್ರಗತಿಪರ ತತ್ವಗಳನ್ನು ಗುರುತಿಸಿದ ಅವನು 'ಶೈವ'ನಾಗಿದ್ದವನು 'ವೀರಶೈವ'ನಾಗಿ ಅದರ ಕ್ರಾಂತಿ ಕಾರಕ ತತ್ವಗಳನ್ನು ತಾನು ಬದುಕಿ ಅದರ ಪ್ರಚಾರಕ್ಕೆ ಪ್ರಸಾರಕ್ಕೆ ನಿಮಿತ್ತವಾದನು. ಅವನೇ ತನ್ನ ಒಂದು ವಚನದಲ್ಲಿ ಹೀಗೆ ಹೇಳಿಕೊಂಡಿದ್ದಾನೆ : "ಎನ್ನ ಬಂದ ಭವಂಗಳನು ಪರಿಹರಿಸಿ, ಎನಗೆ ಭಕ್ತಿ ಘನವನೆತ್ತಿ ತೋರಿ, ಎನ್ನ ಹೊಂದಿದ ಶೈವ ಮಾರ್ಗಂಗಳನತಿಗಳೆದು ನಿಜ ವೀರಶೈವಾಚಾರವನರುಹಿ ತೋರಿ"ದ ಚನ್ನಬಸವಣ್ಣ ನಿಗೆ ತನ್ನ ಕೃತಜ್ಞತೆ ಅರ್ಪಿಸಿದ್ದಾನೆ. ಕರ್ಮಾಚರಣೆಗಳೇ ಪ್ರಧಾನವಾಗಿದ್ದ ಶೈವವನ್ನು ಬಿಟ್ಟು, ಭಕ್ತಿ ಪ್ರಧಾನವಾಗಿದ್ದ ವೀರಶೈವವನ್ನು ಅವನು ಅಂಗೀಕರಿಸಿದ. ಆ ಶಿವಭಕ್ತಿಯು ಜಾತಿ ಜಾತಿಗಳ ಎಲ್ಲೆಯನ್ನು ಮೀರಿದ್ದು – ನಿಜವಾದ ಭಕ್ತನಿಗೆ ಮೇಲು ಕೀಳು ಜಾತಿಗಳಿಲ್ಲ; ಶಿವಭಕ್ತನಾದ ಅಸ್ಪೃಶ್ಯನು ಶಿವಭಕ್ತನಲ್ಲದ ಮೇಲ್ಜಾತಿಯವನಿಗಿಂತ ಶ್ರೇಷ್ಠ; ಗಂಡು ಹೆಣ್ಣು ಎಲ್ಲ ದೃಷ್ಟಿಗಳಿಂದ ಸಮಾನರು; ಎಲ್ಲ ವೃತ್ತಿಗಳೂ ತಾತ್ವಿಕವಾಗಿ ಸಮಾನ ಮತ್ತು ಆ ವೃತ್ತಿ ಪರೋಕ್ಷವಾಗಿ ಅವರ ಭಕ್ತಿಸಾಧನೆಗೆ ಪೂರಕವಾಗಿರಬೇಕು; ಬಡವ–ಸಿರಿವಂತ ಎಂಬ ಭೇದ ಕೂಡದು : ಇಂತಹ ಸಾರ್ವಕಾಲಿಕ ಗುಣಗಳನ್ನು ಹೊಂದಿದ್ದ ವೀರಶೈವ ಪಂಥವು ಬಸವಣ್ಣನ ಕಾಲದವರೆಗೆ ಬಹುತೇಕ ತಾತ್ವಿಕ ರೂಪವಾಗಿದ್ದುದು ಬಸವನಿಂದಾಗಿ ಅದು ಜನರ ಬದುಕಿನ ಭಾಗವಾಯ್ತು. ಬಸವಣ್ಣ ಒಂದು ರೀತಿಯಲ್ಲಿ ವೀರಶೈವದ ಆನ್ವಯಿಕ ವಿಜ್ಞಾನಿ (Applied Science).

ವೀರಶೈವ ಅಥವಾ ಲಿಂಗಾಯತರಿಗೆ ವಚನಸಾಹಿತ್ಯದಂತೆಯೇ ಸಿದ್ಧಾಂತ ಶಿಖಾಮಣಿಯೂ ಆಧಾರಗ್ರಂಥ, ಪೂಜ್ಯಗ್ರಂಥ. ಎರಡೂ ಕನ್ನಡ, ಸಂಸ್ಕೃತ ಭಾಷೆ ಗಳಲ್ಲಿದ್ದರೂ ಸತ್ವಶಃ ಒಂದೇ. ವಚನಗಳು ಭಿನ್ನಭಿನ್ನ ಸ್ವಭಾವದ ಶರಣರ ಭಾವ ಗೀತಾತ್ಮಕ ರಚನೆಗಳು. ಅವುಗಳ ಸಾರವನ್ನು ವೀರಶೈವದ ಸೈದ್ಧಾಂತಿಕ ನೆಲೆಯನ್ನು

ಶಿಸ್ತುಬದ್ಧವಾಗಿ ಶಾಸ್ತ್ರಬದ್ಧವಾಗಿ ನಿರೂಪಿಸಿದ ಕೃತಿ ಸಂಸ್ಕೃತ ಸಿದ್ಧಾಂತ ಶಿಖಾಮಣಿ. ಎರಡರ ರೂಪ ಬೇರೆ; ಆದರೆ ಸ್ವರೂಪ ಒಂದೇ.

ಪಂಚಾಚಾರ್ಯರ ಗುರುಪೀಠಗಳು, ವಿರಕ್ತರ ವಿರಕ್ತಪೀಠಗಳು ಇವೆರಡಕ್ಕೂ ಸ್ವಲ್ಪ ಕರ್ತವ್ಯ ಭೇದವಿದೆಯೇ (ಅಥವಾ ಹಿಂದೆ ಭೇದವಿದ್ದಿತೇ) ಹೊರತು ಅವುಗಳ ಉದ್ದೇಶ ಒಂದೇ – ಲಿಂಗಾಯತ ಸಮಾಜವನ್ನು ಆಧ್ಯಾತ್ಮಿಕವಾಗಿ ಸಾಮಾಜಿಕವಾಗಿ ಮುನ್ನಡೆಯಿಸುವುದು, ಉತ್ತಮಪಡಿಸುವುದು, ಅದರ ಲೋಪ ದೋಷಗಳನ್ನು ತಿದ್ದುವುದು. ಗುರುಪೀಠಗಳು ಮುಖ್ಯವಾಗಿ ಇರುವುದು ಜನರ ಧಾರ್ಮಿಕ ವ್ಯವಸ್ಥೆಗೆ; ವಿರಕ್ತಪೀಠಗಳು ಇರುವುದು ಮುಖ್ಯವಾಗಿ ಜ್ಞಾನ ವ್ಯವಸ್ಥೆಗೆ. ಇದನ್ನು ಅಷ್ಟು ಸುಲಭವಾಗಿ ಬೇರ್ಪಡಿಸಲಿಕ್ಕಾಗುವುದಿಲ್ಲ. ಈಗಂತೂ ಎರಡೂ ಬಡವರಿಗೆ ಬಡ ವಿದ್ಯಾರ್ಥಿಗಳಿಗೆ ಬಹುವಿಧದ ಸಹಾಯಮಾಡುತ್ತಿವೆ; ವಿದ್ಯಾಕೇಂದ್ರಗಳನ್ನು ನಡೆಯಿಸುತ್ತಿವೆ. ಹೆಸರುಗಳನ್ನು ಬಿಟ್ಟರೆ ಎರಡೂ ಒಂದೇ ಬಗೆಯ ಬಹುಮುಖೀ ಕೆಲಸವನ್ನು ಮಾಡುತ್ತಿವೆ. ಗುರುಪೀಠಗಳು ಸಿದ್ಧಾಂತ ಶಿಖಾಮಣಿಗೆ ಹೆಚ್ಚು ಪ್ರಾಧಾನ್ಯ ಕೊಟ್ಟರೂ ವಚನವಾಙ್ಮಯವನ್ನು ಅವರು ತಿರಸ್ಕರಿಸಿಲ್ಲ. ವಿರಕ್ತಪೀಠಗಳು ವಚನವಾಙ್ಮಯಕ್ಕೆ ಹೆಚ್ಚು ಪ್ರಾಮುಖ್ಯ ಕೊಟ್ಟರೂ ಸಿದ್ಧಾಂತ ಶಿಖಾಮಣಿಗೆ ಸಂಸ್ಕೃತಕ್ಕೆ ಕಡಮೆ ಸ್ಥಾನವನ್ನು ನೀಡಿಲ್ಲ. ಅನೇಕ ವಿರಕ್ತಪೀಠಗಳು "ವೇದ, ಸಂಸ್ಕೃತ, ಆಗಮ ಪಾಠಶಾಲೆ"ಗಳನ್ನು ನಡೆಯಿಸುತ್ತಿವೆ. ಎರಡೂ ಎಲ್ಲ ದೃಷ್ಟಿಗಳಿಂದಲೂ ಸಮಾನ.

ಇನ್ನೊಂದು ಘೋರ ಅಪಪ್ರಚಾರವೆಂದರೆ, ವೀರಶೈವರು ಸಂಪ್ರದಾಯ ಪ್ರಿಯರು, ಹಿಂದೂಗಳು; ಲಿಂಗಾಯತರು ಪ್ರಗತಿಪರರು, ಹಿಂದೂಗಳಲ್ಲ ಎನ್ನುವ ವಾದ. ಈ ಬಗ್ಗೆ ನಾನು "ವೀರಶೈವ ಧರ್ಮ : ಭಾರತೀಯ ಸಂಸ್ಕೃತಿ (ಹಿಂದೂ–ಲಿಂಗಾಯತ)" ಎಂಬ ಪ್ರತ್ಯೇಕ ಕೃತಿಯನ್ನೇ ಬರೆದು ಸಾಕಷ್ಟು ಮಾಹಿತಿ ನೀಡಿ ವೀರಶೈವ ಅಥವಾ ಲಿಂಗಾಯತರು ಬ್ರಾಹ್ಮಣ, ಒಕ್ಕಲಿಗ, ಕುರುಬ, ಬೇಡ, ದಲಿತರಂತೆ ನಿಸ್ಸಂಶಯವಾಗಿ ಹಿಂದೂಗಳು ಎಂಬುದನ್ನು ಎತ್ತಿ ತೋರಿಸಿದ್ದೇನೆ. ಆ ಪುಸ್ತಕದ ವಿವರಗಳನ್ನು ಇಲ್ಲಿ ಕೊಡುವುದು ಅಸಾಧ್ಯ. ಹಿಂದೂ ಎಂದರೆ ವೇದಗಳಲ್ಲಿ ಶ್ರದ್ಧೆಯುಳ್ಳವನು ಎಂದು ಸರ್ವೋಚ್ಚ ನ್ಯಾಯಾಲಯ ತನ್ನ ಐತಿಹಾಸಿಕ ತೀರ್ಪೊಂದರಲ್ಲಿ ಸ್ಪಷ್ಟವಾಗಿ ಹೇಳಿದೆ. ವಚನಗಳು ವೇದಗಳನ್ನು ವಿರೋಧಿಸಿವೆ ಎಂಬ ಜೊಳ್ಳು ವಾದ ಒಂದಿದೆ. ವಚನಗಳಲ್ಲಿ ಬಂದಿರುವ ಖಂಡನೆ ವೇದಗಳನ್ನು ಕುರಿತಂತೆ ಕಂಡರೂ ಅದು ವೇದಗಳನ್ನು ಬಾಯಲ್ಲಿ ಉದ್ಧರಿಸುತ್ತ ಅಶುದ್ಧ ಜೀವನವನ್ನು ನಡಸುವ ಮೌಢ್ಯದ ಜನರನ್ನು ಕುರಿತದ್ದು. ಆದರೆ ಎಷ್ಟೋ ಕಡೆ ಶ್ರುತಿ ಸ್ಮೃತಿಗಳಿಂದ ವಚನಕಾರರು ಸಾಕಷ್ಟು ಉಲ್ಲೇಖಗಳನ್ನು ತಮ್ಮ ಪ್ರತಿಪಾದನೆಗೆ ಬಳಸಿಕೊಂಡಿದ್ದಾರೆ. ವಚನಕಾರರಲ್ಲಿ ಹಲವರು ಸಂಸ್ಕೃತವನ್ನು ಬಲ್ಲ ವೇದ ವಿದ್ವಾಂಸರೂ ಇದ್ದರು. "ಕೂಡಲಸಂಗಮನಲ್ಲದಿಲ್ಲವೆಂದಿತ್ತು ವೇದ" ಎಂಬಂತಹ ಕಡೆ ವೇದಗಳ ಬಗ್ಗೆ

ಗೌರವ ಭಾವನೆಯೂ ಕಂಡುಬರುತ್ತದೆ. ವೇದಾಭ್ಯಾಸವನ್ನು ಮಾಡುತ್ತಿದ್ದವರು ಬಹುತೇಕ ಮೇಲ್ವರ್ಗದವರಾಗಿದ್ದು ಅವರು ಕೆಳವರ್ಗದವರನ್ನು ಕೀಳಾಗಿ ಕಾಣು ತ್ತಿದ್ದುದರಿಂದ ಅವರ ವೇದಪಾಂಡಿತ್ಯವನ್ನೇ ವಚನಕಾರರು ಅಲ್ಲಗಳೆದರು. ವಚನಕಾರರ ಬಳಿಕ ಬಂದ ಚನ್ನವೀರಾರ್ಯನಂತಹ ಹಲವರು ವೇದದ ಪುರುಷಸೂಕ್ತಕ್ಕೆ ಕನ್ನಡದಲ್ಲಿ ಭಾಷ್ಯವನ್ನು ಬರೆದಿದ್ದಾರೆ. ಆಧುನಿಕ ಕಾಲದಲ್ಲಂತೂ ಸಿದ್ಧಗಂಗೆಯಂತಹ ಹಲವು ವೀರಶೈವ ಮಠಗಳು "ವೇದ ಸಂಸ್ಕೃತ ಪಾಠಶಾಲೆ"ಗಳನ್ನು ನಡೆಯಿಸುತ್ತಿವೆ. ಫ.ಗು. ಹಳಕಟ್ಟಿಯವರು ಒಂದೆಡೆ ಹೇಳುತ್ತಾರೆ – "ವೀರಶೈವರು ವೇದೋಪನಿಷತ್ತು ಗಳನ್ನು ಜೈನ ಬೌದ್ಧರಂತೆ ತಿರಸ್ಕರಿಸುವುದಿಲ್ಲ... ಹಿಂದೂ ಧರ್ಮದ ಮಹತ್ವದ ಧರ್ಮಗ್ರಂಥಗಳಲ್ಲಿರುವ ಉದಾತ್ತ ತತ್ವಗಳು ವೀರಶೈವ ಧರ್ಮದಲ್ಲಿ ಪೋಣಿಸಲ್ಪಟ್ಟಿರು ತ್ತವೆ"; ಪೂಜ್ಯ ಶ್ರೀ ರಂಭಾಪುರಿ ಸ್ವಾಮೀಜಿಯವರು ಹೀಗೆ ಹೇಳುತ್ತಾರೆ – "ವೀರಶೈವರು ಹಕ್ಕುಗಳಿಗಾಗಿ ಹೋರಾಟ ಮಾಡೋಣ. ಆದರೆ ಪರಂಪರೆ ಸಾಂಸ್ಕೃತಿಕ ದೃಷ್ಟಿಯಿಂದ ವೀರಶೈವರು ಹಿಂದೂಗಳೇ." ಪೂಜ್ಯ ಶ್ರೀ ಸಿದ್ಧಗಂಗಾ ಶಿವಕುಮಾರ ಸ್ವಾಮೀಜಿಯವರ ಈ ಮಾತುಗಳು ಗಮನಾರ್ಹ. "ವೀರಶೈವ ಧರ್ಮ ಹಿಂದೂ ಧರ್ಮದ, ಅರ್ಥಾತ್ ಶೈವ ಧರ್ಮದ ಒಂದು ಶಾಖೆ, ದ್ವೈತ ಅದ್ವೈತ ವಿಶಿಷ್ಟಾದ್ವೈತ ಪಂಥಗಳಿದ್ದಂತೆ... ಶಿವ, ಲಿಂಗ, ವಿಭೂತಿ ಮೊದಲಾದ ಕಲ್ಪನೆಗಳು ಹಿಂದೂ ಧರ್ಮದ ಜನ ಕುಕ್ಷಿಯಲ್ಲಿವೆ ಎಂಬುದನ್ನು ಮರೆಯಬಾರದು... ಹಿಂದೂ ಧರ್ಮ ನಿಜಕ್ಕೂ ವಿಶಾಲವಾಗಿರುವ ಬುಡ ಭದ್ರವಾಗಿರುವ ಧರ್ಮ. ಬ್ರಾಹ್ಮಣ ಜಾತಿಯೊಡನೆ ಅದರ ಸಮೀಕರಣ ಸರಿಯಲ್ಲ. ಅನೇಕ ರಾಜಕಾರಣಿಗಳಿಗೆ ಹಿಂದೂ ಧರ್ಮದ ಜಾಯಮಾನವೇ ಗೊತ್ತಿಲ್ಲ... ಪರಧರ್ಮೀಯರಿಗಿಂತ ಹೆಚ್ಚಾಗಿ ಅವರ (ರಾಜಕಾರಣಿಗಳ) ಅಜ್ಞಾನ ಬೇನಿಷ್ಠೆಗಳಿಂದಾಗಿ ಹಿಂದೂ ಧರ್ಮಕ್ಕೆ ಧಕ್ಕೆಯೊದಗಿದೆ" (ಡಾ. ದೇ.ಜ.ಗೌ. ಅವರಿಂದ ಸಂದರ್ಶನ, ಡಾ. ಜಿ.ಎಸ್. ಶಿವರುದ್ರಪ್ಪನವರಿಂದ ಸಂಪಾದಿತ "ಮಹಾತಪಸ್ವಿ" ಗ್ರಂಥದಲ್ಲಿ).

ಗಮನಿಸಬೇಕು – ಎಲ್ಲ ಪ್ರಾಜ್ಞರೂ ಉದ್ದಕ್ಕೂ 'ವೀರಶೈವ' ಪದವನ್ನೇ ಬಳಸಿ ದ್ದಾರೆ. ಕರ್ನಾಟಕದ ಇಂದಿನ ಅತ್ಯಂತ ಪ್ರಾಜ್ಞರೂ ವಿವೇಕಿಗಳೂ ಒಳವಿಚಾರದ ವಿರಳ ತಪಸ್ವಿಗಳೂ ಆಗಿರುವ ಪೂಜ್ಯ ಶ್ರೀ ಸಿದ್ಧಗಂಗಾ ಮಹಾಸ್ವಾಮಿಗಳ ಮೇಲಿನ ವಾಕ್ಯಗಳು ಎಲ್ಲ ವಿವೇಕರಹಿತ ವಾದಗಳಿಗೆ ಇತಿಶ್ರೀ 'ಹಾಡಲಿ' ಎಂದು ನಾನು ಹಾರೈಸುತ್ತೇನೆ.



## 7

# ರೇವಣಸಿದ್ಧ – ಹಿನ್ನೆಲೆ

ವೀರಶೈವ ಧರ್ಮವು ಹನ್ನೊಂದನೇ ಶತಮಾನಕ್ಕಿಂತ ಹಿಂದಿನದು ಎಂಬುದು ಸ್ಪಷ್ಟ. ಕ್ರಿ.ಶ. 1040–45ರಲ್ಲಿದ್ದ ದೇವರ ದಾಸಿಮಯ್ಯನು ನಮಗೆ ತಿಳಿದ ಮಟ್ಟಿಗೆ ಮೊದಲ ಶರಣ, ವೀರಶೈವ – ಅವನು ಕಲ್ಯಾಣ ಚಾಳುಕ್ಯ ಚಕ್ರವರ್ತಿ ಇಮ್ಮಡಿ ಜಯಸಿಂಹ, ಅವನ ಪತ್ನಿ ಸುಗ್ಗಲೆಯರ (1015–46) ರಾಜಗುರು. ಜಯಸಿಂಹನ ರಾಜ್ಯದ ಪ್ರಮುಖ ರಾಜಕೀಯ ಕೇಂದ್ರಗಳಲ್ಲಿ ರೇಣುಕಾಚಾರ್ಯ ಅವತರಿಸಿದನೆಂದು ಹೇಳಲಾದ ಆಂಧ್ರದ ಕೊಲ್ಲಿಪಾಕೆಯೂ ಒಂದು. ಆ ಕಾಲಕ್ಕೆ ಅದು ಕಾಳಾಮುಖ ಕೇಂದ್ರವಾಗಿತ್ತು. ದೇವರ ದಾಸಿಮಯ್ಯನಿಂದಾಗಿ ಸುಗ್ಗಲೆಯು ಜೈನ ಧರ್ಮವನ್ನು ಬಿಟ್ಟು ವೀರಶೈವಳಾದಳೆಂದು ಕತೆಗಳಿವೆ. ದೇವರ ದಾಸಿಮಯ್ಯ ಸಂಸ್ಕೃತದಲ್ಲಾಗಲಿ ಕನ್ನಡದಲ್ಲಾಗಲಿ ಏನು ಬರೆದಿರುವನೋ ತಿಳಿಯದು (ಕ್ರಿ.ಶ. 1120–30ರಲ್ಲಿದ್ದ ವಚನಕಾರ ಜೇಡರ ದಾಸಿಮಯ್ಯ ಬೇರೆ; ಇವನ ಪತ್ನಿ ದುಗ್ಗಳೆಯೂ ವಚನಕಾರ್ತಿ).

ದೇವರ ದಾಸಿಮಯ್ಯನ ವಿಷಯ ಪುರಾಣಗಳಲ್ಲಿ ಬರುತ್ತದೆ. ಆದರೆ ಅವನ ಕಾಲದ್ದೇ ಆಗಿರುವ ಕ್ರಿ.ಶ. 1033ರ ಶಾಸನದಲ್ಲಿ 'ವೀರಮಾಹೇಶ್ವರ' (=ವೀರಶೈವ) ಹೆಸರು ಬಂದಿದೆ, ಮತ್ತು ಅದೇ ವೀರಶೈವದ ಅತ್ಯಂತ ಪ್ರಪ್ರಾಚೀನ ತೇದಿಯುಳ್ಳ ದಾಖಲೆ. ಆ ಶಾಸನದ ವಿವರಗಳು ಹಿಂದಿನ ಲೇಖನಗಳಲ್ಲಿವೆ. ವೀರಶೈವ ಅಥವಾ ಲಿಂಗಾಯತವು ಶೈವ ಧರ್ಮದ ಒಂದು ಪ್ರಗತಿಪರ ದೃಷ್ಟಿಯ ಶಾಖೆ. ವೀರಶೈವದ ಉಲ್ಲೇಖಗಳು, ಅದೂ ಲಿಂಗಾಯತವೂ ಒಂದೇ, ಅವೆರಡೂ ಸಮಾನಾರ್ಥಕ ಪದಗಳು, ಶೈವ ಧರ್ಮದ ಶಾಖೆಯಾಗಿರುವ ವೀರಶೈವವು ಶೈವ ಧರ್ಮದಂತೆಯೇ ಹಿಂದೂ ಧರ್ಮದ ಒಂದು ಭಾಗ ಇತ್ಯಾದಿ ವಿವರಗಳನ್ನು ಹಿಂದಿನ ಲೇಖನಗಳಲ್ಲಿ ಕೊಡಲಾಗಿದೆ.

ನಮಗೆ ತಿಳಿದ ಮಟ್ಟಿಗೆ ಜೇಡರ ದಾಸಿಮಯ್ಯ ಮತ್ತು ಅವನ ಪತ್ನಿ ದುಗ್ಗಲೆ ಇವರೇ ಮೊದಲ ವಚನಕಾರ–ವಚನಕಾರ್ತಿಯರು; ಇಬ್ಬರೂ ಕೆಳವರ್ಗದ ನೇಕಾರ

ವರ್ಗಕ್ಕೆ ಸೇರಿದವರು. ಕನ್ನಡ ಸಾಹಿತ್ಯದಲ್ಲಿ ಬಡವರ ಹಸಿವಿನ ದಾರುಣತೆಯ ವಿಷಯವನ್ನು ಮೊದಲು ಪ್ರಸ್ತಾಪಿಸಿದವನು ಜೇಡರ ದಾಸಿಮಯ್ಯ ಎಂಬುದು ಗಮನಾರ್ಹ. ("ಒಡಲುಗೊಂಡವ ಹಸಿವ, ಒಡಲುಗೊಂಡವ ಹುಸಿವ...") ಅವನ ಸಮಕಾಲೀನ ಎನ್ನಬಹುದಾದ ರೇವಣಸಿದ್ಧನ ಸಂಕ್ಷಿಪ್ತ ವ್ಯಕ್ತಿತ್ವ ಪರಿಚಯವನ್ನು ಈ ಲೇಖನದಲ್ಲಿ ಮಾಡಿಕೊಟ್ಟಿದೆ. ಅವನು ಗಗನಯಾನ ಸಾಮರ್ಥ್ಯದಿಂದ ಲಂಕೆಗೆ ಹೋಗಿ ಅಲ್ಲಿ ಹಲವಾರು ಶಿವಲಿಂಗಗಳನ್ನು ಸ್ಥಾಪಿಸಿದ ಎಂಬ ಕತೆಯ ಹಿನ್ನೆಲೆಯಲ್ಲಿ ಒಂದು ಐತಿಹಾಸಿಕ ವಾಸ್ತವವಿದೆ. ಅವನು ಲಂಕೆಗೆ ಹೋದುದು ರಾಮೇಶ್ವರದ ಸಮುದ್ರದ ಕೊಲ್ಲಿಯ ಮೂಲಕ; ಹಿಂದೆ ಜನರು ಅಲ್ಲಿನ ಇಕ್ಕಟ್ಟಾದ ಸಮುದ್ರದಲ್ಲಿ ದೋಣಿ ಮೂಲಕ ಹಾದು ಸಮೀಪದ ಲಂಕಾ ದ್ವೀಪದ ಉತ್ತರ ಭಾಗದ ಜಾಫ್ನಾ ಸೇರುತ್ತಿದ್ದರು. ಕೆಲವು ವರ್ಷಗಳ ಹಿಂದೆ ನಾನು ರಾಮಸೇತುವಿಗೆ ಹೋದಾಗ ಅಲ್ಲಿನ ರಾಮೇಶ್ವರ ಮೂರ್ತಿಯ ದರ್ಶನವನ್ನು ಮಾಡಿಸುವುದಾಗಿ ಸ್ಥಳೀಯ ವೀರಶೈವರು ಕೇಳಿಕೊಂಡರು – ಎಂದರೆ ಆ ಪ್ರದೇಶದಲ್ಲಿ ಈಗಲೂ ಕೆಲವರು ವೀರಶೈವರಿದ್ದಾರೆ. ಶ್ರೀಲಂಕಾದ ಉತ್ತರ ಭಾಗದ ಜಾಫ್ನಾ ನಗರದಿಂದ ಹದಿನೈದು ಕಿಲೋ ಮೀಟರ್ ದೂರವಿರುವ ಕಿರುಮಲಾಯ್ ಎಂಬ ಗ್ರಾಮದಲ್ಲಿ 'ರೇಣುಕಾಶ್ರಮ', 'ರೇಣುಕವನ' ಮಠಗಳಿದ್ದು ಅಲ್ಲಿ ನೂರಾರು ವೀರಶೈವ ಕುಟುಂಬಗಳಿವೆ ('ಜನಕಲ್ಯಾಣ', ಕನ್ನಡ ಪಾಕ್ಷಿಕ ಪತ್ರಿಕೆ, 1.3.2012). ಕಿರುಮಲಾಯ್ ಗ್ರಾಮಕ್ಕೆ ಎರಡು ಬಾರಿ ಭೇಟಿ ನೀಡಿರುವ ಬೆಂಗಳೂರಿನ ವೀರಯ್ಯಸ್ವಾಮಿ ಶಾಸ್ತ್ರೀ ಮಠ ಅವರನ್ನೇ ನಾನು ಸಂದರ್ಶಿಸಿ ಅವರಿಂದ ಉಪಯುಕ್ತ ಮಾಹಿತಿ ಪಡೆದಿದ್ದೇನೆ. ಅವರು ಅಲ್ಲಿ ಕನಿಷ್ಠ ಇಪ್ಪತ್ತೈದು ಜನರಿಗೆ ವಿಧಿವತ್ತಾಗಿ ಲಿಂಗಧಾರಣೆ ಮಾಡಿದ್ದಾರೆ; ಅಲ್ಲಿನ ಜನ ವ್ಯವಸ್ಥೆ ಮಾಡಿದ್ದ ಉತ್ಸವದಲ್ಲಿ ಭಾಗವಹಿಸಿದ್ದಾರೆ, ಮತ್ತು ಅಲ್ಲಿನ ವೀರಶೈವರಿಂದ ಸನ್ಮಾನ ಪತ್ರಗಳನ್ನು ಸ್ವೀಕರಿಸಿ ಪ್ರವಚನ ಮಾಡಿದ್ದಾರೆ. ಅಲ್ಲಿನ ವೀರಶೈವ ಭಕ್ತರು ಎಲ್ಲ ವೀರಶೈವರಂತೆ ಸಸ್ಯಾಹಾರಿಗಳು; ಮೈಮೇಲೆ ಲಿಂಗವನ್ನು ಧರಿಸಿದರೂ ಹಲವರು ಆ ಪ್ರದೇಶದ ಬೌದ್ಧರು ಹಿಂಸಿಸಿ ಅವನ್ನು ಕಿತ್ತು ಹಾಕುತ್ತಾರೆಂದು ಹೆದರಿ ಅವನ್ನು ಒಳಗಿಟ್ಟು ಗುಟ್ಟಾಗಿ ಪೂಜಿಸುತ್ತಾರೆ (ಇದು ನನಗೆ ಅಚ್ಚರಿ ಉಂಟುಮಾಡಿತು). ಅವರಲ್ಲಿ ವಿದ್ಯಾವಂತರಿಗೆ 'ಸಿದ್ಧಾಂತ ಶಿಖಾಮಣಿ' ವಿಷಯ ಗೊತ್ತೇ ಹೊರತು, ಬಸವಣ್ಣ ಸೇರಿದಂತೆ ಶರಣರು, ಅವರು ಬರೆದಿರುವ ವಚನಗಳು ಇವು ಗೊತ್ತೇ ಇಲ್ಲ. ಇದರಿಂದ ಒಂದು ಸೂಚಿತವಾಗುತ್ತದೆ – ರೇವಣಸಿದ್ಧ ಶ್ರೀಲಂಕೆಗೆ ಹೋಗಿದ್ದು ನಿಜ. ನನಗೆ ತಿಳಿದ ಮಟ್ಟಿಗೆ ಹಿಂದಿನ ವೀರಶೈವರಲ್ಲಿ ಅವನಷ್ಟು ದೇಶ ಸಂಚಾರ ಮಾಡಿದವರು ಯಾರೂ ಇಲ್ಲ. ಅವನ ಮತ್ತು ಅವನ ಮಗ ರುದ್ರಮುನಿಯ ಹೆಸರಿನ ಜಾಗಗಳು ಹಲವಾರು ಇವೆ. ರಾಮನಗರ ಪಕ್ಕದ ರೇವಣಸಿದ್ದೇಶ್ವರ ಬೆಟ್ಟ ಬಹು ಪ್ರಸಿದ್ಧ. ಶಿವಗಂಗೆಯ ಬೆಟ್ಟದ ಮೇಲೆ ಅವನ ಹೆಸರಿನ ಗುಡಿ ಇದೆ. ಬಸವಣ್ಣನ ತಾಯಿಯ ತೌರ್ಮನೆ ಇಂಗುಳೇಶ್ವರದಲ್ಲೂ ಅವನ ಹೆಸರಿನ ಗವಿ ಇದೆ.

ಮಹಾರಾಷ್ಟದ ಕೊಲ್ಲಾಪುರ ಸಮೀಪ ಅವನ ಹೆಸರಿನ ಸ್ಮಾರಕವಿದೆ. ಆಂಧ್ರದಲ್ಲೂ ಹಲವಿವೆ. ತಮಿಳುನಾಡು, ಕೇರಳಗಳಲ್ಲಿ ವೀರಶೈವವು ಪ್ರಚುರವಾಗಲು ಅವನು ಕಾರಣ ಎನ್ನಬಹುದು.

ಇಮ್ಮಡಿ ಜಯಸಿಂಹನ 'ರಾಜಗುರು' ದೇವರ ದಾಸಿಮಯ್ಯ, ಹರಿಹರನ ಪ್ರಕಾರ ಹುಟ್ಟಿದಾಗ ಕೈಯಲ್ಲಿ 'ಲಾಕುಳ'ವನ್ನು ಹಿಡಿದಿದ್ದ ರೇವಣಸಿದ್ಧ ಇವರು ಲಾಕುಳಶೈವದ ಮತ್ತು ವೀರಶೈವ ಪಂಥದ ಎರಡು ಕೊಂಡಿಗಳೆಂದರೆ ತಪ್ಪಿಲ್ಲ. (ದೇವರ ದಾಸಿಮಯ್ಯ, ರೇವಣಸಿದ್ಧ ಇಬ್ಬರೂ ವೀರಶೈವರೇ.)

ರೇವಣಸಿದ್ಧ ಪವಾಡ ಪುರುಷನೆಂದು ಅವನ ಕಾಲದಲ್ಲೇ ಜನರು ನಂಬಿದ್ದರು. ಅವನು ಸಮಾಜಸೇವಾ ಕಾರ್ಯವನ್ನು ಮಾಡಿದವನು; ಗೃಹಸ್ಥನಾಗಿ ಬದುಕಿದವನು; ಮತ್ತು ವಚನಕಾರನೂ ಹೌದು. ಈ ಮುಂದಿನ ಲೇಖನಗಳಲ್ಲಿ ಅವನ, ಮುಖ್ಯವಾಗಿ ಬಸವಣ್ಣನ ವ್ಯಕ್ತಿತ್ವವನ್ನು ಕುರಿತಾದ ಬರಹಗಳಿವೆ. ಹೆಚ್ಚಿನ ಸಂಪ್ರಬಂಧಗಳು ಸಹಜ ವಾಗಿಯೇ ಬಸವನನ್ನು ಕುರಿತಾದುವು.



# 8

# ಅಪ್ರಸಿದ್ಧ ವಚನಕಾರ ರೇವಣ"ಸಿದ್ಧ"

ಕೇವಲ ಪೌರಾಣಿಕ ಪುರುಷ, ಪವಾಡ ಪುರುಷ ಎಂಮೋ ಮಡಿವಂತ ವೀರಶೈವ ಎಂಮೋ ಹಲವರು ಭಾವಿಸಿರುವುದರಿಂದ ರೇವಣಸಿದ್ಧ ಬಸವಣ್ಣನಷ್ಟು ಪ್ರಸಿದ್ಧನಾಗಿಲ್ಲ. ರೇವಣಸಿದ್ಧ ಒಬ್ಬ ಪ್ರಖರ ಕ್ರಾಂತಿಕಾರಿಯಲ್ಲದಿದ್ದರೂ ಜನತೆ ತೀವ್ರವಾಗಿ ಗಮನಿಸಬೇಕಾದ ವ್ಯಕ್ತಿ, ಮತ್ತು ಅವನೊಬ್ಬ ವಚನಕಾರ ಎಂಬುದನ್ನು ಸೂಚಿಸುವ ಉದ್ದೇಶ ಈ ಕಿರು ಲೇಖನದ್ದು.

ರೇಣುಕ ಎಂಬ ಕೈಲಾಸದ ಶಿವನ ಆಸ್ಥಾನದ ಗಣ ಕೊಲ್ಲಿಪಾಕಿಯ (ಈಗಿನ ಆಂಧ್ರದ ಕೊನಲುಪಾಕ) ಶಿವಲಿಂಗದಿಂದ ಮೂಡಿ ಬಂದು ರೇವಣಸಿದ್ಧ ಎಂಬ ಹೆಸರನ್ನು ಪಡೆದ ಎಂಬುದು ಒಂದು ಪೌರಾಣಿಕ ಕಲ್ಪನೆ. ಅವನೂ ಸಾಮಾನ್ಯರಂತೆ ಒಬ್ಬ ಮಾನವ – ಅವನ ತಂದೆ ತಾಯಂದಿರ ಹೆಸರು ತಿಳಿದು ಬಂದಿಲ್ಲ. ('ರೇವ+ಅಣ್ಣ' ಹೆಸರನ್ನು ಗಮನಿಸಿದರೆ ಅವನು ಹುಟ್ಟಿದ್ದು ಕರ್ನಾಟಕದಲ್ಲಿ ಎಂಬುದು ಸ್ಪಷ್ಟ.)

ಅಕ್ಕನಾಗಮ್ಮನ ಈ ಮಾತು ಗಮನಿಸಿ – "ಅಂಗದಿಂದುದಯವಾದಾತ ಮಡಿವಾಳಯ್ಯ; ಲಿಂಗದಿಂದುದಯವಾದಾತ ರೇವಣಸಿದ್ಧ; ಭಸ್ಮದಿಂದುದಯವಾದಾತ ಸಿದ್ಧರಾಮಯ್ಯ..." ಶರಣರು ಬದುಕಿದ್ದಾಗಲೇ ಮೇಲಿನಂತಹ ಶ್ರದ್ಧಾಮೂಲ ಕಲ್ಪನೆಗಳು ರೂಢಿಯಲ್ಲಿದ್ದುವು. ರೇವಣಸಿದ್ಧನ ಮಗ ರುದ್ರಮುನಿಯಿಂದ ಲಿಂಗದೀಕ್ಷೆ ಪಡೆದ ಹಾವಿನಹಾಳ ಕಲ್ಲಯ್ಯ, ಮೆರೆಮಿಂಡಯ್ಯ, ಚನ್ನಬಸವಣ್ಣ ಇವರೇ ಮೊದಲಾದವರೂ ರೇವಣಸಿದ್ಧನನ್ನು 'ಗುರು' ಎಂದೇ ಸ್ತೋತ್ರಮಾಡಿದ್ದಾರೆ. ಮುಂದೆ ನೋಡುವಂತೆ ಬಿಜ್ಜಳ, ಸಿದ್ಧರಾಮ ಇವರೇ ಮೊದಲಾದ ಐತಿಹಾಸಿಕ ವ್ಯಕ್ತಿಗಳ ಸಮಕಾಲೀನನಾಗಿದ್ದ ರೇವಣಸಿದ್ಧನದು ಅಪೂರ್ವ ವ್ಯಕ್ತಿತ್ವ.

ಅವನ ಬಗ್ಗೆ ಬಂದಿರುವ ರಗಳೆ ಕಾವ್ಯ, ಪುರಾಣಗಳನ್ನು ನೋಡಿದರೆ ಅವನ ಜೀವನವೆಲ್ಲ ಅದ್ಭುತ ಪವಾಡಗಳಿಂದ ತುಂಬಿ ತುಳುಕಿದ್ದು ಆ ಕಥೆಗಳಲ್ಲಿ ಮೂಡಿ ಬರುವ ಐತಿಹಾಸಿಕ, ವಾಸ್ತವ ಚಿತ್ರವನ್ನು ಹೆಕ್ಕಿ ತೆಗೆಯುವುದು ಬಹು ಪ್ರಯಾಸದ

ಕೆಲಸ. ಅಂತಹ ಕತೆಗಳಿಂದ ಬಸವಣ್ಣನವರ ಜೀವನ ಚರಿತ್ರೆಯ ವಾಸ್ತವಾಂಶಗಳನ್ನು ಹೆಕ್ಕಿ ತೆಗೆಯುವುದು ನನಗೆ ಪ್ರಯಾಸವೆನ್ನಿಸಲಿಲ್ಲ. ಇಷ್ಟಂತೂ ನಿಜ – ಅವನು ಒಬ್ಬ ಯೋಗಿ; ಯೋಗ ಸಿದ್ಧಿಯನ್ನು ಪಡೆದಿದ್ದ 'ಸಿದ್ಧ'ಪುರುಷ. ಅವನು ನಡಸಿದನೆನ್ನಲಾದ ಪವಾಡಗಳ ವಾಸ್ತವ್ಯದ ಬಗ್ಗೆ ತಾರ್ಕಿಕವಾಗಿ ಚರ್ಚಿಸುವುದು ಬಹು ಕಷ್ಟ. ಅಮೆರಿಕ ದಲ್ಲಿರುವವರನ್ನು ಬೆಂಗಳೂರಿಂದಲೇ ಕಂಡು ಮಾತನಾಡಿಸುವುದು ಸಾಧ್ಯವಾಗಿದ್ದರೆ, ವಿಮಾನದಲ್ಲಿ ಹಾರಿ ಹೋಗಿ ಜಪಾನನ್ನು ಸ್ವತಃ ನೋಡಲು ಸಾಧ್ಯವಾಗುವುದಾದರೆ ದೂರದರ್ಶನ, ದೂರವಾಣಿ, ವಿಮಾನಗಳನ್ನು ರೂಪಿಸಿರುವ ಮನುಷ್ಯನ ಬುದ್ಧಿಗೆ ಆ ಕಾರ್ಯಗಳನ್ನು ಸಾಧಿಸುವುದು ಏಕೆ ಸಾಧ್ಯವಿಲ್ಲ? ಪವಾಡಗಳು ನಿಜ ಎಂದು ವಾದಿಸು ವವರಿಗೆ ಉತ್ತರ ಕೊಡುವುದು ಅಷ್ಟು ಸುಲಭ ಅಲ್ಲ. ರೇವಣಸಿದ್ಧನು ಆಧುನಿಕ ಕಾಲದ ಪುಟ್ಟಪರ್ತಿ ಸಾಯಿಬಾಬಾರನ್ನು ಹೋಲುತ್ತಾನೆ.

ಯೋಗ ಸಾಧನೆಯಿಂದ ಅಣಿಮಾ (ಸೂಕ್ಷ್ಮ ಆಕಾರ ತಾಳುವಿಕೆ), ಮಹಿಮಾ (ಬೃಹತ್ತಾಗಿ ಬೆಳೆಯುವುದು), ಗರಿಮಾ (ಭಾರಿ ತೂಕ ತಾಳುವುದು), ಲಘಿಮಾ (ತೂಕರಹಿತವಾಗುವುದು) ಇತ್ಯಾದಿ ಅಲೌಕಿಕ 'ಅಷ್ಟ ಸಿದ್ಧಿ'ಗಳನ್ನು ಸಾಧನೆಯಿಂದ ಮೈಗೂಡಿಸಿಕೊಂಡಿದ್ದ ರೇವಣಸಿದ್ಧ ಹನ್ನೆರಡನೆಯ ಶತಮಾನದ ಅತ್ಯಂತ ಪ್ರಸಿದ್ಧ ವ್ಯಕ್ತಿಯಾಗಿದ್ದ. ಹಾಗೆಯೇ ಒಳ್ಳೆಯ ವೈದ್ಯನೂ ಆಗಿದ್ದ.

ಅವನ ಬಗ್ಗೆ ಬಂದಿರುವ ಕತೆಗಳನ್ನು ನೋಡಿದರೆ ಅವನು ಬಹು ದೊಡ್ಡ ವಿದ್ವಾಂಸನೂ ಆಗಿದ್ದ. ಅವನು ದಕ್ಷಿಣ ಭಾರತಕ್ಕೆ ಹೋಗಿ ಅಗಸ್ತ್ಯನಿಗೆ ವೀರಶೈವ ತತ್ವ ಬೋಧೆಯನ್ನು ಮಾಡಿದನೆಂಬ ಕತೆಯಿದೆ (ಅದೇ ಸುಪ್ರಸಿದ್ಧ ಸಂಸ್ಕೃತ ಗ್ರಂಥ 'ಸಿದ್ಧಾಂತ ಶಿಖಾಮಣಿ'). ಅವನು ರಾಮಸೇತುವಿನ ದರ್ಶನಮಾಡಿ, ಕಂತೆ ಹೊದೆದು ತಲೆ ಕೆದರಿದ ಭಿಕ್ಷುಕನಂತೆ ಅಲೆದಾಡುತ್ತ ಜನರಿಗೆ 'ಮರುಳ'(=ಹುಚ್ಚ)ನಂತೆ ಕಾಣಿಸು ತ್ತಿದ್ದ. (ರಾಮೇಶ್ವರದ ರಾಮನಾಥೇಶ್ವರ ಪೂಜೆ ಮಾಡಿಸಲು ಸಹಾಯಮಾಡುವ ವೀರಶೈವರು ಅಲ್ಲಿದ್ದಾರೆಂದು ನಾನು ಪ್ರತ್ಯಕ್ಷವಾಗಿ ಬಲ್ಲೆ.) ರೇವಣನು ಲಂಕೆಗೆ ಹೋಗಿ ವಿಭೀಷಣನಿಗಾಗಿ ಮೂರು ಕೋಟಿ ಶಿವಲಿಂಗಗಳನ್ನು ಸ್ಥಾಪಿಸಿದ ಎಂಬ ಕತೆಯ ಹಿಂದೆ ಒಂದು ವಾಸ್ತವವಿರುವಂತಿದೆ. ಅವನು ಲಂಕೆಗೆ ಹೋದದ್ದು ರಾಮೇಶ್ವರದ ರಾಮಸೇತುವನ್ನು ದೋಣಿಯಲ್ಲಿ ದಾಟಿ; ಈಗಲೂ ಉತ್ತರ ಸಿಂಹಳದ ಜಾಫ್ನಾಕ್ಕೆ 15 ಕಿ.ಮೀ. ದೂರದಲ್ಲಿ ರುವ ಕಿರುಮಲಾಯ್ ಗ್ರಾಮದಲ್ಲಿ ರೇಣುಕಾಶ್ರಮ, ರೇಣುಕವನ ಮಠಗಳಿದ್ದು ಅಲ್ಲಿ ನೂರಾರು ವೀರಶೈವ ಕುಟುಂಬಗಳಿವೆ ('ಜನಕಲ್ಯಾಣ', 33.4). ಅಲ್ಲಿಗೆ ಹೋಗಿ ಬಂದವರೂ ಇದನ್ನು ದೃಢೀಕರಿಸಿದ್ದಾರೆ. ಅವನು ಜನರಿಗೆ 'ಮರುಳ' ನಂತೆ ಕಂಡರೂ ಅವನಿಗೆ ಜಗತ್ತು 'ಮರುಳು' ಆಗಿ (ಮಾಯೆ) ಕಾಣಿಸುತ್ತಿತ್ತೆಂದು ವರ್ಣನೆ ಇದೆ. ದಕ್ಷಿಣ ಭಾರತದ ಪೊನ್ನಾಂಬಲ, ಕಾಂಚಿ, ಕರ್ನಾಟಕದ ಕಲ್ಯಾಣ, ಮಹಾರಾಷ್ಟ್ರದ ಮಂಗಳವೇಢೆ, ಕೊಲ್ಲಾಪುರ, ಸೊಲ್ಲಾಪುರ ಇತ್ಯಾದಿ ಸ್ಥಳಗಳಿಗೆ ಭೇಟಿ

ನೀಡಿದ. ಸೊಲ್ಲಾಪುರದಲ್ಲಿ ಸುಗ್ಗವ್ವೆಗೆ "ನಿನ್ನ ಗರ್ಭದಿಂದ ಸಿದ್ಧರಾಮ ಎಂಬ ಮಹಿಮಾಪುರುಷ ಜನಿಸುತ್ತಾನೆ" ಎಂದು ಭವಿಷ್ಯ ಹೇಳಿದ; ಆಕಾಶದಲ್ಲೇ ಹಾರುತ್ತ ಹೋದ ಎಂಬಂತಹ ಕತೆಗಳೂ ಉಂಟು.

ಅವನು ಕಲ್ಯಾಣದ ಗಾಣಿಗನಾದ ತೆಲ್ಲಿಗ ಕಲ್ಲಿಶೆಟ್ಟಿಯ ಬಡತನ, ಕುರುಡತನ ನೋಡಿ ಮನಕರಗಿ ಅವನ ಗಾಣವನ್ನು ತಿರುಗಿಸಿ ಅವನ ಬಡತನ ಹೋಗಲಾಡಿಸಿ, ಕಣ್ಣುಗಳನ್ನು ಕೊಟ್ಟ. ಮಾಯಿದೇವಿ ಎಂಬ ವೇಶ್ಯೆಯ ಮನೆಯಲ್ಲಿ ನೀಡಿದ ಭಿಕ್ಷಾನ್ನ ವನ್ನು ತಿಂದ. ಅವನು ದಾರಿಯುದ್ದಕ್ಕೂ ಅನೇಕ ಸೇವಾಕಾರ್ಯಗಳನ್ನು ಮಾಡುತ್ತಾನೆ ಎಂಬುದು ಬಹು ಮುಖ್ಯ ಸಂಗತಿ – "ತಟಾಕಂಗಳಂ ಮಾಡಿಸುತ್ತುಂ, ಛತ್ರಂಗಳಂ ನಿರ್ಮಿಸುತ್ತಂ, ಕುರುಡರ್ಗೆ ಕಣ್ಗಳಂ, ಹೆಳವರ್ಗೆ ಕಾಲ್ಗಳಂ, ಬಂಜೆಯರ್ಗೆ ಮಕ್ಕಳಂ, ಕೆಟ್ಟರಸು ಮಕ್ಕಳ್ಗೆ ರಾಜ್ಯಮಂ, ಕಂಡ ಕಂಡ ಬಡವರ್ಗೆ ಸಂಪದಂಗಳನ್" ನೀಡಿದ. ಅವನೇನೂ ಬ್ರಹ್ಮಚಾರಿಯಾಗಿರಲಿಲ್ಲ – ಹಲವು ರಾಜಕುಮಾರಿಯರನ್ನು ಮದುವೆ ಯಾಗಿದ್ದ (ಮುನ್ನೂರ್ವರು ಪತ್ನಿಯರು ಎಂಬುದು ಖಂಡಿತ ಉತ್ಪ್ರೇಕ್ಷಿತ). ಕಲ್ಯಾಣದ ಹೊರವಲಯದಲ್ಲಿ ಬಡರೈತರಿಗಾಗಿ 'ತ್ರಿಪುರಾಂತಕ ಕೆರೆ' ಕಟ್ಟಲು ತಾನೇ ಗುದ್ದಲಿ ಯಿಂದ ನೆಲ ಅಗೆದು ತನ್ನ ಪತ್ನಿಯರಾದ ರಾಜಕುಮಾರಿಯರಿಂದಲೇ ಮಣ್ಣನ್ನು ಹೊರಿಸಿದ ಎಂಬ ಕತೆ ಅತ್ಯಂತ ಗಮನಾರ್ಹ. ಅವರಲ್ಲಿ ಗರ್ಭಿಣಿಯಾಗಿದ್ದ ರಾಜಕುಮಾರಿಯು ತಟಾಕದ ದಡದ ಮೇಲೆ ರುದ್ರಮುನಿಗೆ ಜನ್ಮವಿತ್ತಳು. ಆ ಹೆಸರಿನ ಕೆರೆಯು ಈಗಲೂ ಬಸವಕಲ್ಯಾಣದ ಹೊರವಲಯದಲ್ಲಿದೆ – ಅಲ್ಲಿ ರುದ್ರಮುನಿ ಗದ್ದಿಗೆಯೂ ಇದೆ. ರೇವಣಸಿದ್ಧ ಕೊಲ್ಲಾಪುರದ ಹಿಂಸಾತ್ಮಕ ನಾಥಪಂಥವನ್ನು ನಿಲ್ಲಿಸಿದ.

ರೇವಣಸಿದ್ಧ ವಿಪುಲವಾಗಿ ದೇಶ ಸಂಚಾರ ಮಾಡಿದ್ದನೆಂಬುದಕ್ಕೆ ಶ್ರೀಲಂಕಾ, ತಮಿಳುನಾಡು, ಕರ್ನಾಟಕ, ಆಂಧ್ರ ಪ್ರದೇಶ, ಮಹಾರಾಷ್ಟ್ರ ಇಲ್ಲೆಲ್ಲ ಅಸಂಖ್ಯಾತ ಕುರುಹುಗಳಿವೆ. ರೇವಣಸಿದ್ಧ ಮತ್ತು ಅವನ ಮಗ ರುದ್ರಮುನಿಯ ಹೆಸರಿನ ಬೆಟ್ಟ, ಗುಡ್ಡ, ಗುಹೆ, ದೇವಾಲಯಗಳು ವಿಪುಲವಾಗಿವೆ. ಉದಾಹರಣೆಗೆ ರಾಮನಗರ ಪಕ್ಕದ ಸುಪ್ರಸಿದ್ಧ ರೇವಣಸಿದ್ಧೇಶ್ವರ ಬೆಟ್ಟ ಮತ್ತು ಬಸವಣ್ಣನ ತಾಯಿಯ ತೌರ್ಮನೆ ಇಂಗುಳೇಶ್ವರದ ರೇವಣಸಿದ್ಧ ಗವಿ, ರುದ್ರಮುನಿ ಗವಿ. ನನಗೆ ತಿಳಿದ ಮಟ್ಟಿಗೆ ಇಷ್ಟು ಸಂಖ್ಯೆಯ ಸ್ಮಾರಕಗಳು ಅನ್ಯ ವ್ಯಕ್ತಿಯ ಹೆಸರಿನಲ್ಲಿ ದೊರಕುವುದಿಲ್ಲ. ಅವನು ಮೈಸೂರು ಜಿಲ್ಲೆಯ ಸುತ್ತೂರಿಗೆ ಹೋಗಿ ಅಲ್ಲಿ ಮಠವನ್ನು ಸ್ಥಾಪಿಸಿದನೆಂದೂ ದಾಖಲಾಗಿದೆ – ಅದೇ ರೇವಣ ಪರಂಪರೆಗೆ ಸೇರಿದ 'ವೀರ ಸಿಂಹಾಸನ' ವರ್ಗಕ್ಕೆ ಸೇರಿರುವ ಈಗಿನ ಸುತ್ತೂರು ಮಠ. ರೇವಣನ 'ಪಡುವಿಡಿ' ಸೂತ್ರದ ಹನ್ನೆರಡು ಉಪಸೂತ್ರಗಳಲ್ಲಿ 'ಸುತ್ತೂರು' ಒಂದು ಎಂಬುದು ಗಮನಾರ್ಹ.

1971ರಲ್ಲಿ ಮುದ್ರಣಗೊಂಡ ಮತ್ತು ಅನಗತ್ಯ ವಿವಾದಗಳಿಗೆ ಒಳಗಾಗಿ

ಪ್ರಕಾಶಕರಾದ ಕರ್ನಾಟಕ ವಿಶ್ವವಿದ್ಯಾಲಯದಿಂದಲೇ ಬಹಿಷ್ಕೃತವಾದ "ಮುಕ್ತಿ ಕಂಠಾಭರಣ" (ಸಂ. : ಆರ್.ಸಿ. ಹಿರೇಮಠ) ಎಂಬ ವಚನ ಸಂಕಲನವು ಅನೇಕ ಅಮೂಲ್ಯ ವಿಶ್ವಾಸಾರ್ಹ ವಚನಗಳನ್ನೊಳಗೊಂಡಿದ್ದು ರೇವಣಸಿದ್ಧನ ಈ ವಚನವೂ ಅವುಗಳಲ್ಲಿ ಒಂದು – **"ಆದವಲ್ಲ ದಶದಿಕ್ಕಿನಲ್ಲಿ ದಶನಾದಂಗಳು; ಆದವಲ್ಲ ಪುಷ್ಪವೃಷ್ಟಿ ಕಲ್ಯಾಣಪುರದಲ್ಲಿ; ಆಯಿತಲ್ಲ ಸರ್ವಗಣಂಗಳಿಗತ್ಯಾನಂದ. ಇನ್ನು ಬಾರನೆ ತ್ರಿಪುರಾಂತಕ ಸೋಮಲಿಂಗ ಚನ್ನಬಸವಯ್ಯನು."** ಯೋಗಿಯಾಗಿದ್ದ ವಚನಕಾರನೊಬ್ಬನ ಯೋಗ ಪರಿಭಾಷೆಯ ಮೇಲಿನ ವಚನ ಕರ್ತೃ ರೇವಣಸಿದ್ಧನೆಂಬಲ್ಲಿ ಅನುಮಾನ ಕಾಣಿಸದು. ಜೊತೆಗೆ "ತ್ರಿಪುರಾಂತಕ ಸೋಮಲಿಂಗ" ಎಂಬ ಅಂಕಿತವು ರೇವಣಸಿದ್ಧ ಕಟ್ಟಿಸಿದ್ದ ಕೆರೆ ಮತ್ತು ಅವನ ಆರಾಧ್ಯ ದೈವ ಎರಡನ್ನೂ ಜ್ಞಾಪಿಸುತ್ತವೆ. ಬಸವಣ್ಣನಿದ್ದ ಕಲ್ಯಾಣದಲ್ಲಿ ನಡೆದ ಯಾವುದೋ ಮಂಗಳಕರ ಘಟನೆಯನ್ನು ಮೇಲಿನ ವಚನ ಜ್ಞಾಪಿಸುತ್ತದೆ. ರೇವಣಸಿದ್ಧನು ಕಲ್ಯಾಣಕ್ಕೆ ಬಂದು ಬಸವಣ್ಣನನ್ನು ಕಂಡಿದ್ದನೆಂಬುದಕ್ಕೆ ಸೂಚನೆಗಳಿವೆ. ರೇವಣಸಿದ್ಧನ ವಚನವಲ್ಲದೆ ಅವನ ನಾಲ್ವರು ಪತ್ನಿಯರ (ಶಾಂಭವಿ, ಸೌಂದರಿ, ವೇದಕಂಚುಕಿ, ಆಗವಮೋಹಿನಿ) ವಚನಗಳೂ ಮೇಲ್ಕಂಡ ಸಂಕಲನ ದಲ್ಲಿವೆ – ಅವೂ ಕೂಡ ಯೋಗದ ಪರಿಭಾಷೆಯಲ್ಲಿದ್ದು ಅರ್ಥಗರ್ಭಿತವಾಗಿವೆ. ಗಮನಿಸಬೇಕಾದ್ದು – ರೇವಣಸಿದ್ಧನ ಮಠಗಳು ಸ್ವಾಮಿಗಳ ಹೆಸರುಗಳು ಹಲವಿರು ವಂತೆ ಅವನ ಮಗ 'ರುದ್ರಮುನಿ'ಯ ಹೆಸರನ್ನು ಹಲವು ಮಠಾಧೀಶರು ಹೊಂದಿದ್ದಾರೆ – ಉದಾ.: ಬಂಕಾಪುರದ ಶ್ರೀ ರೇವಣಸಿದ್ಧೇಶ್ವರ ಶಿವಾಚಾರ್ಯರು, ದೊಡ್ಡಗುಣಿಯ ಶ್ರೀ ರೇವಣಸಿದ್ಧ ಶಿವಾಚಾರ್ಯರು, ಬೀರೂರಿನ ಶ್ರೀ ರುದ್ರಮುನಿ ಶಿವಾಚಾರ್ಯರು, ಹಲಗೂರಿನ ಶ್ರೀ ರುದ್ರಮುನಿ ಶಿವಾಚಾರ್ಯರು, ರಾಮೇಶ್ವರದ ಶ್ರೀ ಘನಲಿಂಗ ರುದ್ರಮುನಿ ಶಿವಾಚಾರ್ಯರು.

ರೇವಣಸಿದ್ಧನ ವಚನ ಈಗಾಗಲೇ ಪ್ರಕಟಗೊಂಡಿದ್ದರೂ ಅವನೊಬ್ಬ ವಚನ ಕಾರ ಎಂಬುದನ್ನು, ಅವನೊಬ್ಬ ಶ್ರೇಷ್ಠ ಯೋಗಿ ಮತ್ತು ಸಮಾಜಸೇವಾ ಕಾರ್ಯಕರ್ತ ಎಂಬುದನ್ನು ಕನ್ನಡ ಸಾಹಿತ್ಯದ ವಿದ್ಯಾರ್ಥಿಗಳು ಹೆಚ್ಚಾಗಿ ಗಮನಿಸಿಲ್ಲವೆಂಬ ಮಾತು ನಿಜ. ಅವನ ಬಗ್ಗೆ ಅನೇಕ ವಾದವಿವಾದಗಳನ್ನು ಗಮನದಲ್ಲಿರಿಸಿಕೊಂಡು ಸದ್ಯದಲ್ಲೇ ಸಮಗ್ರ ಲೇಖನವನ್ನು ಬರೆಯಲಿದ್ದೇನೆ.



# 9

# ಬಸವಣ್ಣ : ಹುಟ್ಟಿನಿಂದ 'ಲೌಕಿಕಿ' ಬ್ರಾಹ್ಮಣ

## (ಹೆಚ್ಚಿನ ವ್ಯಾಖ್ಯಾನಕ್ಕೆ ಅವಕಾಶ)

ಬಸವಣ್ಣನವರ ತಂದೆ ಬಾಗೆವಾಡಿಯ ಮಾದರಸನು ಕಮ್ಮೆ ಕುಲದ ಒಬ್ಬ ಸ್ಮಾರ್ತ ಶೈವ ಬ್ರಾಹ್ಮಣ; ಬಾಗೆವಾಡಿ ಅಗ್ರಹಾರದ 'ಅಗ್ರೇಶ್ವರ'; ಆ ಊರಿನ ಮುಖ್ಯಸ್ಥ – ಎಂಬುದರ ಬಗ್ಗೆ ಯಾವುದೇ ಭಿನ್ನಾಭಿಪ್ರಾಯಗಳೂ ಇಲ್ಲ; ಮತ್ತು ಎಲ್ಲರಿಗೂ ತಿಳಿದ ವಿಷಯವೇ ಅದಾಗಿದೆ. ಈಚೆಗೆ ನನಗೆ ತಿಳಿದುಬಂದಿರುವ, ಕೆಲವು ಬ್ರಾಹ್ಮಣ ಸಾಮಾಜಿಕರಿಗೆ ಮಾತ್ರ ಗೊತ್ತಿರುವ ಕೆಲವು ಸಂಗತಿಗಳು ಮಾದರಸನ ಬ್ರಾಹ್ಮಣ್ಯದ ಬಗ್ಗೆ, ಬಸವಣ್ಣನ ಬಗ್ಗೆ ಹೊಸ ಬೆಳಕನ್ನು ಬೀರುವಂತಿವೆ.

ನನಗೆ ಹಲವು ಬ್ರಾಹ್ಮಣರು ಚೆನ್ನಾಗಿಯೇ ಗೊತ್ತಿರುವರಾದರೂ ಆ ಸಮಾಜದ ಒಳಗಿನ ಎಲ್ಲ ವಿವರಗಳನ್ನು ನಾನು ಅಥವಾ ಯಾವುದೇ ಬ್ರಾಹ್ಮಣೇತರರು ತಿಳಿಯುವುದು ಕಷ್ಟವೇ. ನಾನು ಹುಟ್ಟಿನಿಂದ ಲಿಂಗಾಯತನಾದುದರಿಂದ ವೀರಶೈವ ಸಮಾಜದ ಒಳಗನ್ನು ನಾನು ಅರಿತಿರುವಂತೆ ವೀರಶೈವೇತರರು ತಿಳಿದಿರದಿದ್ದರೆ ಅದು ಸ್ವಾಭಾವಿಕವೇ. (ಲಿಂಗಾಯತರಲ್ಲಿ ನಾನು ಜಂಗಮನಾದ್ದರಿಂದ ಜಂಗಮ ವರ್ಗದ ಒಳರಚನೆ ಇತರರಿಗಿಂತ ನನಗೆ ಚೆನ್ನಾಗಿ ಗೊತ್ತಿದ್ದರೆ ಅದೂ ಸ್ವಾಭಾವಿಕವೇ.)

ಆ ವಿಷಯವಾಗಿ ನಾನು ಹೆಚ್ಚು ಅಧ್ಯಯನ ಮಾಡುವಂತೆ ತೊಡಗಿಸಿದ್ದು ಆಂಧ್ರದ ಸುಪ್ರಸಿದ್ಧ ಸಮಾಜ ಸುಧಾರಕ, ಬ್ರಹ್ಮ ಸಮಾಜದ ಮುಖಂಡ ವೀರೇಶಲಿಂಗಂ ಪಂತುಲು (19ನೇ ಶ.) ತಮ್ಮನ್ನು ತಮ್ಮ ಆತ್ಮಚರಿತ್ರೆಯಲ್ಲಿ ಒಬ್ಬ 'ವೀರಶೈವ' ಎಂದು ಕರೆದುಕೊಂಡಿರುವುದನ್ನು ಓದಿದಾಗ. ಅವರು ಆಂಧ್ರದ 'ನಿಯೋಗಿ' ಬ್ರಾಹ್ಮಣರು. ಕೆಲವು ವರ್ಷಗಳ ಹಿಂದೆ ಕೇಂದ್ರ ಸಂಪುಟದಲ್ಲಿ ನೀರಾವರಿ ಸಚಿವರಾಗಿದ್ದ ಮತ್ತು ಇಂದಿಗೂ ಬಹು ಶ್ರೇಷ್ಠ ನೀರಾವರಿ ತಜ್ಞರೆಂದೇ ಖ್ಯಾತ ರಾಗಿರುವ ಆಂಧ್ರಪ್ರದೇಶದ (ದಿ) ಕೆ.ಎಲ್. ರಾವ್ ಅವರು ಒಮ್ಮೆ ಆಗ ಜಿಲ್ಲಾಧಿಕಾರಿ ಗಳಾಗಿದ್ದ, ಶ್ರೇಷ್ಠ ಕವಿ (ದಿ) ಸಿದ್ಧಯ್ಯ ಪುರಾಣಿಕರ ಜೊತೆ ಕೃಷ್ಣಾ ನದಿ ನೀರಿನ ವಿವಾದದ ಬಗ್ಗೆ ಮಾತನಾಡುತ್ತ "ನಾನು ಆಂಧ್ರದವನಾಗಿದ್ದರೂ ಉತ್ತರ ಕರ್ನಾಟಕಕ್ಕೆ ನೀರಿನ ವಿಷಯದಲ್ಲಿ ಅನ್ಯಾಯ ಮಾಡಲು ಸಾಧ್ಯವಿಲ್ಲ. ನಾನು ಒಬ್ಬ

ವೀರಶೈವನೆಂಬುದು ನಿಮಗೆ ತಿಳಿದಿರಲಾರದು" ಎಂದು ಹೇಳಿದ್ದರಂತೆ. ಅವರು ಕರ್ನಾಟಕದ ಇನ್ನೊಬ್ಬ ಶ್ರೇಷ್ಠ ನೀರಾವರಿ ತಜ್ಞ (ದಿ) ಎಸ್.ಜಿ. ಬಾಳೆಕುಂದ್ರಿಯವರಿಗೆ ಅವರ ತಂತ್ರಜ್ಞಾನ ಪ್ರತಿಭೆಯನ್ನು ಮೆಚ್ಚಿ ತಮ್ಮ ಮಗಳನ್ನು ಮದುವೆಮಾಡಿಕೊಡಲು ಮುಂದಾಗಿದ್ದರೆಂದೂ ಕೇಳಿದ್ದೇನೆ. ಡಾ. ರಾವ್ ಕೂಡ ಅದೇ ನಿಯೋಗಿ ಬ್ರಾಹ್ಮಣ ವರ್ಗಕ್ಕೆ ಸೇರಿದವರೆಂಬುದು ಗಮನಾರ್ಹ (ಭಾರತದ ಪ್ರಧಾನಿಯಾಗಿದ್ದ ಡಾ. ಪಿ.ವಿ. ನರಸಿಂಹರಾವ್ ಕೂಡ ಆಂಧ್ರದ ನಿಯೋಗಿ ಬ್ರಾಹ್ಮಣರು. ಬಹುಶಃ ನಿಯೋಗಿಗಳಲ್ಲಿ ಅವರು ವೀರಶೈವರೆಂದು ಹೇಳಿಕೊಳ್ಳುವ ವರ್ಗಕ್ಕೆ ಸೇರಿದವರಲ್ಲ).

ತೆಲುಗು ಸ್ಮಾರ್ತ ಬ್ರಾಹ್ಮಣರಲ್ಲಿ ಸ್ಥೂಲವಾಗಿ 'ವೈದಿಕಿ' 'ನಿಯೋಗಿ' ಎಂಬ ಎರಡು ವರ್ಗಗಳನ್ನು ಮಾಡುತ್ತಾರೆ. ವೈದಿಕರು ಉಪಾಕರ್ಮ, ವಿವಾಹ, ಅಂತ್ಯಸಂಸ್ಕಾರ, ಶ್ರಾದ್ಧ ಇತ್ಯಾದಿ ಸಂದರ್ಭಗಳಲ್ಲಿ ಪೌರೋಹಿತ್ಯವನ್ನು ಮಾಡುವವರು. 'ನಿಯೋಗಿ'ಗಳು ಪೌರೋಹಿತ್ಯ ಮಾಡುವ ಅಧಿಕಾರವನ್ನು ಹೊಂದಿಲ್ಲ; ಅವರು ತಮ್ಮ ಪೌರೋಹಿತ್ಯ ಕಾರ್ಯಗಳಿಗೆ ವೈದಿಕಿಗಳನ್ನೇ ಆಹ್ವಾನಿಸುತ್ತಾರೆ. ಒಂದು ಕಾಲಕ್ಕೆ ಮುಖ್ಯವಾಗಿ ಪೌರೋಹಿತ್ಯವೇ ವೈದಿಕಿಗಳ ವೃತ್ತಿಯಾಗಿದ್ದಿತು. ನಿಯೋಗಿಗಳು ಹಿಂದೆ ರಾಜರ ಕಾಲದಲ್ಲಿ ಹಲವು ಬಗೆಯ ಅಧಿಕಾರಿಗಳಾಗಿದ್ದು ಅವರು ರಾಜರಿಂದ ಉಂಬಳಿ ಜಮೀನುಗಳನ್ನು ಪಡೆದು ವೈದಿಕಿಗಳಿಗಿಂತ ಹೆಚ್ಚು ಶ್ರೀಮಂತರಾಗಿದ್ದರೂ ಸಾಮಾಜಿಕವಾಗಿ ವೈದಿಕಿಗಳೇ ಮೇಲುಸ್ತರದವರು. ಕೆಲವೆಡೆ ನಿಯೋಗಿಗಳನ್ನು ಬ್ರಾಹ್ಮಣರೆಂದು ಗುರುತಿಸಲೂ ಹಿಂಜರಿಯುತ್ತಾರೆ. ಕೆಲವು ನಿಯೋಗಿಗಳು ವ್ಯಾಪಾರ ವನ್ನು ಮಾಡುತ್ತಿದ್ದುದೂ ಉಂಟು; ದೊಡ್ಡ ಜಮೀನುದಾರರೂ ಆಗಿದ್ದಾರೆ. ವೈದಿಕಿಗಳು ಇಡೀ ತಮ್ಮ ಬದುಕನ್ನು ವೇದ, ಶಾಸ್ತ್ರಗಳ ಅಧ್ಯಯನಕ್ಕೆ ಮೀಸಲಾಗಿಟ್ಟು, ಜನ ನೀಡುವ ಕಾಣಿಕೆಗಳಿಂದ ಬದುಕುತ್ತಿದ್ದವರು. ವೈದಿಕಿ ಮತ್ತು ನಿಯೋಗಿ ಬ್ರಾಹ್ಮಣರಿಗೆ ಸಾಮಾನ್ಯವಾಗಿ ಪರಸ್ಪರ ವೈವಾಹಿಕ ಸಂಬಂಧಗಳಿರುತ್ತಿರಲಿಲ್ಲ. ಇದು ಹಿಂದಿನ ಕಾಲದ ಪರಿಸ್ಥಿತಿ – ಆಧುನಿಕ ಯುಗದಲ್ಲಿ ಎಲ್ಲವೂ ಬೇರಾಗಿದೆಯೆಂಬುದ್ನು ಸುಲಭವಾಗಿ ಊಹಿಸಬಹುದು. ವೈದಿಕಿ ಬ್ರಾಹ್ಮಣರಲ್ಲಿ ಮುರಿ(ಲು)ಕುನಾಡು, ವೆಲನಾಡು, ಆರಾಧ್ಯ ಇತ್ಯಾದಿ ಪಂಗಡಗಳಿವೆ. ಆರಾಧ್ಯ ಬ್ರಾಹ್ಮಣರು ಮೈಮೇಲೆ ಜನಿವಾರ, ಶಿವಲಿಂಗ ಎರಡನ್ನೂ ಪ್ರತ್ಯೇಕವಾಗಿ ಧರಿಸುತ್ತಾರೆ; ಮತ್ತು ತಮ್ಮನ್ನು ವೀರಶೈವರೆಂದೂ ಕರೆದುಕೊಳ್ಳುತ್ತಾರೆ. ಆಂಧ್ರದ ರಾಜಮಹೇಂದ್ರಿಯಲ್ಲಿ ಮಲ್ಲಂಪಲ್ಲಿ ಶರಭಯ್ಯ ಎಂಬ ಹಿರಿಯ ಆರಾಧ್ಯ ಬ್ರಾಹ್ಮಣರನ್ನು ಭೇಟಿ ಮಾಡಿದ್ದೇನೆ. ನಿಯೋಗಿ ಗಳಲ್ಲಿ ಆರುವೇಲು, 'ಕಮ್ಮಲು' ಮುಂತಾದ ವಿಭಾಗಗಳಿವೆ.

ಕರ್ನಾಟಕದಲ್ಲೂ ಮಾಧ್ವರಲ್ಲಿ ಹಾಗೂ ಸ್ಮಾರ್ತರಲ್ಲಿ ವೈದಿಕಿ ಬ್ರಾಹ್ಮಣರಿರು ವಂತೆ ನಿಯೋಗಿ ಬ್ರಾಹ್ಮಣರೂ ಇದ್ದಾರೆ; ಆ ವರ್ಗಗಳನ್ನು ನಾನು ಅನುಕೂಲಕ್ಕಾಗಿ 'ವೈದಿಕಿ', 'ಲೌಕಿಕಿ' ಎಂದು ಹೆಸರಿಸಬಯಸುತ್ತೇನೆ. ಮಾಧ್ವರಲ್ಲಿ '–ಆಚಾರ್ಯ' ಎಂದು

ಕೊನೆಯಾಗುವ ಹೆಸರುಗಳು ವೈದಿಕಿ ಬ್ರಾಹ್ಮಣರನ್ನು ಸೂಚಿಸಿದರೆ, '–ರಾವ್' ಎಂಬ ಹೆಸರುಗಳು ಲೌಕಿಕಿ ಬ್ರಾಹ್ಮಣರನ್ನು ಸೂಚಿಸುತ್ತವೆ. ಲೌಕಿಕಿ ಬ್ರಾಹ್ಮಣರ '–ರಾವ್' ಎಂಬುದು ರಾಯ, ರಾಜನ್ ಎಂಬುದರ ಅಪಭ್ರಂಶ ಸೂಚಕ ಮತ್ತು ಅದು ಒಂದು ಅಧಿಕಾರದ ಸೂಚಕ. ಹವ್ಯಕ ಬ್ರಾಹ್ಮಣರು ಸ್ಮಾರ್ತರು; ಇವರಲ್ಲಿ ಹಿಂದೆ ಅಧಿಕಾರಿಗಳಾಗಿದ್ದವರು '–ಹೆಗ್ಗಡೆ' (ಪೆರ್ಗ್ಗಡೆ) ಹೆಸರನ್ನು ಪಡೆದವರಾಗಿದ್ದು ಈಗ ಹೆಗ್ಗಡೆಗಳು ಪೌರೋಹಿತ್ಯವನ್ನು ಮಾಡುವಂತಿಲ್ಲ; ಪೌರೋಹಿತ್ಯಕ್ಕೆ '–ಭಟ್ಟ'ರನ್ನು '–ಶಾಸ್ತ್ರಿ'ಗಳನ್ನು ಕರೆಯಿಸುತ್ತಾರೆ; ಹವ್ಯಕರಲ್ಲೂ ವೈದಿಕಿ ಬ್ರಾಹ್ಮಣರು '–ಭಟ್ಟ', '–ಶಾಸ್ತ್ರಿ' ಎಂದು ಕೊನೆಯಾಗುವ ಹೆಸರುಗಳನ್ನು ಇಟ್ಟುಕೊಳ್ಳುತ್ತಾರೆ. 'ಆಚಾರ್ಯ', 'ಭಟ್ಟ', 'ಶಾಸ್ತ್ರಿ', 'ಶರ್ಮ', 'ಜೋಯಿಸ್' ಈ ಪದಗಳಿಗೆಲ್ಲ ವಿದ್ವಾಂಸ, ಉಪಾಧ್ಯಾಯ, ಶಾಸ್ತ್ರಗಳನ್ನು ಬಲ್ಲ ಪಂಡಿತ ಎಂಬರ್ಥಗಳಿರುವುದು ಗಮನಾರ್ಹ. ಸ್ಮಾರ್ತರಾದ ಬಬ್ಬೂರು ಕಮ್ಮೆ, ಉಲುಚು ಕಮ್ಮೆಗಳಲ್ಲಿ ಬಹುಪಾಲು ಜನ ಲೌಕಿಕಿಗಳು; ಹೊಲ, ಗದ್ದೆ, ತೋಟ, ವ್ಯವಸಾಯವನ್ನು ಮಾಡಿಕೊಂಡಿರುವರು. 'ದೇಶಪಾಂಡೆ', 'ಕುಲಕರ್ಣಿ'ಗಳೆಲ್ಲ ಲೌಕಿಕಿ ಬ್ರಾಹ್ಮಣರು; ಹೆಸರುಗಳೇ ಹೇಳುವಂತೆ ಅವರೆಲ್ಲ ಹಿಂದೆ ಒಂದು ಊರಿನ ಅಥವಾ ಒಂದು ನಾಡಿನ ಆಗುಹೋಗುಗಳ ಮುಖ್ಯಸ್ಥರಾಗಿದ್ದು ತೆರಿಗೆ ವಸೂಲು ಮಾಡಿ ಲೆಕ್ಕಪತ್ರ ಇಡುವವರೂ ಆಗಿದ್ದರು. ಇವರು ಪೌರೋಹಿತ್ಯ ಮಾಡುವುದಿಲ್ಲ; ಪೌರೋಹಿತ್ಯಕ್ಕಾಗಿ ತಮ್ಮ ವರ್ಗದ (ಸ್ಮಾರ್ತ ಅಥವಾ ಮಾಧ್ವ) ವೈದಿಕಿಗಳನ್ನು ತಮ್ಮ ಮನೆಗಳಿಗೆ ಆಹ್ವಾನಿಸುತ್ತಾರೆ. ಶಾನುಭೋಗರೂ ಲೌಕಿಕಿ ಬ್ರಾಹ್ಮಣರೇ (ಶಾನುಭೋಗ ಎಂಬುದು 'ಸೇನಬೋವ' ಎಂಬ ಪದದ ರೂಪಾಂತರ. 'ಸೇನಬೋವ'ರು ಹಿಂದೆ ಲೆಕ್ಕಪತ್ರ ಇಡುತ್ತಿದ್ದ ಅಧಿಕಾರಿಗಳಾಗಿದ್ದರು). ಶ್ರೀವೈಷ್ಣವರಲ್ಲೂ ವೈದಿಕಿ, ಲೌಕಿಕಿ ವರ್ಗಗಳು ಉಂಟು. ಹಾಗೆಯೇ ಸಂಕೇತಿ ಬ್ರಾಹ್ಮಣರಲ್ಲೂ ಅಂತಹ ಎರಡು ವರ್ಗಗಳಿದ್ದು, ಆ ಎರಡೂ ವರ್ಗಗಳು 'ಬಣ'ಗಳಾಗಿ ಪರಿಣಮಿಸಿ, ಆ ಬಣಗಳ ನಡುವೆ 'ಶೀತಲ ಸಮರ'ಗಳಾಗಿರುವುದು ದಾಖಲಾಗಿದೆ.

ಬ್ರಾಹ್ಮಣನ ಮೂಲ ಮುಖ್ಯ ಕರ್ತವ್ಯಗಳು ಆರು : ಯಜನ (ಯಾಗ ಮಾಡುವುದು), ಯಾಜನ (ಯಾಗ ಮಾಡಿಸುವುದು), ಅಧ್ಯಯನ (ಜ್ಞಾನಾರ್ಜನೆ), ಅಧ್ಯಾಪನ (ಜ್ಞಾನ ವಿತರಣೆ), ದಾನ (ದಾನ ನೀಡುವುದು), ಪ್ರತಿಗ್ರಹ (ದಾನ ಸ್ವೀಕರಿಸುವುದು) – ಇವು ಆರಕ್ಕೂ ವೈದಿಕಿ ಬ್ರಾಹ್ಮಣರು ಹಕ್ಕುಳ್ಳವರಾಗಿದ್ದರೆ, ಲೌಕಿಕಿ ಬ್ರಾಹ್ಮಣರು ಯಾಜನ, ಅಧ್ಯಯನ, ದಾನ (ಕಾಣಿಕೆ ಕೊಡುವುದು) ಇವುಗಳಿಗೆ ಮಾತ್ರ ಅರ್ಹರು. ಈ ಕರ್ತವ್ಯ ಭೇದವಾಗಲು ಕಾರಣವನ್ನು ಹೀಗೆ ಊಹಿಸಬಹುದು : ಬ್ರಾಹ್ಮಣರು ರಾಜನ ಆಡಳಿತದಲ್ಲಿ ಕೆಲವು ಅಧಿಕಾರಗಳನ್ನು ವಹಿಸಿಕೊಂಡ ಮೇಲೆ ಅವರು ಪುರೋಹಿತ ವರ್ಗದವರಂತೆ ಮಡಿ–ಮೈಲಿಗೆ ವಿಚಾರದಲ್ಲಿ ಕಟ್ಟುನಿಟ್ಟಾಗಿ ಬದುಕುವುದು ಅಸಾಧ್ಯವಾಗುತ್ತಿತ್ತು. ಅವರು ಪೌರೋಹಿತ್ಯಕ್ಕೆ ಸದಾ ಲಭ್ಯವಾಗುವುದೂ ಕಷ್ಟವಾಗುತ್ತಿತ್ತು.

ಸಹಜವಾಗಿಯೇ ಲೌಕಿಕಿಗಳು ಎಲ್ಲ ಬಗೆಯ ಅಥವಾ ವರ್ಗದ ಜನರ ಜೊತೆ ಬೆರೆಯಬೇಕಾಗುತ್ತದೆ. ಆ ಕಾರಣದಿಂದ ಅವರು ಪೌರೋಹಿತ್ಯವನ್ನು ಕೈಬಿಡ ಬೇಕಾಗುತ್ತದೆ; ಅವರನ್ನು ಪುರೋಹಿತರನ್ನಾಗಿ ಆಹ್ವಾನಿಸುವುದು ಕಷ್ಟ. ಅಧ್ಯಾಪನ, ಧರ್ಮಾನುಷ್ಠಾನವನ್ನೇ ಬದುಕಾಗಿ ಮಾಡಿಕೊಂಡವರಿಗೆ ಪೌರೋಹಿತ್ಯವೇ ವೃತ್ತಿಯಾ ಗಿರುತ್ತದೆ. ಅವರು ಸಂಧ್ಯಾವಂದನೆ ಇತ್ಯಾದಿ 'ನಿತ್ಯಕರ್ಮ'ಗಳನ್ನು ಉಪಾಕರ್ಮ ದಂತಹ 'ನೈಮಿತ್ತಿಕ ಕರ್ಮ'ಗಳನ್ನು ನಡೆಸುತ್ತ, ಮಡಿ ಮೈಲಿಗೆ ಆಚರಿಸುತ್ತ ತಮ್ಮದೇ ಪ್ರಪಂಚದಲ್ಲಿ ಬದುಕಲು ಅವಕಾಶವಿರುತ್ತದೆ. ಅಧಿಕಾರ, ವ್ಯಾಪಾರ, ವ್ಯವಸಾಯಗಳತ್ತ ಒಲಿದ ಬ್ರಾಹ್ಮಣರು ಲೌಕಿಕರೆನ್ನಿಸಿಕೊಂಡು ಆರ್ಥಿಕವಾಗಿ ಮೇಲ್ವರ್ಗಕ್ಕೆ ಸೇರಿದವರು; ಪೌರೋಹಿತ್ಯದ ಬದುಕನ್ನು ಆರಿಸಿಕೊಂಡ ವೈದಿಕಿಗಳು ಜ್ಞಾನಾರ್ಜನೆಯಲ್ಲಿ ಬೆಳೆದವರು, ಆರ್ಥಿಕವಾಗಿ ಹಿಂದುಳಿದವರು. ಸಾಮಾಜಿಕವಾಗಿ ವೈದಿಕಿಗಳು ಲೌಕಿಕಿ ಗಳಿಗಿಂತ ಮೇಲಿನವರು ಎನ್ನಿಸಿದರೂ ಆರ್ಥಿಕವಾಗಿ ಹಿಂದುಳಿದವರಾದ್ದರಿಂದ ಲೌಕಿಕಿಗಳ ಸೂಕ್ಷ್ಮ ಅನಾದರಕ್ಕೂ ಪಾತ್ರರಾಗುತ್ತಾರೆ : ಲಿಂಗಾಯತರಲ್ಲಿ ಜಂಗಮರಿಗಿದ್ದ ಸ್ಥಾನವನ್ನು ಬಲ್ಲವರಿಗೆ ಇದು ಚೆನ್ನಾಗಿ ಅರ್ಥವಾಗುತ್ತದೆ. ಇದು ಹಿಂದಿನ ಕಾಲದ ಪರಿಸ್ಥಿತಿ; ಆಧುನಿಕ ಕಾಲದಲ್ಲಿ ತೀವ್ರ ಬದಲಾವಣೆಗಳಾಗಿವೆಯೆಂಬುದನ್ನು ಮತ್ತೆ ಹೇಳಬೇಕಾಗಿಲ್ಲ.

ವೈದಿಕಿ ಬ್ರಾಹ್ಮಣನಾಗಿದ್ದ ಕದಂಬರ ಮಯೂರ ಶರ್ಮನು ಖಡ್ಗಧಾರಿಯಾಗಿ ಕ್ಷತ್ರಿಯನಾದ ಬಳಿಕ ತನ್ನ ಹೆಸರನ್ನು 'ಮಯೂರವರ್ಮ' ಎಂದು ಬದಲಾಯಿಸಿ ಕೊಂಡುದು ಇತಿಹಾಸ ಪ್ರಸಿದ್ಧ; ವೈದಿಕಿ ಬ್ರಾಹ್ಮಣನಾಗಿದ್ದ ಅವನು ಲೌಕಿಕಿ ಬ್ರಾಹ್ಮಣನಾದ. ಬ್ರಾಹ್ಮಣರಾಗಿದ್ದ ಹಲವರನ್ನು ಚಾಳುಕ್ಯ ದೊರೆಗಳು ಸೇನಾಧಿಕಾರಿ ಗಳನ್ನಾಗಿ, ಲೆಕ್ಕಪತ್ರ ಅಧಿಕಾರಿಗಳನ್ನಾಗಿ, ದೂತರನ್ನಾಗಿ ನೇಮಕ ಮಾಡಿಕೊಂಡಿದ್ದಕ್ಕೆ ನೂರಾರು ಉದಾಹರಣೆಗಳು ಶಾಸನಗಳಲ್ಲಿ ದೊರಕುತ್ತವೆ. ಅವರು ಹಾಗೆ ನೇಮಕ ಗೊಂಡ ಮೇಲೆ ಸಹಜವಾಗಿಯೇ ವೈದಿಕಿಗಳಾಗಿದ್ದವರು ಲೌಕಿಕಿಗಳಾಗುತ್ತಾರೆ; ಆರ್ಥಿಕವಾಗಿಯೂ ಸ್ವಲ್ಪ ಬಲಿಷ್ಠರಾಗುತ್ತಾರೆ.

ಮೇಲಿನ ಮಾತು ಸ್ಥೂಲವಾಗಿ ಲಿಂಗಾಯತ ಸಮಾಜದ ಜಂಗಮರಿಗೂ ಅನ್ವಯವಾಗುತ್ತದೆ. ಬ್ರಾಹ್ಮಣರಂತೆ ಜಂಗಮರು ಪುರೋಹಿತ ವರ್ಗದವರಾದರೂ, ಅವರಲ್ಲಿ 'ಮಠ'ದವರಿಗೆ 'ಮಠಾರ್ಯ'ರಿಗೆ ಇರುವ ಸ್ಥಾನ ಜಂಗಮರೇ ಆಗಿರುವ 'ಮಠಪತಿ', 'ಗಣಾಚಾರಿ'ಗಳಿಗಿಲ್ಲ. ಮಠಸ್ಥರು ಅಥವಾ ಮಠಾರ್ಯರಿಗೆ ವಿವಾಹ, ಶವಸಂಸ್ಕಾರಾದಿ ಸಂದರ್ಭಗಳಲ್ಲಿ ಸಹಾಯಕರಾಗಿ ಕೆಲಸ ಮಾಡುವವರು ಗಣಾಚಾರಿ ಗಳು ಮತ್ತು ಮಠಪತಿಗಳು; ಅವರಿಗೇ ಸ್ವತಂತ್ರ ಪೌರೋಹಿತ್ಯ ಮಾಡುವ ಹಕ್ಕು ಇಲ್ಲ. ಹೀಗಾಗಿ, ಮಠಸ್ಥರು, ಮಠಾರ್ಯರು ವೈದಿಕಿಗಳಾದರೆ ಗಣಾಚಾರಿ, ಮಠಪತಿಗಳು ಲೌಕಿಕಿಗಳು; ಮತ್ತು ಒಟ್ಟಾರೆ ಆ ಎರಡು ವರ್ಗದವರು ಆರ್ಥಿಕವಾಗಿ ಮಠಾರ್ಯರಿ ಗಿಂತ ಉತ್ತಮ ಸ್ಥಿತಿಯಲ್ಲಿದ್ದಾರೆ.

ಈ ಹಿನ್ನೆಲೆಯಲ್ಲಿ ಬಸವಣ್ಣನವರ ವಿಷಯಕ್ಕೆ ಈಗ ಬರೋಣ. ಅವರ ತಂದೆ ಮಾದರಸನ ಕಾಲದಲ್ಲಿ ಬಾಗೇವಾಡಿಯು ಐದುನೂರು ಬ್ರಾಹ್ಮಣ ಕುಟುಂಬಗಳೂ ಸೇರಿದಂತೆ ಎಷ್ಟೋ ಸಂಖ್ಯೆಯ ಬ್ರಾಹ್ಮಣೇತರ ಕುಟುಂಬಗಳೂ ಇದ್ದ ಬಹು ದೊಡ್ಡ ಅಗ್ರಹಾರವಾಗಿದ್ದು ('ಮಹಾಗ್ರಹಾರ') ಅಲ್ಲಿ ಈಗ ಬಸವೇಶ್ವರ ಗುಡಿ ಎಂದು ಕರೆಯುವ ಬೃಹತ್ ಶಿವ ದೇವಾಲಯವಲ್ಲದೆ ಮಲ್ಲಿಕಾರ್ಜುನೇಶ್ವರ, ಗೌರೇಶ್ವರ, ಬಕುಲೇಶ್ವರ ಇತ್ಯಾದಿ ಹಲವು ದೇವಾಲಯಗಳಿದ್ದವು. ಅಂತಹ ಅಗ್ರಹಾರದ ಮುಖ್ಯಸ್ಥನಾಗಿದ್ದ 'ಅಗ್ರೇಶ್ವರ' ಅಥವಾ 'ಗ್ರಾಮಣೀ ಮಣಿ' (ಗ್ರಾಮಣಿ = ಊರಿನ ಒಡೆಯ) ಮಾದರಸನಿಗೆ ಹಲವು ಆಡಳಿತಾತ್ಮಕ ಜವಾಬ್ದಾರಿಗಳಿದ್ದವು. ಆ ಅಗ್ರಹಾರದ ಬ್ರಾಹ್ಮಣರು ತಮ್ಮ ಸತ್ಕರ್ಮಗಳನ್ನು (ಯಜನ, ಯಾಜನ ಇತ್ಯಾದಿ) ನಿರ್ವಹಿಸಿಕೊಂಡು ತಮ್ಮ ಬದುಕು ಸಾಗಿಸಲು ಬೇಕಾದ ಎಲ್ಲ ಅನುಕೂಲಗಳ, ಆ ಊರಿನ ಒಟ್ಟು ಯೋಗಕ್ಷೇಮದ ಜವಾಬ್ದಾರಿ ಅವನದಾಗಿತ್ತು.

ಎಂದರೆ ಆ ಅಗ್ರಹಾರದ ಸ್ಥಳೀಯ ಆಡಳಿತದ ಎಲ್ಲ ಜವಾಬ್ದಾರಿ ಅವನ ದಾಗಿದ್ದು ಅಲ್ಲಿಯ ಜನರಿಂದ ತೆರಿಗೆಗಳನ್ನು ಸಂಗ್ರಹಿಸಿ ರಾಜನಿಗೆ ಮುಟ್ಟಿಸುವ ಕೆಲಸವೂ ಅವನದಾಗಿತ್ತು. ಬ್ರಾಹ್ಮಣರಲ್ಲಿ ಅಥವಾ ಇತರರಲ್ಲಿ ಆದ ಜಗಳಗಳ ಪರಿಹಾರ ಕಾರ್ಯದಲ್ಲಿ ಅವನದೇ ಮುಖ್ಯ ಕರ್ತವ್ಯವಾಗಿದ್ದಿತು. ದೇವಾಲಯಗಳ ಆದಾಯ, ಅಲ್ಲಿನ ಸಿಬ್ಬಂದಿಯ ಸಂಬಳ, ಖರ್ಚಿನ ಲೆಕ್ಕ ಪತ್ರವಿಡುವ ಜವಾಬ್ದಾರಿ ಅವನದೇ ಆಗಿತ್ತು. ಅವನು ಬಾಲ್ಯದಲ್ಲಿ ವೇದ ಆಗಮ ಇತರ ಶಾಸ್ತ್ರಗಳನ್ನು ಅಭ್ಯಾಸಮಾಡಿದವನಾಗಿದ್ದರೂ ಸಹಜವಾಗಿಯೇ ಆ ಕಡೆ ಸಂಪೂರ್ಣ ಗಮನವನ್ನು ಕೊಡುವುದು ಕಷ್ಟವಾಗಿ ಅವನ ಯೌವನದ ಹೊತ್ತಿಗೆ ಅದು ನಿಂತು ಹೋಗಿದ್ದುದರಲ್ಲಿ ಆಶ್ಚರ್ಯವಿಲ್ಲ. ಅವನ ಆಡಳಿತಾತ್ಮಕ ಜವಾಬ್ದಾರಿಗಳಿಂದಾಗಿ ಅವನು ಆ ಗ್ರಾಮದ ಎಲ್ಲ ಜನರ ಜೊತೆ, ದಲಿತರಿಂದ ಹಿಡಿದು ಬ್ರಾಹ್ಮಣರವರೆಗೆ ಎಲ್ಲ ಜಾತಿಯ ಜನಗಳ ಜೊತೆಯಲ್ಲೂ ವ್ಯವಹರಿಸಬೇಕಾಗಿದ್ದಿತು. ಯಾವುದೇ ದೃಷ್ಟಿಯಿಂದ ನೋಡಿದರೂ ಅವನು ಲೌಕಿಕಿ ಬ್ರಾಹ್ಮಣ ವರ್ಗದವನಾಗಿದ್ದನೆಂಬುದರಲ್ಲಿ ಸಂದೇಹ ಕಾಣಿಸುವುದಿಲ್ಲ. ಮಾದರಸನನ್ನು ಮಡಿವಳ ಮಾಚಿದೇವನು 'ಶೈವಾಗಮಾಚಾರ್ಯ'ನೆಂದು ಕರೆದಿರುವು ದನ್ನು ನೋಡಿದರೆ ಅವನು ವೇದಗಳ ಜೊತೆ ಶೈವಾಗಮಗಳನ್ನು ವಿಶೇಷವಾಗಿ ಅಧ್ಯಯನ ಮಾಡಿದ್ದಂತೆ ತೋರುತ್ತದೆ. ಗಮನಿಸಬೇಕು – ವೇದಗಳಾಗಲಿ ಆಗಮಗಳಾಗಲಿ ಪರಸ್ಪರ ವಿರುದ್ಧವಲ್ಲ; ಅವು ಪರಸ್ಪರ ಪೂರಕ. ಎಲ್ಲ ಆಗಮಗಳೂ ತಾವು 'ವೇದಾವಿರುದ್ಧ' (ವೇದಕ್ಕೆ ಅವಿರುದ್ಧ) ಎಂದೇ ಹೇಳಿಕೊಂಡಿವೆ. ಆಗಮಗಳಲ್ಲಿ ಯಜ್ಞಕ್ಕಿಂತ ದೇವಾಲಯ ಪೂಜೆಗೆ ಹೆಚ್ಚು ಮಹತ್ವ. ವೇದಗಳು ಶೈವರಿಗೂ ವೈಷ್ಣವರಿಗೂ ಸಮಾನ ಪೂಜ್ಯ. ಮಾದರಸನು ಶೈವನಾದ್ದರಿಂದ ಶೈವಾಗಮಗಳನ್ನು ವಿಶೇಷವಾಗಿ ಅಧ್ಯಯನ ಮಾಡಿದ್ದುದು ಸ್ವಾಭಾವಿಕ. ಬಾಗೇವಾಡಿಯ ಬ್ರಾಹ್ಮಣರನ್ನು ಹನ್ನೆರಡನೆಯ ಶತಮಾನದ ಶಾಸನಗಳಲ್ಲಿ "ವಿನುತಾನೇಕ ವೇದ ವೇದಾಂಗ ತತ್ವ

ಜ್ಞಾನ ಮಾರ್ತಾಂಡ"ರೆಂದೇ ಹೊಗಳಿದೆ. ಶೈವ ಬ್ರಾಹ್ಮಣರಾದರೂ ವೇದಾಧ್ಯಯನಕ್ಕೇ ಪ್ರಥಮ ಪ್ರಾಶಸ್ತ್ಯ. ಮಾದರಸನೂ ವೇದಾಧ್ಯಯನ ಮಾಡಿದ್ದರೂ ಅವನು ಲೌಕಿಕಿ ಬ್ರಾಹ್ಮಣನಾಗಿ ಆಡಳಿತದ ಜವಾಬ್ದಾರಿ ಹೊತ್ತಿದ್ದನು. ಅದು ಒಂದು ರೀತಿ ವಂಶಪಾರಂಪರ್ಯವೂ ಆಗಿದ್ದಿತು.

ಸಾಮಾನ್ಯವಾಗಿ ವೈದಿಕಿಗಳು ವೈದಿಕಿಗಳಲ್ಲೇ, ಲೌಕಿಕಿಗಳು ಲೌಕಿಕಿಗಳಲ್ಲೇ ವಿವಾಹ ಸಂಬಂಧ ಬೆಳೆಸುವುದು ಸ್ವಾಭಾವಿಕ. ಮಾದರಸನ ಹೆಂಡತಿ ಇಂಗುಳೇಶ್ವರದ (ಬಾಗೆವಾಡಿ ಸಮೀಪದ ಗ್ರಾಮ) ಮಾದಲಾಂಬಿಕೆಯು ಅಂತಹ ಲೌಕಿಕಿ ಬ್ರಾಹ್ಮಣ ವರ್ಗದವಳೆಂಬಲ್ಲಿ ಅನುಮಾನವಿಲ್ಲ. ಏಕೆಂದರೆ ಅವಳ ಸೋದರರಾಗಿದ್ದ ಬಲದೇವ ಸಿದ್ಧರಸರು ರಾಜ ಬಿಜ್ಜಳನು ತನ್ನ ಮೊದಲ ರಾಜಧಾನಿ ಮಂಗಳವೇಡೆಯಲ್ಲಿ ಆಳುತ್ತಿರುವಾಗ ಅವನ ಭಂಡಾರದಲ್ಲಿ ಕರಣಿಕರಾಗಿದ್ದರು. ಬಸವಣ್ಣ ಜನಿವಾರವನ್ನು ತಿರಸ್ಕರಿಸಿ ಬಾಗೆವಾಡಿಯಿಂದ ಕೂಡಲ ಸಂಗಮಕ್ಕೆ ಹೋಗಿ ಮುಂದೆ ತನಗೆ ಅಪರಿಚಿತವಾಗಿದ್ದ ಮಂಗಳವೇಡೆಗೆ ಉದ್ಯೋಗವನ್ನು ಅರಸಿಕೊಂಡು ಹೋಗಲು ಅವರ ಸೋದರಮಾವಂದಿರು ಅಲ್ಲಿನ ಭಂಡಾರದಲ್ಲಿ ಅಧಿಕಾರಿಗಳಾಗಿದ್ದುದೇ ಕಾರಣ ವೆಂಬಲ್ಲಿ ಅನುಮಾನವಿಲ್ಲ. ಬಸವಣ್ಣ ತಮ್ಮ 'ಅಕ್ಷರ ಜ್ಞಾನ'ವನ್ನು ಮಾರಿ ಶಿವಭಕ್ತರಿಗೆ ಹೊನ್ನನ್ನೇ ನೀಡುವೆನೆಂದು ಸಂಕಲ್ಪ ಮಾಡಿದರೆಂದು ಕೆಲವು ಕೃತಿಗಳಲ್ಲಿ ಹೇಳಿದೆ. ಅವರು ಮಂಗಳವೇಡೆಗೆ 'ಗಣಕ ಕಾಯಕ'ವನ್ನು ಮಾಡಲು ಅದಕ್ಕನುಗುಣವಾದ ವೇಷ ಧರಿಸಿದರಂತೆ. 'ಕುಪ್ಪಸ' (ನಿಲುವಂಗಿ), 'ಬೀರಣ' (ಅಧಿಕಾರಿಗಳ ಉಡುಪು), 'ಟೊಪ್ಪಿಗೆ' ಧರಿಸಿದ್ದ ಅವರು ಕರಣಿಕರಂತೆ ಕಾಣಿಸುತ್ತಿದ್ದರೆಂದು ವರ್ಣನೆ ಇದೆ. ಅಲ್ಲಿನ ಕರಣಶಾಲೆಯಲ್ಲಿ (ಲೆಕ್ಕ ಪತ್ರ ಕಚೇರಿಯಲ್ಲಿ) ಗಣಕರು ತಪ್ಪಾಗಿ ಆಯ ವ್ಯಯ ವೆಚ್ಚವನ್ನು ದಾಖಲಿಸಿದ್ದನ್ನು ಅವರು ಗುರುತಿಸಿ ತೋರಿಸಿದ್ದರಿಂದ ಆ 'ಗಣಕವಿಖ್ಯಾತ' ಬಸವಣ್ಣನವರಿಗೆ ಅದೇ ಭಂಡಾರದಲ್ಲಿ ವರ್ಷಕ್ಕೆ ನೂರೊಂದು ಹೊನ್ನಿನ (ಗದ್ಯಾಣದ) ಉದ್ಯೋಗವೂ ದೊರಕಿತು. ಅವರು ಗ್ರಾಮದ ಲೆಕ್ಕ ಪತ್ರ ಇಡುವ ಮುಖ್ಯಸ್ಥನ ಮಗನಾಗಿದ್ದುದರಿಂದ ಹಣದ ವ್ಯವಹಾರ ಜ್ಞಾನವು ಅವರಿಗೆ ಸಹಜವಾಗಿಯೇ ಕರಗತವಾಗಿದ್ದಿತು.

ಮಾದರಸ, ಸಿದ್ಧರಸ, ಬಸವರಾಜ ಈ ಹೆಸರುಗಳ ಕೊನೆಯಲ್ಲಿರುವ –ಅರಸ, –ರಾಜ ಪದಗಳು ಅಧಿಕಾರ ಸೂಚಕಗಳೂ ಹೌದು ('ರಾಯ', 'ರಾವ್' ಅದೇ ಮೂಲದ ಪದಗಳು).

ಇದೆಲ್ಲವೂ ಮಾದರಸನು ವೈದಿಕಿ ಬ್ರಾಹ್ಮಣನಾಗಿರದೆ ಲೌಕಿಕಿ ಬ್ರಾಹ್ಮಣನಾಗಿದ್ದ ನೆಂಬುದಕ್ಕೆ ಸ್ಪಷ್ಟಾಧಾರಗಳು. 'ವೈದಿಕಿ', 'ಲೌಕಿಕಿ' ಪದಗಳು ಹನ್ನೆರಡನೆಯ ಶತಮಾನದಲ್ಲಿ ಆ ಅರ್ಥದಲ್ಲಿ ಬಳಕೆಯಲ್ಲಿ ಇದ್ದಿರಲಾರವು. ಆದರೆ ಅಂದು ಆ ಪದಗಳು ಸೂಚಿಸುವ ಸ್ಥೂಲ, ಭಿನ್ನ ಉಪವರ್ಗಗಳಿದ್ದವು. ಮಾದರಸನೂ ಅವನ

ಮಾವನ ಮನೆಯವರೂ ಕಮ್ಮೆ ಬ್ರಾಹ್ಮಣರೆಂಬುದೂ ಮುಖ್ಯ. ಇಂದಿಗೂ ಕರ್ನಾಟಕದ ಬಬ್ಬೂರು ಕಮ್ಮೆ, ಉಲುಚು ಕಮ್ಮೆಗಳು ಕನ್ನಡ ಮನೆ ಮಾತಿನವರಾಗಿದ್ದು ಅವರೆಲ್ಲ ಬಹುತೇಕ ಲೌಕಿಕಿ ಬ್ರಾಹ್ಮಣರು ಮತ್ತು ಅವರು ಹೆಚ್ಚಾಗಿ ರೈತಾಪಿ ಜನ. ಆಂಧ್ರದ ಲೌಕಿಕಿ ಬ್ರಾಹ್ಮಣ ವರ್ಗದ ನಿಯೋಗಿಗಳಲ್ಲಿ 'ಕಮ್ಮಲು' (ಕಮ್ಮೆಗಳು) ಎಂಬುದು ಒಂದು ಉಪವರ್ಗ. ಬಾಗೆವಾಡಿ ಮಾದರಸನ ಅದೇ ಬಾಗೆವಾಡಿಯ ವಂಶಸ್ಥರು, ಇಂಗುಳೇಶ್ವರದ ಅವನ ಮಾವನ ವಂಶಸ್ಥರು, ಅರ್ಜುನವಾಡದ ಅವನ ಮೊದಲ ಹೆಂಡತಿಯ ವಂಶಸ್ಥರು ಈಗಲೂ 'ಕುಲಕರ್ಣಿ'ಗಳೆಂದೇ ಪ್ರಸಿದ್ಧರು. ಅವರು ಪೌರೋಹಿತ್ಯಕ್ಕೆ ಈಗಲೂ ವೈದಿಕಿ ಬ್ರಾಹ್ಮಣರನ್ನು ಕರೆಯುತ್ತಾರೆ ಎಂಬುದನ್ನು ಆ ಮೂರೂ ಮನೆಗಳಿಗೆ ಭೇಟಿಮಾಡಿ, ಆ ಕುಲಕರ್ಣಿಗಳ ಜೊತೆ ಮಾತನಾಡಿ ಖಚಿತ ಪಡಿಸಿಕೊಂಡಿದ್ದೇನೆ.

ಎಂದರೆ, ಬಸವಣ್ಣ ಹುಟ್ಟಿನಿಂದ ಸ್ಮಾರ್ತ ಲೌಕಿಕಿ ಬ್ರಾಹ್ಮಣರೆಂಬಲ್ಲಿ ಅನುಮಾನವೇ ಇಲ್ಲ. ಪೌರೋಹಿತ್ಯ ಅವರ ಕುಲ ಕಸುಬಾಗಿರಲಿಲ್ಲ.

ಮೇಲಿನ ಹೊಸ ಸಂಗತಿ ನೋಡಲು ಕಿರಿದಾದರೂ ಒಂದು ಶೋಧನ ದೀಪದಂತೆ ಬಸವಣ್ಣನವರ ಬಾಲ್ಯದ ಬದುಕು, ಅನುಭವಗಳನ್ನು ಬೆಳಕಿಗೆ ತರುವುದಲ್ಲದೆ ಅವು ಬಸವಣ್ಣ ರೂಪುಗೊಳ್ಳಲು ಸಹಾಯ ಮಾಡುತ್ತವೆಯೆಂಬುದನ್ನು ಗಮನಿಸಿದಾಗ ಅದು ನಗಣ್ಯ ಶೋಧನೆಯೆಂದು ಪಕ್ಕಕ್ಕೆ ಇಡುವಂತಹುದಲ್ಲ ಎಂಬುದು ಮನದಟ್ಟಾಗುತ್ತದೆ. ಬಸವಣ್ಣ ವೈದಿಕಿ ಬ್ರಾಹ್ಮಣರ ಮನೆಯ ಮಗುವಾಗಿದ್ದರೆ ತಂದೆಯ ನಿತ್ಯ-ನೈಮಿತ್ತಿಕ ಕರ್ಮಾಚರಣೆಗಳ ಪ್ರಪಂಚದಲ್ಲಿ ಮುಳುಗಿ ಉಳಿದ ಮಕ್ಕಳಿಂದ ತೀರ ದೂರದ ಬದುಕನ್ನು ಬಾಳುತ್ತ, ಬಹುಸೀಮಿತ ಜೀವನಾನುಭವವನ್ನು ಪಡೆದವನಾಗಿರುತ್ತಿದ್ದನು. ತಾನಾಯಿತು ತನ್ನ ಮನೆಯಾಯಿತು ಎಂಬಂತೆ ಬದುಕುತ್ತ ವೈದಿಕಿ ಬ್ರಾಹ್ಮಣ ಸಮೂಹದ ಜೀವನ ಪ್ರಪಂಚದ ಭಾಗವಾಗಿ ಉಳಿಯುತ್ತಿದ್ದ. ಬದುಕಿಗೆ ಇನ್ನೊಂದು ಮುಖವಿದೆ ಅಥವಾ ಹಲವು ಮುಖಗಳಿವೆ ಎಂಬುದರ ಅರಿವಿಲ್ಲದೆ ತಾನೇ ಸೃಷ್ಟಿಯ ಕೇಂದ್ರವೆಂಬಂತೆ, ತಾನೇ ಇತರರಿಗಿಂತ ಶ್ರೇಷ್ಠವೆನ್ನುವ ಮನೋಧರ್ಮದವನಾಗಿರುತ್ತಿದ್ದನು. ಒಂದು ರೀತಿಯಲ್ಲಿ ಅವನದು ಮುಚ್ಚಿದ ಮನಸ್ಸಾಗಿರುತ್ತಿತ್ತು.

ಬ್ರಾಹ್ಮಣೇತರರ ಬಗ್ಗೆ ಒಂದು ಬಗೆಯ ಅಸಡ್ಡೆ-ಅನಾದರವನ್ನೂ ಅವನು ಬೆಳೆಸಿಕೊಳ್ಳುತ್ತಿದ್ದ. ವೇದ ಮಂತ್ರೋಚ್ಚಾರ, ಸ್ಮೃತಿ ಪುರಾಣಗಳ ಅಧ್ಯಯನ, ಭಾರತ ರಾಮಾಯಣ ಭಾಗವತ ಇತ್ಯಾದಿ ಪುರಾಣಗಳ ಪರಿಚಯ ಇವು ಅವನ ಜ್ಞಾನದ ಕ್ಷೇತ್ರಗಳಾಗಿರುತ್ತಿದ್ದವು. ಇನ್ನು ಕೆಳವರ್ಗದ ಭಕ್ತರ ಕತೆಗಳು ಅವನ ಕಿವಿಗೆ ಬೀಳುವ ಪ್ರಸಂಗಗಳೇ ಇರುತ್ತಿರಲಿಲ್ಲ.

ಲೌಕಿಕಿ ಬ್ರಾಹ್ಮಣನ ಮಗನಾಗಿದ್ದುದರಿಂದ ಬಾಲಕ ಅಥವಾ ಯುವಕ

ಬಸವಣ್ಣನವರ ಮೇಲೆ ಆಗಿರಬಹುದಾದ ಪರಿಣಾಮಗಳನ್ನು ಊಹಿಸಲು ಸಾಧ್ಯ. ಮಡಿ ಮೈಲಿಗೆಗಳ ಬಗ್ಗೆ ಅಜಾಗ್ರತನಾಗಿರದಿದ್ದರೂ ಆ ಬಾಲಕನಿಗೆ ತೀರ ಕಟ್ಟುನಿಟ್ಟಿನ ಆಚರಣೆಯ ಅಗತ್ಯವಿರಲಿಲ್ಲ.

ಬಸವಣ್ಣನವರಿಗೆ ಇತ್ತ ವೈದಿಕೀ ಬ್ರಾಹ್ಮಣರ ಕಟ್ಟುನಿಟ್ಟಾದ ಸಂಪ್ರದಾಯಬದ್ಧ ಮಡಿ ಒಳಜೀವನವೂ ಪರಿಚಯವಾಗಿತ್ತು. ಬ್ರಾಹ್ಮಣೇತರ ವರ್ಗದ ಸ್ವತಂತ್ರ ಸಹಜ ಜೀವನದ ಪರಿಚಯವೂ ಆಗಿತ್ತು. ಅವರು ಸ್ಪೃಶ್ಯ ಶೂದ್ರವರ್ಗದ ಮಕ್ಕಳೊಡನೆ ಆಡಲು ಅವಕಾಶವಿದ್ದುದರಿಂದ ಬಾಗೆವಾಡಿಯ ಅವರ ಜೀವನ ನಿಯಂತ್ರಿತವಾದುದಾಗಿರಲಿಲ್ಲ. ಬಾಲಕರಾಗಿ ಅವರು ಸ್ವಚ್ಛಂದವಾಗಿ ಎಲ್ಲರೊಡನೆ ಬೆರೆತರು. ಅಸ್ಪೃಶ್ಯ ದಲಿತ ಮಕ್ಕಳೊಡನೆ ಅವರು ಮುಕ್ತವಾಗಿ ಬೆಳೆಯಲವಕಾಶವಿರದಿದ್ದರೂ ಅವರ ಕೇರಿಯ ಸಮೀಪಕ್ಕೆ ಹೋಗಲು ಆ ಜನರ ಜೊತೆ ಮಾತನಾಡಲು ಅಡ್ಡಿಯಿರಲಿಲ್ಲ. ಅವರು ಬಾಗೆವಾಡಿಯಲ್ಲಿ ತಮ್ಮ ಹದಿನಾರನೆಯ ವಯಸ್ಸಿನವರೆಗೂ ಇದ್ದರು ಎಂಬುದು ಖಚಿತವಾಗಿರುವುದರಿಂದ ಆ ಊರಿನ ಜೀವನದ ಅವರ ಅನುಭವ, ಎಂದರೆ ಲೋಕಾನುಭವಗಳನ್ನು ಮುಕ್ತವಾಗಿ ಸ್ವೀಕರಿಸುವ ವಯಸ್ಸಿನ ಜೀವನದ ಅನುಭವ ಅತ್ಯಂತ ಮಹತ್ವದ್ದಾಗುತ್ತದೆ. ಅವರ ಅನುಭವ ಪ್ರಪಂಚ ಸಹಜವಾಗಿಯೇ ಬಹುಮುಖಿಯದಾಗಿತ್ತು. ಶ್ರಮಜೀವಿಗಳ ಪ್ರತ್ಯಕ್ಷ ಪರಿಚಯವಿದ್ದು ಅವರಲ್ಲಿಯೂ ಇದ್ದ ಮನುಷ್ಯತ್ವದ ಅರಿವು ಅವರಿಗಿತ್ತು. 'ಕರ್ಮ'ದ ಜೀವನ, ಶ್ರಮದ ಜೀವನ ಇವುಗಳ ವ್ಯತ್ಯಾಸ ಎದ್ದು ಕಾಣುತ್ತಿತ್ತು. ಆ ಬ್ರಾಹ್ಮಣೇತರ ಜನಾಂಗದಲ್ಲಿ ಬದುಕಿನ ನಿಜವಾದ ಮೌಲ್ಯಗಳಿದ್ದುದನ್ನು ಗುರುತಿಸಲು ಸಾಧ್ಯವಿತ್ತು. ('ವೈದಿಕೀ ಬ್ರಾಹ್ಮಣ'ರೆಲ್ಲ ಮನುಷ್ಯತ್ವವಿಲ್ಲದ ಕರ್ಮಠರು ಎಂಬ ಸಾರಾಸಗಟಾದ ತೀರ್ಮಾನ ಖಂಡಿತ ತಪ್ಪು.) ವೈದಿಕಿ ಬ್ರಾಹ್ಮಣ ಬಾಲಕಿನಿಗಿಂತ ಹೆಚ್ಚು ವಿಸ್ತಾರವಾದ ಲೋಕಾನುಭವವನ್ನು ಹೆಚ್ಚು ಉದಾರವಾದ ದೃಷ್ಟಿಕೋನವನ್ನು ಬೆಳೆಸಿಕೊಳ್ಳಲು, ವಸ್ತುನಿಷ್ಠವಾಗಿ ಬದುಕನ್ನು ಪರಾಮರ್ಶಿಸಲು ಅವರಿಗೆ ಹೆಚ್ಚು ಸ್ವತಂತ್ರ ಅವಕಾಶ ಒದಗಿತ್ತು. ಹೆಚ್ಚು ವಿಸ್ತಾರವಾದ ಲೋಕಾನುಭವವನ್ನು, ಹೆಚ್ಚು ಉದಾರವಾದ ದೃಷ್ಟಿಕೋನವನ್ನು ಬೆಳೆಸಿಕೊಳ್ಳಲು, ವಸ್ತುನಿಷ್ಠವಾಗಿ ಬದುಕನ್ನು ಪರಾಮರ್ಶಿಸಲು ಅವರಿಗೆ ಹೆಚ್ಚು ಸ್ವತಂತ್ರ ಅವಕಾಶ ಒದಗಿತ್ತು. ಹೆಚ್ಚು ತೆರೆದ ಮನಸ್ಸಿನವರಾಗಿ ಜಗತ್ತನ್ನು ಅಂತರ್ಗತಗೊಳಿಸಿಕೊಳ್ಳಲು ಸಾಧ್ಯವಾಯ್ತು. ಅವರಿಗೆ ರಾಮಾಯಣ, ಮಹಾಭಾರತ, ಭಾಗವತ ಕತೆಗಳಲ್ಲದೆ ಶ್ವಪಚಯ್ಯನಂತಹ ದಲಿತವರ್ಗದ ಪೌರಾಣಿಕ ಶಿವಭಕ್ತರ ಕತೆಗಳ ಪರಿಚಯವೂ ಆಗಲು ಅವಕಾಶ ದೊರಕಿತ್ತು.

'ಅನಧ್ಯಯನ'ದ (ರಜಾದಿನವನ್ನು ಹಿಂದೆ ನಿರ್ದೇಶಿಸುತ್ತಿದ್ದ ಪದ ಅದು) ದಿನಗಳನ್ನು ಅವರು ಹೆಚ್ಚಾಗಿ ಬಾಗೆವಾಡಿ ಸಮೀಪದ ತನ್ನ ತಾಯಿಯ ತೌರುಮನೆ ಇಂಗುಳೇಶ್ವರದಲ್ಲಿ ಕಳೆಯುತ್ತಿದ್ದರೆಂಬ ಊಹೆ ನಿರರ್ಥಕವಲ್ಲ. ಅಲ್ಲಿ ಅವರು ತಂದೆ

ಊರಿಗಿಂತ ಹೆಚ್ಚು ಸ್ವತಂತ್ರವಾಗಿರಲು ಸಹಜವಾಗಿಯೇ ಅವಕಾಶವಿತ್ತು. ಜೊತೆಗೆ ಇಂಗುಳೇಶ್ವರವು ಚಿಕ್ಕ ಚಿಕ್ಕ ಬೆಟ್ಟ, ಕಣಿವೆ, ಕಾಡು, ಕೆರೆ, ಗುಹೆ, ಹಳ್ಳಗಳಿಂದ ಪರಿವೃತವಾದ ಸುಂದರ ಊರಾಗಿದ್ದುದರಿಂದ ಅಲ್ಲಿನ ಪ್ರಕೃತಿಯ ಚೆಲುವು ಅವರ ಸೌಂದರ್ಯ ಪ್ರಜ್ಞೆಯನ್ನು ಬೆಳೆಸಿತು. ಬಾಗೇವಾಡಿಯು ಬದುಕಿನ ವಾಸ್ತವಗಳ ಅರಿವನ್ನು, ಇಂಗುಳೇಶ್ವರವು ಪ್ರಕೃತಿಯ ಚೆಲುವನ್ನು ಅವರಿಗೆ ಧಾರೆ ಎರೆದವು.

ಜೊತೆಗೆ ಅವರು ಅಗ್ರಹಾರದ ಮುಖ್ಯಸ್ಥನ ಮಗನಾಗಿದ್ದುದರಿಂದ ಒಂದು ಬಗೆಯ ಆತ್ಮವಿಶ್ವಾಸವು ಅವರಲ್ಲಿ ಸಹಜವಾಗಿತ್ತು. ಅವರು ದೊಡ್ಡವರಾದ ಮೇಲೆ, ತಮಗೆ ಚೆನ್ನಬಸವಣ್ಣನವರಿಂದಾಗಿ ವೀರಶೈವದ ಪರಿಚಯವಾಗಿ, ಕರ್ಮಗಳಿಗೆ ಹೆಚ್ಚು ಪ್ರಾಶಸ್ತ್ಯ ನೀಡಿದ್ದ "ಶೈವ"ಕ್ಕಿಂತ ಭಕ್ತಿಪ್ರಧಾನ "ವೀರಶೈವ"ವೇ ಪ್ರಧಾನವಾಗಿ ಕಂಡು ತಾವು ವೀರಶೈವರಾದೆವು ಎಂದು ಒಂದು ವಚನದಲ್ಲಿ ಹೇಳಿಕೊಂಡಿದ್ದಾರೆ. ಗುಣವನ್ನು ಮುಕ್ತವಾಗಿ ಸ್ವೀಕರಿಸಲು ಅವರ ಹಿನ್ನೆಲೆ ಖಂಡಿತ ಸಹಾಯಮಾಡಿದೆ. ಅವರು ಲೌಕಿಕಿ ಬ್ರಾಹ್ಮಣರಾಗಿದ್ದರೂ ಕೆಲವು ಅಗತ್ಯ ಕರ್ಮಗಳನ್ನು ಮಾಡಲೇಬೇಕಿತ್ತು ಎಂಬುದು ಅರ್ಥವಾಗುವಂತಹುದು. ವೈದಿಕಿ ಬ್ರಾಹ್ಮಣರಾಗಿದ್ದರೆ ವೀರಶೈವದತ್ತ ಆಕರ್ಷಿತರಾಗುತ್ತಿದ್ದರೆಂಬುದನ್ನು ಊಹಿಸಲೂ ಕಷ್ಟವಾಗುತ್ತದೆ.

ಅವರ ಹುಟ್ಟು ಬ್ರಾಹ್ಮಣ್ಯ, ಅವರು ಬಿಜ್ಜಳನ ಭಂಡಾರದಲ್ಲಿ ಪಡೆದ ಸ್ಥಾನ ಇವು ಅವರನ್ನು ಅಂದಿನ ಸಮಾಜವು ಗಂಭೀರವಾಗಿ ಭಾವಿಸಿ ಅವರನ್ನು ತಮ್ಮ ನಾಯಕನೆಂದು ಒಪ್ಪಿಕೊಳ್ಳಲು ಸಹಾಯಮಾಡಿದವು. ಉನ್ನತ ಜಾತಿಯ ಶ್ರೀಮಂತನು ಪ್ರಾಮಾಣಿಕವಾಗಿ ಜಾತಿಗಳ ಸಮಾನತೆಯ ಪರವಾಗಿ ಬಡವರ ಪರವಾಗಿ ನಿಂತಾಗ ಅವನ ಮಾತನ್ನು ಜನತೆ ಗೌರವಿಸುತ್ತದೆ. ಏಕೆಂದರೆ ಅಲ್ಲಿ ಅವನು ಕಳೆದು ಕೊಳ್ಳುತ್ತಿರುವ ಅನುಕೂಲಗಳು ಉಂಟು. ಅದೇ ಸಾಮಾನ್ಯ ಜಾತಿಯ ಬಡವ ಅಂತಹ ಮಾತನ್ನಾಡಿದರೆ ಅದಕ್ಕೆ ಬೆಲೆ ಸಿಗದು. ಏಕೆಂದರೆ ಅವನು ಅಲ್ಲಿ ಪಡೆದು ಕೊಳ್ಳುತ್ತಿರುವುದು ಇರುತ್ತದೆ. ಬಸವಣ್ಣನವರು (ಲೌಕಿಕಿ) ಬ್ರಾಹ್ಮಣರು ಎಂಬ ಅಂಶವು ಬೀರಬಹುದಾದ ಬೆಳಕಿನ ಬಗ್ಗೆ ಹೆಚ್ಚಿನ ವಿಸ್ತೃತ ವ್ಯಾಖ್ಯಾನಕ್ಕೆ ಅವಕಾಶ ಉಂಟು.

ಕೊನೆಯದಾಗಿ, ಈ ಲೇಖನಕ್ಕೆ ಪರೋಕ್ಷ ಸಂಬಂಧ ಇರುವ ಮೂರು ಸಂಗತಿಗಳನ್ನು ಓದುಗರ ಕುತೂಹಲಕ್ಕಾಗಿ ನೀಡುತ್ತಿದ್ದೇನೆ. (1) ಅಲ್ಲಮ ಬಸವಣ್ಣ ನವರನ್ನು "ಯುಗದ ಉತ್ಸಾಹ"ವೆಂದು ಬಣ್ಣಿಸಿರುವುದು. ಅಂದಿನ ಚಲನ ಹೀನ ಸಮಾಜಕ್ಕೆ ಜೀವಂತಿಕೆಯನ್ನು ತಂದುಕೊಟ್ಟ ಬಸವಣ್ಣನವರನ್ನು ಅದಕ್ಕಿಂತ ಚೆನ್ನಾಗಿ, ಪರಿಣಾಮಕಾರಿಯಾಗಿ, ಸಂಕ್ಷಿಪ್ತವಾಗಿ ನಿರ್ದೇಶಿಸಲು ಯಾರಿಂದಲೂ ಸಾಧ್ಯವೇ ಇಲ್ಲ. ಅದನ್ನು ಗ್ರಹಿಸದ ಕೆಲವು ಹಿಂದಿನ ಹಸ್ತಪ್ರತಿಕಾರರು "ಯುಗದ ಉತ್ಸವ" ಎಂದು ತಿದ್ದಿದ್ದಾರೆ.

ಅದೂ ಸರಿಯೇ! ಇಂದು ಆಧುನಿಕ ಕಾಲದಲ್ಲಿ ಭಾಷಣಕಾರರು ಬಸವಣ್ಣ

ನವರನ್ನು ತಮ್ಮ ನಾಲಿಗೆಯೆಂಬ ಪಲ್ಲಕ್ಕಿ ಉತ್ಸವದಲ್ಲಿ ಮೆರೆಸುತ್ತಾರೆ. (ಅವರಲ್ಲಿ ಅನೇಕರ ಹೃದಯದ ಗುಪ್ತ ಆರಾಧ್ಯದೈವ ಬಿಜ್ಜಳನೇ ಆಗಿರುವುದು ಒಂದು ಕಠೋರ ವಾಸ್ತವ.) (2) ಬಸವಣ್ಣನವರ ಹುಟ್ಟೂರು ಬಾಗೆವಾಡಿಯನ್ನು ಬಸವನ ಬಾಗೇವಾಡಿ ಯೆಂದು ಈಗ ಜನರು ಕರೆಯುತ್ತಾರೆ. ಹದಿನಾರನೇ ಶತಮಾನದ ವೀರಶೈವಾಮೃತ ಪುರಾಣದಲ್ಲಿ (8.1.9) ಅದನ್ನು "ಕನ್ನಡ ಬಾಗವಾಡಿ" ಎಂದು ಕರೆದಿರುವುದರ ಅದ್ಭುತ ಔಚಿತ್ಯವನ್ನು ವಿವರಿಸಬೇಕಿಲ್ಲ. "ಬಸವ" ಎಂದರೆ "ಕನ್ನಡ"ವಲ್ಲದೆ ಮತ್ತೇನು ಎಂಬ ನನ್ನ ವ್ಯಾಖ್ಯಾನ ಧ್ವನಿಪೂರ್ಣವಾಗಿದ್ದರೂ, ಕೃತಿಕಾರನ ಪ್ರಕಾರ 'ಕನ್ನಡ ಬಾಗವಾಡಿ' ಎಂದರೆ ಕರ್ನಾಟಕದ ಬಾಗೆವಾಡಿ. 'ಶ್ರೀಗಿರಿ'ಯ ಎಂದರೆ ಆಂಧ್ರದ ಶ್ರೀಶೈಲದ ಪಶ್ಚಿಮಕ್ಕೆ ಇರುವ ಕರ್ನಾಟಕದ ಬಾಗೆವಾಡಿಯೆಂದು ಕವಿ ಗುಬ್ಬಿ ಮಲ್ಲಣಾರ್ಯ ಸೂಚಿಸಿದ್ದಾನೆ. ನಾನು ಹಿಂದೆ ಗ್ರಹಿಸಿದ್ದ ಅರ್ಥ ತಪ್ಪಾಗಿದೆಯೆಂದು ತಿಳಿದಾಗ ಸ್ವಲ್ಪ ಬೇಸರವೂ ಆಯಿತು – "ಕನ್ನಡ ಬಾಗೆವಾಡಿ" ಎಂಬುದು ಈಗಿನ ಬಸವನ ಬಾಗೆವಾಡಿ ಎಂಬುದಕ್ಕಿಂತ ಹೆಚ್ಚು ಉಚಿತವಾಗಿರುತ್ತಿತ್ತು. ಆದರೆ ಕವಿಯ ಅರ್ಥವನ್ನೇ ನಾವು ಇಟ್ಟುಕೊಳ್ಳಬೇಕಾಗಿರುವುದು ಅನಿವಾರ್ಯ. (3) ಕಾಲ, ದೇಶ, ಹೆಸರು ತಿಳಿಯದ ಅಜ್ಞಾತ ಕೃತಿಕಾರನೊಬ್ಬ ಬಸವಣ್ಣನವರನ್ನು ಹೀಗೆ ಸ್ತೋತ್ರ ಮಾಡಿದ್ದಾನೆ : "ವಿಶ್ವ ಧರ್ಮವನೊಂದುಗೂಡಿಪ ವೀರಶೈವರ ಚಂದಿರಾ! ವಿಶ್ವಸುತ ವರ ವೇದ ಬೋಧಕ ವಿಬುಧಪ್ರಿಯ ಬಸವೇಶ್ವರಾ." ಬಸವಣ್ಣ "ವಿಶ್ವಧರ್ಮ"ಗಳನ್ನು ಒಂದುಗೂಡಿಸಿದ "ವಿಶ್ವಸುತ." ಇದಕ್ಕೆ ಹೆಚ್ಚಿನ ವ್ಯಾಖ್ಯಾನ ಬೇಕೇ! ಬಸವಣ್ಣ ಬಾಳಿ ಬದುಕಿದ ವೀರಶೈವವು ವಿಶ್ವದ ಎಲ್ಲ ಧರ್ಮಗಳ ಸಾರವನ್ನೂ ಒಳಗೊಂಡಿತ್ತು. ಅವನು ವೀರಶೈವಗಗನದ ಚಂದ್ರ. ಅವನು ಬರೀ ಮಾದರಸ–ಮಾದಲಾಂಬಿಕೆಯರ ಮಗ ಅಲ್ಲ – ಇಡೀ ವಿಶ್ವದ ಮಗ; ಇಡೀ ವಿಶ್ವ ಅವರನ್ನು ಪ್ರೀತಿಸುತ್ತದೆ. ಆಧುನಿಕ ಪೂರ್ವದ ಕನ್ನಡದ ಜನ ಬಸವಣ್ಣನವರನ್ನು ಸರಿಯಾಗೇ ಅರ್ಥ ಮಾಡಿಕೊಂಡಿದ್ದರು; ಬದುಕಿನಲ್ಲಿ ಅವರನ್ನು ಅಳವಡಿಸಿಕೊಂಡಿದ್ದರು. ಈಗಿನವರನ್ನು ಇಲ್ಲಿ ಪ್ರಸ್ತಾಪಿಸಲು ಏಕೋ ಮನಸ್ಸು ಬಹಳ ಹಿಂದೇಟು ಹಾಕುತ್ತದೆ.



# 10

# ಬಸವಣ್ಣನ ಬಾಲ್ಯ, ಯೌವನ : ಒಂದು ವಿಶ್ವಾಸಾರ್ಹ ರೇಖಾಚಿತ್ರ

## ಅಣ್ಣ ದೇವರಾಜ

ಬಸವಣ್ಣನವರ ತಂದೆ ತಾಯಂದಿರು ಬಾಗೆವಾಡಿಯ ಮಾದರಸ ಮತ್ತು ಮಾದಲಾಂಬಿಕೆ ಎಂಬುದು ಎಲ್ಲರಿಗೂ ತಿಳಿದಿದೆ. ಬಸವಣ್ಣನಿಗೆ ಅಕ್ಕನಾಗಮ್ಮ ಅಥವಾ ನಾಗಲಾಂಬಿಕೆ ಎಂಬ ಸೋದರಿಯಿದ್ದು ಅವಳನ್ನು ಬಸವಣ್ಣನ ಅಕ್ಕ ಎಂದೇ ತಪ್ಪು ತಿಳಿಯಲಾಗಿದೆ. ಅವಳನ್ನು ಪ್ರಾಚೀನ ಕೃತಿಗಳಲ್ಲಿ 'ಅನುಜೆ' ಎಂದೇ ಕರೆದಿದೆ : ಅವಳು ವಾಸ್ತವವಾಗಿ ಬಸವಣ್ಣನ ತಂಗಿ : ಆ ಕಾರಣವೇ ಬಾಲ್ಯದಲ್ಲಿ ತಾಯ್ತಂದೆಯರನ್ನು ಕಳೆದುಕೊಂಡ ಬಸವಣ್ಣ ಬಾಗೆವಾಡಿಯಿಂದ ಕೂಡಲ ಸಂಗಮಕ್ಕೆ ಹೊರಟಾಗ, ಅವಳು ಅನಿವಾರ್ಯವಾಗಿ ಅಣ್ಣನನ್ನು ಹಿಂಬಾಲಿಸಿದಳು. (ಅಕ್ಕಮಹಾದೇವಿ ಹೆಸರಿನ ಹಾಗೆ ಅಕ್ಕನಾಗಮ್ಮ; 'ಅಕ್ಕ' ಎಂಬುದು ಜನ ಪ್ರೀತಿಯಿಂದ ಸೇರಿಸಿದ್ದು.)

ಬಸವಣ್ಣ ಮಾದಲಾಂಬಿಕೆಯ ಮೊದಲ ಮಗು, ಮಗ. ಆದರೆ ಅವನ ತಂದೆ ಮಾದರಸನಿಗೆ ಆ ಮೊದಲು ಮದುವೆಯಾಗಿ ಅವನಿಗೆ ಮೊದಲ ಪತ್ನಿಯಲ್ಲಿ ದೇವರಾಜ ಎಂಬ ಹೆಸರಿನ ಮಗನಿದ್ದ ಎಂದು ಊಹಿಸಲು ಪ್ರಬಲವಾದ ಕಾರಣಗಳಿವೆ. ಕ್ರಿ.ಶ. 1260ರ ಅರ್ಜುನವಾಡ ಶಿಲಾಶಾಸನದ ಪ್ರಕಾರ,[1] "ಬಾಗವಾಡಿ ಪುರವರಾಧೀಶ್ವರ ಮಾದಿರಾಜನ ತನೂಜಂ ಬಸವರಾಜ." – ಆ ಬಸವಣ್ಣನಿಗೆ ದೇವರಾಜ ಎಂಬ ಅಣ್ಣನಿದ್ದಂತೆ ಅಲ್ಲಿಂದಲೇ ತಿಳಿದು ಬರುತ್ತದೆ. ಶಾಸನದ ಪ್ರಕಾರ, ದೇವರಾಜನು ಸಂಗನ ಬಸವನ "ಅಗ್ರಜಂ." (ದೇವರಾಜನ ಮಗ ಕಲಿದೇವರಸ,

1. ಎಂ.ಎಂ. ಕಲಬುರ್ಗಿ : ಶಾಸನಗಳಲ್ಲಿ ಶಿವಶರಣರು, ಪು. 56–62.

ಅವನ ಮಗ ಹಾಲಬಸವಿದೇವನ ಕಾಲದ ಶಾಸನವಿದು.)[2] 'ರಾಜ' 'ಅರಸ' ಎಂಬುವು ಒಂದೇ ಅರ್ಥದ ಪದಗಳು ('ಅರಸ' ಎಂಬುದು ಸಂಸ್ಕೃತದ 'ರಾಜನ್' ಪದದ ತದ್ಭವ. ರಾಜನ್ – *ಅರಾಜನ್ – ತಮಿಳು ಅರಸ(ಶ)ನ್ – ಕನ್ನಡ ಅರಸ).[3] ಮಾದರಸನ ವಂಶಜರೆಲ್ಲ '–ಅರಸ', '–ದೇವ', '–ರಾಜ' ಎಂದು ಕೊನೆಯಾಗುವ ಮೇಲ್ವರ್ಗ ಸೂಚಕ ಹೆಸರುಗಳನ್ನಿಟ್ಟುಕೊಂಡಿರುವುದು ಗಮನಾರ್ಹ. ಈ ಶಾಸನದಲ್ಲಿ ಬಸವಣ್ಣನನ್ನು "ಜಂಗಮ ಲಿಂಗೈಕ ಭಕ್ತಿ ನಿರ್ಭರ ಲೀಲಾ ಸಂಗಂ ಸಂಗನಬಸವಂ" ಎಂದು ಕರೆದು ಸ್ತೋತ್ರ ಮಾಡಿರುವುದನ್ನು ಕಂಡರೆ, ಅವನು ಹನ್ನೆರಡನೆಯ ಶತಮಾನದ ಬಸವಣ್ಣನೇ ಎಂಬುದರಲ್ಲಿ ಯಾವುದೇ ಅನುಮಾನವಿಲ್ಲ. ಶಾಸನದ ಪ್ರಕಾರ, ಹಾಲಬಸವಿದೇವನಿಗೆ ಕೊಟ್ಟ ದತ್ತಿಯಲ್ಲಿ ನಾಗೇಶ್ವರವೇ ಮೊದಲಾದ ದೇವಾಲಯಗಳ ಜೊತೆ ಸಂಗಮೇಶ್ವರವೂ ಸೇರಿರುವುದು, 'ಜಂಗಮಾರಾಧನೆ'ಗೂ ದತ್ತಿ ಕೊಟ್ಟಿರುವುದು ಬಸವಣ್ಣನ ಅಣ್ಣ ದೇವರಾಜನ ಸಂತತಿಯವರು ವೀರಶೈವದ ಅಭಿಮಾನಿಗಳಾಗಿದ್ದರು ಎಂಬಲ್ಲಿ ಅನುಮಾನ ಕಾಣಿಸದು. ಬಸವಣ್ಣನ ಅಣ್ಣ ದೇವರಾಜನ ಮೊಮ್ಮಗ ಹಾಲ ಬಸವಿದೇವನ ಹೆಸರಲ್ಲಿ 'ಬಸವ' ಹೆಸರಿರುವುದನ್ನು ಗಮನಿಸಿದರೆ, ತಂದೆಯಿಂದ ಮೊಮ್ಮಗನಿಗೆ ಹೆಸರು ಹರಿದು ಬರುವ ಸಂಗತಿಯನ್ನು ಲಕ್ಷ್ಯದಲ್ಲಿಟ್ಟುಕೊಳ್ಳುವುದಾದರೆ ಬಸವಣ್ಣನ ಅಜ್ಜನ ಹೆಸರಲ್ಲಿ ಬಸವ ಹೆಸರಿತ್ತೆಂದು ಊಹಿಸಲವಕಾಶವಿದೆ. ಬಸವ ಹೆಸರನ್ನು ಬಸವನಿಗಿಂತ ಹಿಂದೆಯೂ ಕರ್ನಾಟಕದಲ್ಲಿ ಇಡುತ್ತಿದ್ದರೆಂಬುದಕ್ಕೆ ಹಲವು ಶಾಸನಾಧಾರಗಳಿವೆ. ಈಚಿನವರೆಗೆ ಬಸವನ ಬಾಗೇವಾಡಿಯ ಬಸವಣ್ಣನ ವಂಶದಲ್ಲಿ (ಅವರು ಬ್ರಾಹ್ಮಣರು) 'ಮಾದರಸ' ಹೆಸರು ಅಜ್ಜನಿಂದ ಮೊಮ್ಮಗನವರೆಗೆ ಹರಿದು ಬಂದಿರುವುದನ್ನು ನಾನು ಗುರುತಿಸಿದ್ದೇನೆ.[4] (1979ರಲ್ಲಿ ಮಾದರಸ ಎಂಬ ಯುವಕನ ತಂಗಿ ಜೊತೆ ಮಾತನಾಡಿದ್ದೆ.) ಅಥವಾ, ಆ ಹೊತ್ತಿಗೆ ಲಿಂಗೈಕ್ಯನಾಗಿದ್ದ ಬಸವಣ್ಣನ ಹೆಸರಿನ ಆಧಾರದ ಮೇಲೆ ಹಾಲಬಸವಿದೇವ ಎಂಬ ಹೆಸರಿಟ್ಟಿರುವ ಸಾಧ್ಯತೆ ಇದೆ. ಇಷ್ಟು ಖಚಿತ : ದೇವರಾಜನು ಮಾದರಸನ ಮಗ, ಬಸವಣ್ಣನ ಅಣ್ಣ.

---

2. "ಸಂಗನ ಬಸವನ ಅಗ್ರ (ಜಂ) (ಲಿಂ) ಗೈಕಂ ದೇವರಾಜಮುನಿಪನ ತನಯಂ... ಕಲಿ ದೇವರಸಂ... ಕಲಿದೇವ ಮುನಿಪನಾತ್ಮಜ... ಹಾಲಬಸವಿದೇವ ಮುನಿಪಂ"; "ಶ್ರೀ ಬಸವ ರಾಜನನ್ವಯರುಪ್ಪ... ಹಾಲಬಸವಿದೇವಂಗೆ" – ಅದೇ.

3. ಬಸವರಾಜ, ಬಸವರಸ, ಬಸವಿದೇವ ಇವು ಬಸವಣ್ಣನ ಹೆಸರ ರೂಪಾಂತರಗಳು.

4. ಎಂ. ಚಿದಾನಂದಮೂರ್ತಿ : 'ಬಸವಣ್ಣನವರ ಹುಟ್ಟಿದ ಮನೆಗೆ ಭೇಟಿ.' ಲಿಂಗಾಯತ ಅಧ್ಯಯನಗಳು, ಪು. 429–31. ಬಾಗೇವಾಡಿಯ ಮನೆ ಅವರ ತಂದೆಯ ಮನೆ ಯೆಂದೂ, ಬಸವಣ್ಣ ಹುಟ್ಟಿದ್ದು ಅವನ ತಾಯಿಯ ತವರುಮನೆ ಇಂಗುಳೇಶ್ವರದಲ್ಲಿ ಎಂದು ಈಚೆಗೆ ಖಚಿತವಾಗಿದೆ. (ಅದರ ವಿವರಗಳಿಗೆ ಮುಂದೆ ನೋಡಿ.)

ಆದರೆ, ವೀರಶೈವ ಕೃತಿಗಳಲ್ಲಿ ಬಸವಣ್ಣ ಮಾದಲಾಂಬಿಕೆಯ ಮಗನೆಂದು, ತನಗೆ ಮಕ್ಕಳಿಲ್ಲವೆಂಬ ದುಃಖದಿಂದ ಬಾಗೆವಾಡಿಯ ನಂದಿಗೆ ಹರಸಿಕೊಂಡು ಬಸವಣ್ಣನನ್ನು ಹೆತ್ತಳೆಂಬ ನಿರೂಪಣೆ ಇರುವ ಕಾರಣ, ಸಮಕಾಲೀನ ಅಥವಾ ಮುಂದಿನ ವೀರಶೈವ ವಾಙ್ಮಯವು ಅಪ್ಪಿತಪ್ಪಿಯೂ ದೇವರಾಜನ ಹೆಸರನ್ನು ಹೇಳದಿರುವ ಕಾರಣ ಅವನು ಮಾದಲಾಂಬಿಕೆಯ ಮಗನಲ್ಲವೆಂಬುದು ಸ್ಪಷ್ಟ.

ಮುಂದಿನ ಊಹೆ ಸ್ಪಷ್ಟವಾಗಿದೆ : ದೇವರಾಜನು ಬಾಗೆವಾಡಿಯ ಮಾದರಸನ ಮಗ; ಮಾದರಸನ ಇನ್ನೊಬ್ಬ ಹೆಂಡತಿಯ, ಬಹುಶಃ ಮೊದಲ ಹೆಂಡತಿಯ ಮಗ. ಆ ಹೆಂಡತಿ ಮಡಿದ ಕಾರಣದಿಂದ ಅವನು ಮಾದಲಾಂಬಿಕೆಯನ್ನು ಮದುವೆಯಾದ.

ಈ ಊಹೆಯನ್ನು ಪ್ರಬಲವಾಗಿ ಸಮರ್ಥಿಸುವ ಸಾಕ್ಷ್ಯಾಧಾರ ಮಾದಲಾಂಬಿಕೆಯ ತೌರೂರಾದ ಇಂಗುಳೇಶ್ವರದಲ್ಲಿ ಜನಜನಿತವಾಗಿದೆ. ಅಲ್ಲಿಯ ಜನರ ಪ್ರಕಾರ, "ಮೊದಲ ಹೆಂಡತಿ ಚೆನ್ನಮ್ಮ ಹೆರಿಗೆ ಸಮಯದಲ್ಲಿ ತೀರಿ ಹೋದದ್ದರಿಂದ ಮಾದಲಾಂಬಿಕೆಯನ್ನು ಮಾದರಸ ವಿವಾಹವಾದರು."[5] ಇಲ್ಲಿ ಬರುವ ಚೆನ್ನಮ್ಮ ಹೆಸರು ನಿಜವಿರಬಹುದು, ಅಥವಾ ಭಿನ್ನವಿರಬಹುದು; ಆದರೆ ಮಾದಲಾಂಬಿಕೆಯು ಮಾದರಸನ ಎರಡನೆಯ ಹೆಂಡತಿಯೆಂಬ ಜನಜನಿತ ವದಂತಿಯು ಅರ್ಜುನವಾಡ ಶಿಲಾಶಾಸನದ ಸಂಗತಿಯನ್ನು ಪೋಷಿಸುತ್ತದೆ. ಬಸವಣ್ಣನ ತಂದೆಯ ಮೊದಲ ಹೆಂಡತಿಯ ಮಗ ದೇವರಾಜ ಎಂಬ ಸಂಗತಿಯ ಐತಿಹಾಸಿಕತೆ ಸದ್ಯಕ್ಕೆ ದೃಢವೆಂದೇ ನಂಬಬಹುದು.

## ಜನನ ಇಂಗುಳೇಶ್ವರದಲ್ಲಿ

ಬಸವಣ್ಣನ ತಾಯಿಯ ತೌರೂರು ಬಾಗೆವಾಡಿ ಸಮೀಪದ ಇಂಗುಳೇಶ್ವರ ಎಂದು ಹೇಳಲು ಪ್ರಬಲ ಸಾಕ್ಷ್ಯಾಧಾರಗಳಿವೆ : ಅವನ ಸೋದರ ಮಾವಂದಿರು, ಎಂದರೆ ತಾಯಿಯ ಸೋದರರಾದ ಬಲದೇವ, ಸಿದ್ಧರಸರು ಅದೇ ಊರಿನವರು. ಮಾದಲಾಂಬಿಕೆಯು ಬಾಗೆವಾಡಿಯ ಶಿವದೇವಾಲಯದ ನಂದಿಗೆ ವ್ರತ ತೊಟ್ಟುದು ಸ್ವಾಭಾವಿಕ; ಅವಳು ಇದ್ದುದು ಗಂಡನ ಊರು ಬಾಗೆವಾಡಿಯಲ್ಲಿ. ಅವಳ ಮೊದಲ ಹೆರಿಗೆ, ಎಂದರೆ ಬಸವಣ್ಣನ ಹೆರಿಗೆ ಆದುದು ಅವಳ ತೌರುಮನೆ ಇಂಗುಳೇಶ್ವರದಲ್ಲಿ. ಮೊದಲ ಹೆರಿಗೆ ತೌರುಮನೆಯಲ್ಲೇ ಆಗಬೇಕೆಂಬ ಪದ್ಧತಿ ಹಿಂದೆಯೂ ಇತ್ತು; ಇಂದಿಗೂ ಹಳ್ಳಿಗಾಡಿನಲ್ಲಿದೆ.[6] ಬಸವಣ್ಣ ಹುಟ್ಟಿದ್ದು ತಮ್ಮ ಊರಲ್ಲಿ ಎಂದು

---

5. ಕೆ.ಆರ್. ಮಂಗಳಾ : 'ವಿವಾದದ ಸುಳಿಯಲ್ಲಿ ಬಸವ ಜನ್ಮಸ್ಥಳ'; ಪ್ರಜಾವಾಣಿ (16.6.2002).

6. ಈಗ ಗಂಡನ ಊರಲ್ಲಿ ಹೆರಿಗೆ ಸೌಕರ್ಯ ಚೆನ್ನಾಗಿದ್ದರೆ ಅಲ್ಲಿ ಹೆರಿಗೆ ಆಗಿ, ಬಾಣಂತಿಯನ್ನು ಕೆಲದಿನಗಳ ಬಳಿಕ ತೌರಿನವರು ತಮ್ಮ ಊರಿಗೆ ಕೊಂಡೊಯ್ಯುತ್ತಾರೆ ಎಂಬುದು ಗಮನಿಸಬೇಕಾದ್ದು.

ಇಂಗುಳೇಶ್ವರ ಮತ್ತು ಬಾಗೆವಾಡಿ ಎರಡು ಊರಿನವರು ಹೇಳಿಕೊಂಡರೂ ಅದಕ್ಕೆ ವಿವರಣೆ ಸಾಧ್ಯವಿದೆ. ಡಾ. ಕೆ.ವಿ. ಪುಟ್ಟಪ್ಪನವರು ಹುಟ್ಟಿದ್ದು ಅವರ ತಾಯ ತವರುಮನೆ ಹಿರೇಕೊಡಿಗೆ ಗ್ರಾಮದಲ್ಲಾದರೂ ಇಂದಿಗೂ ಬಹುತೇಕ ಜನರ ಮನಸ್ಸಿನಲ್ಲಿ ಅವರ ತಂದೆ ಊರು ಕುಪ್ಪಳ್ಳಿಯೆ ಅವರ ಜನ್ಮಸ್ಥಳ ಎಂಬುದು ಉಳಿದು ಬಿಟ್ಟಿದೆ; ಎಲ್ಲೋ ಕೆಲವರಿಗೆ ಮಾತ್ರ ಅವರ ನಿಜವಾದ ಜನ್ಮಸ್ಥಳ ತಿಳಿದಿರುವುದು. ಇತಿಹಾಸ ಪ್ರಜ್ಞೆ ಜಾಗೃತವಾಗಿರುವ ಇಂದಿನ ಕಾಲದಲ್ಲೇ ಪರಿಸ್ಥಿತಿ ಹೀಗಿರುವಾಗ, ಪ್ರಾಚೀನ ಕಾಲದಲ್ಲಿ ಬಾಗೆವಾಡಿಯ ಬಸವ ತನ್ನ ತಂದೆಯ ಊರಲ್ಲೇ ಹುಟ್ಟಿದನೆಂಬ ಸಂಗತಿ ಜನಜನಿತವಾಗಿದ್ದರೆ ಆಶ್ಚರ್ಯವಿಲ್ಲ; ಆ ಜನಜನಿತ ಸಂಗತಿ ಮುಂದಿನ ವೀರಶೈವ ಕೃತಿಗಳನ್ನು ಪ್ರವೇಶಿಸಿದರೂ ಕೆಲವು ದಾಖಲೆಗಳಲ್ಲಿ ಅವನು ಇಂಗುಳೇಶ್ವರ ದಲ್ಲೇ ಜನಿಸಿದನೆಂಬ ಸಂಗತಿಯೂ ಬಂದಿದೆ. ಇಂಗುಳೇಶ್ವರದ ಕುಲಕರ್ಣಿಯವರ ಮನೆಯಲ್ಲಿ ದೊರೆತ ಹಿಂದಿನ ಕಾಲದ ವಂಶಾವಳಿಯೂ ಅದನ್ನು ಪೋಷಿಸುತ್ತದೆ. (ಅದು ಈಗಾಗಲೇ ಪ್ರಕಟವಾಗಿದೆ.) ಇಂಗುಳೇಶ್ವರದ ಅರವಿಂದ ಕುಲಕರ್ಣಿ ಹೇಳುವಂತೆ "ನಿಜಕ್ಕೂ ಬಸವಣ್ಣನವರು ಹುಟ್ಟಿದ್ದು ನಮ್ಮೂರಲ್ಲೇ, ಅದೂ ನಮ್ಮ ವಾಡೆಯೊಳಗೆ. ಇದು ಬಸವಣ್ಣನ ತಾಯಿಯ ತವರು."[7] ಈ ಬಗ್ಗೆ ಬಹುಮಟ್ಟಿಗೆ ಖಚಿತವಾಗಿ ಹೇಳಬಹುದು; ಅವರು ಹುಟ್ಟಿದ್ದು ಇಂಗುಳೇಶ್ವರದಲ್ಲಿ; ಬೆಳೆದದ್ದು, ಶಿಕ್ಷಣ ಪಡೆದದ್ದು ಬಾಗೆವಾಡಿಯಲ್ಲಿ.

## 'ಶೈವ'ದಿಂದ ವೀರಶೈವಕ್ಕೆ

ಶೈವಾಗಮಾಚಾರ್ಯ ಮಂಡಗೆಯ ವಾದಿರಾಜನ ಮಗ ಬಸವಣ್ಣ[8] ಬಲವಂತ ದಿಂದ ಯಜ್ಞೋಪವೀತವನ್ನು ಧರಿಸಿ ತನ್ನ ತಂದೆ ತಾಯಿಗಳ ನಿಧನದ ಬಳಿಕ ತಂಗಿ ನಾಗಲಾಂಬಿಕೆ ಸಮೇತ ಕೂಡಲಸಂಗಮಕ್ಕೆ ಬಂದಾಗ ಆ ಅನಾಥ ಮಕ್ಕಳಿಗೆ ಅಲ್ಲಿನ ಸಂಗಮೇಶ್ವರ ದೇವಾಲಯದ 'ಸ್ಥಾನಪತಿ' ಈಶಾನಗುರುಗಳು ಆಶ್ರಯ ನೀಡಿದರೂ ಅವನಿಗೆ ಅಲ್ಲಿ ಉಪದೇಶ ನೀಡಿ, ಕೂಡಲಸಂಗಮನೆಂಬ ಇಷ್ಟಲಿಂಗ ನೀಡಿದಾತ

---

7. ಹಿಂದೆ ಹೇಳಿದ 'ಪ್ರಜಾವಾಣಿ' ಲೇಖನ. ಅರವಿಂದ ಕುಲಕರ್ಣಿ ನನಗೆ ವಂಶಾವಳಿ ನೀಡಿದ್ದಾರೆ.

8. "ಶೈವಾಗಮಾಚಾರ್ಯ ಮಂಡಗೆಯ ಮಾದಿರಾಜನ ಸತಿ ಮಾದಾಂಬಿಕೆಯ ಗರ್ಭದಿಂದವ ತರಿಸಿ ಬಸವಣ್ಣನೆಂಬ ನಾಮಕರಣವಂ ಧರಿಸಿ... ಮರ್ತ್ಯಕ್ಕೆ ಪ್ರತಿ ಕೈಲಾಸವೆಂಬ ಕಲ್ಯಾಣಮಂ ಮಾಡಿ... ಕಪ್ಪಡಿಯ ಸಂಗಯ್ಯ ದೇವರ ಸ್ವಹಸ್ತದಿಂದಲುಪದೇಶಮಂ ಪಡೆದು... ಶಿವಭಕ್ತ ಶಿರೋಮಣಿಯೆಂಬ ಚೆನ್ನಬಸವಣ್ಣನವತರಿಸಿ ಶೈವಮಾರ್ಗಮಂ ಬಿಡಿಸಿ, ಪ್ರಾಣ ಲಿಂಗ ಸಂಬಂಧಮಂ ತೋರಿಸಿ... ಷಡುಸ್ಥಲಮಂ ಸರ್ವಾಂಗದೊಳು ಪ್ರತಿಷ್ಠಿಸಿ ತೋರಿ ಸಲಹಿದ..." (–ಮಡಿವಾಳ ಮಾಚಿದೇವ. VIII. ಪು. 218. ಕರ್ನಾಟಕ ಸರ್ಕಾರದ ಆವೃತ್ತಿ. 1993)

ಕಪ್ಪಡಿ ಸಂಗಯ್ಯ ಎಂಬ 'ಶೈವ' ಗುರು. ಸಮಕಾಲೀನ ಮೋಳಿಗೆ ಮಾರಯ್ಯನ ಮಾತು ಇದನ್ನು ದೃಢಪಡಿಸುತ್ತದೆ.[9]

ಮಾದಿರಾಜ ಮತ್ತು ಕಪ್ಪಡಿ ಸಂಗಯ್ಯರ 'ಶೈವ'ವು ಶುದ್ಧ ಶೈವ ಧರ್ಮವನ್ನು ಹೇಳುತ್ತದೆ. ಶುದ್ಧಶೈವವು ಶಿವಾರಾಧನೆಯನ್ನು ಹೇಳುವುದಲ್ಲದೆ ಗುರುದತ್ತ ಇಷ್ಟಲಿಂಗ ವನ್ನೂ ದೇವಾಲಯ ಶಿವಲಿಂಗವನ್ನೂ ಆರಾಧಿಸಲು ಅವಕಾಶ ಮಾಡಿಕೊಡುತ್ತದೆ. ಇಷ್ಟಲಿಂಗವನ್ನು ಕರಸ್ಥಲದಲ್ಲಿಟ್ಟು ಅಥವಾ ವೇದಿಕೆಯ ಮೇಲಿಟ್ಟೂ ಪೂಜಿಸಲು ಅವಕಾಶಮಾಡಿಕೊಡುತ್ತದೆ. ಮತ್ತು ಕೆಲವು ನಿರ್ದಿಷ್ಟ ಪೂಜಾವಿಧಾನಗಳನ್ನು ವಿಧಿಸು ತ್ತದೆ. ಅವುಗಳಲ್ಲಿ ಎರಡನ್ನು ಮಾತ್ರ ಚನ್ನಬಸವಣ್ಣ ವಿಶೇಷವಾಗಿ ಹೇಳುತ್ತಾನೆ : ಅಂಗನ್ಯಾಸ ಮತ್ತು ಪಂಚಶುದ್ಧಿ.[10] ಪೂಜಾಸಮಯದಲ್ಲಿ ದೇಹದ ಬೇರೆ ಬೇರೆ ಭಾಗ ಗಳನ್ನು ಮಂತ್ರವಾಚನ ಸಮೇತ ಮುಟ್ಟುವುದು 'ಅಂಗನ್ಯಾಸ'; ಹಾಲು, ಮೊಸರು, ಬೆಣ್ಣೆ (ತುಪ್ಪ), ಜೇನುತುಪ್ಪ, ಸಕ್ಕರೆ ಇವನ್ನು, 'ಪಂಚಾಮೃತ'ಗಳನ್ನು ದೈವೀಮೂರ್ತಿಗೆ ಎರೆಯುವುದೇ 'ಪಂಚಶುದ್ಧಿ.' ಬಸವಣ್ಣ ಮೊದಲು ತಮ್ಮ ಇಷ್ಟಲಿಂಗಕ್ಕೆ ಪೂಜೆಯನ್ನು 'ಶೈವಕರ್ಮ'ಗಳಿಗೆ ಅನುಸಾರವಾಗಿ ಮಾಡುತ್ತಿದ್ದನು.

ಅವನು ಕೂಡಲಸಂಗಮದಿಂದ ಮಂಗಳವೇಡೆಗೆ ಹೋಗಿ ಬಿಜ್ಜಳನ ಭಂಡಾರಿ ಯಾಗಿದ್ದಾಗ ಆ ಪೂಜಾವಿಧಾನ ಮುಂದುವರಿಯಿತು. ಬಹುಶಃ ಅಲ್ಲೇ ಅವನಿಗೆ ಚನ್ನಬಸವಣ್ಣನಿಂದಾಗಿ ವೀರಶೈವದ ಪರಿಚಯವಾಯಿತು ಅಥವಾ ವೀರಶೈವದಲ್ಲಿ ಆಸಕ್ತಿ ಮೂಡಿತು. ತನ್ನ ಕರಸ್ಥಲದ ಸಂಗಮನಾಥನಿಗೆ ಸಲ್ಲಿಸುತ್ತಿದ್ದ 'ಶೈವಕರ್ಮ' ರೀತಿಯ ಪೂಜಾ ವಿಧಾನವನ್ನು ತ್ಯಜಿಸಿ 'ವೀರಶೈವ'ದ ರೀತಿಯಲ್ಲಿ ಅರ್ಚಿಸುವುದನ್ನು ಕಲಿತೆ ಎಂದು ಒಂದೆಡೆ ತಾನೇ ಹೇಳಿಕೊಂಡಿದ್ದಾನೆ. ಬಸವನಂತೆ ಹಲವು ಶರಣರೂ ಶೈವಕರ್ಮವನ್ನು ತ್ಯಜಿಸಿ, ವೀರಶೈವ ಪಂಥದ ಆಚರಣೆ ಒಪ್ಪಿಕೊಂಡರು. ಆ ವಚನದ ಪೂರ್ಣಪಾಠ ಇಂತಿದೆ (I. ಪು. 299) :

> ಎನ್ನ ಬಂದ ಭವಂಗಳನು ಪರಿಹರಿಸಿ, ಎನಗೆ ಭಕ್ತಿಘನವನೆತ್ತಿ ತೋರಿ,
> ಎನ್ನ ಹೊಂದಿದ ಶೈವಮಾರ್ಗಂಗಳನತಿಗಳೆದು,

---

9. "...ಸಂಗನ ಬಸವಣ್ಣಂಗೆ ಶೈವ ಸಂಗಮೇಶ್ವರನೇ ಗುರುವಾದ. ಪ್ರಾಣಲಿಂಗವೆಂದು ಇನ್ನಾರಿಗೆ ಹೇಳುವೆ..." (–ಮೋಳಿಗೆ ಮಾರಯ್ಯ. VIII. ಪು. 705).

10. "ಅಂಗದ ಮೇಲೆ ಲಿಂಗ ಸಾಹಿತ್ಯವುನ್ನುಳ್ಳ ನಿಜವೀರಶೈವ ಸಂಪನ್ನರು ತಮ್ಮ ಸ್ವಯಾಂಗಲಿಂಗವನರ್ಚಿಸುವಲ್ಲಿ ಭವಿ ಶೈವ ಭಿನ್ನ ಕರ್ಮಿಗಳಂತೆ ಅಂಗನ್ಯಾಸ ಪಂಚ(ಮ) ಶುದ್ಧಿ ಮೊದಲಾದ ಅಶುದ್ಧಭಾವವಪ್ಪ ಕ್ಷುದ್ರಕರ್ಮಂಗಳ ಹೊದ್ದಲಾಗದು... ಸುಖಮುಖಾರ್ಪಿತಕ್ಕೆ ಸಲ್ಲುವ ಸುರಸ ದ್ರವ್ಯಂಗಳಪ್ಪ ಪಂಚಾಮೃತಂಗಳ ನಿರ್ಮಲನಪ್ಪ ನಿಜಲಿಂಗದ ಮಸ್ತಕಕ್ಕೆರೆದು ಜಿಡ್ಡು ಮಾಡಿ ತೊಳೆವ ಅಜ್ಞಾನಿ ನರಕ ಜೀವಿಗಳ ಮುಖವ ನೋಡಲಾಗದು (III. ಪು. 262)"

ನಿಜ ವೀರಶೈವಾಚಾರವನರುಹಿ ತೋರಿ,
ಎಲ್ಲ ಕರಸ್ಥಲದ ಸಂಗಮನಾಥನಲ್ಲಿ ಮಾಡುವ
ಜನ ಧ್ಯಾನ ಅರ್ಚನೆ ಉಪಚರಿಯ ಅರ್ಪಿತ ಪ್ರಸಾದ ಭೋಗಂಗಳಲ್ಲಿ ಸಂದಿಸಿದ
ಶೈವಕರ್ಮವ ಕಳೆದು
ಭವ ಮಾಲೆಯ ಹರಿದು, ಭಕ್ತಿಮಾಲೆಯನಿತ್ತು
ಭವ ಜ್ಞಾನವ ಕೆಡೆಮೆಟ್ಟಿ, ಭಕ್ತಿಜ್ಞಾನವ ಗಟ್ಟಿಗೊಳಿಸಿ
ಭವ ಮಾಟ ಕೂಟವ ಬಿಡಿಸಿ, ಭಕ್ತಿ ಮಾಟಕೂಟವ ಹಿಡಿಸಿ,
ಭವ ಶೇಷವನುತ್ತರಿಸಿ, ಭಕ್ತಿಶೇಷವನಿತ್ತು,
ಎನಗೆ, ನಿನ್ನ ಬಳಿವಿಡಿದು ಬಂದ ಶರಣಗಣಂಗಳೆಲ್ಲರಿಗೆ
ಶಿವ ಸದಾಚಾರದ ಘನವನರುಹಿ ತೋರಿ,
ಮರ್ತ್ಯ ಲೋಕದಲ್ಲಿ ಸತ್ಯಸದಾಚಾರವನು ಹರಿಸಿ, ಶಿವಭಕ್ತಿಯನುದ್ಧರಿಸಿ
ಕೂಡಲಸಂಗಮದೇವರಲ್ಲಿ ಚೆನ್ನಬಸವಣ್ಣ ಎನ್ನನಾಗುಮಾಡಿ ಉಳುಹಿದನಾಗಿ
ಇನ್ನೆನಗೆ ಭವವಿಲ್ಲದೆ, ಬಂಧನವಿಲ್ಲದೆ, ಭಕ್ತಿ ಮಾಟ ಕೂಟದ ಗೊತ್ತಿನಲ್ಲಿರ್ದು
ನಾನು ಚೆನ್ನಬಸವಣ್ಣನ ಶ್ರೀಪಾದಕ್ಕೆ
ನಮೋ ನಮೋ ಎಂದು ಬದುಕುವೆನು.

ಬಸವನಿಗೆ ಆಸಕ್ತಿ ಮೂಡಿದ ವೀರಶೈವದ ಪ್ರಮುಖ ಲಕ್ಷಣ ಭಕ್ತನ ನಿಷ್ಠೆ; ಅದು ಅವನ ಕರಸ್ಥಲದ ಇಷ್ಟಲಿಂಗಕ್ಕೇ ಹೊರತು ದೇವಾಲಯದ ಶಿವನ ಲಿಂಗಕ್ಕೆ ಅಲ್ಲ. ದೇವಾಲಯವೆಂದರೆ ವೈಭವ ಆಡಂಬರದ ಪೂಜೆ; ಅಲ್ಲಿ ಅರ್ಚಕನ ಮಧ್ಯ–ವರ್ತಿತನ ಉಂಟು ಮತ್ತು ಕೆಳವರ್ಗದವರಿಗೆ ಪ್ರವೇಶವಿಲ್ಲ. ವೀರಶೈವದ ಇಷ್ಟಲಿಂಗ ಪೂಜೆಯಲ್ಲಿ ಎಲ್ಲವೂ ಸರಳ, ಸಾಮಾನ್ಯರಿಗೆ ಬಡವರಿಗೆ ಹೊಂದುವಂತಹುದು; ಮತ್ತು ಇಲ್ಲಿ ಅಂಗನ್ಯಾಸದಂತಹ ಶಾಸ್ತ್ರೋಕ್ತ ಆಚರಣೆ ಇಲ್ಲ, ದುಬಾರಿ ಪಂಚಾಮೃತದ ಬಳಕೆಯೂ ಇಲ್ಲ, ಮತ್ತು ಆ ಅಮೂಲ್ಯ ಆಹಾರ ಪದಾರ್ಥದ ಅಪವ್ಯಯವೂ ಇಲ್ಲ. ಬಹುಮುಖ್ಯವೆಂದರೆ ವೀರಶೈವಧರ್ಮವು ಒತ್ತುಕೊಟ್ಟಿದ್ದ 'ಸದಾಚಾರ' – ಚೆನ್ನ ಬಸವಣ್ಣನ ಅಭಿಪ್ರಾಯದಂತೆ, 'ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಕೊಡುವುದು ಕೊಂಬುದು ಸದಾಚಾರ' (III. ಪು. 350) – ಹುಟ್ಟಿನಿಂದ ಯಾವುದೇ ಜಾತಿಯಿರಲಿ, ಒಮ್ಮೆ ವೀರಶೈವರಾದ ಮೇಲೆ ಎಲ್ಲರೂ ಸಮಾನರು ಮತ್ತು ಬ್ರಾಹ್ಮಣರಾಗಿರಲಿ ದಲಿತರಾಗಿರಲಿ ಜಾತಿಯನ್ನು ಪರಿಗಣಿಸದೆ ಸಂಬಂಧ ಬೆಳೆಸುವುದೇ 'ಸದಾಚಾರ.' ವೀರಶೈವಕ್ಕೆ ಬಸವಣ್ಣ ಆಕರ್ಷಿತನಾಗಲು ಕಾರಣಗಳು ಸ್ಪಷ್ಟವಾಗಿವೆ. ಚೆನ್ನಬಸವನಿಂದ ಬಸವಣ್ಣ ವೀರಶೈವನಾದನೆಂಬ ಸಂಗತಿಯು ಮಡಿವಾಳ ಮಾಚಿದೇವನ ಮಾತಿನಿಂದಲೂ (VIII. ಪು. 218) ಪುಷ್ಟಗೊಳ್ಳುವುದನ್ನು ಹಿಂದೆಯೇ ನೋಡಿದ್ದೇವೆ (ಟಿಪ್ಪಣಿ 8 ನೋಡಿ). ವೀರಶೈವ ಧರ್ಮವು ಬಸವಪೂರ್ವ ಯುಗದ್ದು ಎಂಬುದನ್ನು ಈಗಾಗಲೇ ಹಲವೆಡೆ ಸಾಧಾರವಾಗಿ ಸ್ಪಷ್ಟಪಡಿಸಿದ್ದೇನೆ. "ಆಧುನಿಕ ಪರಿಭಾಷೆಯಲ್ಲಿ

ಹೇಳುವುದಾದರೆ, ಬಸವಣ್ಣ ಶುದ್ಧ ವಿಜ್ಞಾನದಂತಿದ್ದ (Pure Science) ವೀರಶೈವವನ್ನು ಆನ್ವಯಿಕ ವಿಜ್ಞಾನವಾಗಿ (Applied Science) ಪರಿವರ್ತನೆಗೊಳಿಸಿ, ಅದನ್ನು ಒಬ್ಬ ತಂತ್ರಜ್ಞನಂತೆ (Technocrat) ಬದುಕಿಗೆ ಹತ್ತಿರವಾಗಿಸಿದ, ಮಾನವ ಜೀವನವು ಹಸನಾಗುವುದಕ್ಕೆ ಬಳಸಿದರು."[11] ಈ ಬಗ್ಗೆ ಯಾರಿಗೂ ಸಂದೇಹ ಬೇಡ.

## ವಿವಾಹ

ಬಸವಣ್ಣ ಬಾಗೇವಾಡಿಯಿಂದ ಆ ಕಾಲಕ್ಕೆ ಬಹುದೂರ ಎನ್ನಬಹುದಾದ ಮಂಗಳಿವೇಡೆಗೆ ಹೋಗಲು ಕಾರಣ ಅಲ್ಲಿ ಬಿಜ್ಜಳನ ಬಳಿ ಅಧಿಕಾರಿಗಳಾಗಿದ್ದ ಅವನ ಸೋದರ ಮಾವಂದಿರು, ಬಲದೇವ ಮತ್ತು ಸಿದ್ಧರಸ. ಅವನಿಗೆ ಬಿಜ್ಜಳನ ಭಂಡಾರ ದಲ್ಲಿ ಉದ್ಯೋಗ ದೊರಕಲು ಅವನ ಕುಶಾಗ್ರಮತಿಯೆಂತೋ ಅವನ ಸೋದರ ಮಾವಂದಿರೂ ಸ್ವಲ್ಪ ಕಾರಣ. ಬಿಜ್ಜಳನ ತಮ್ಮ ಕರ್ಣದೇವ ಎಳೆಯ ಮಗುವಾಗಿದ್ದಾಗ ಅವನ ತಾಯಿ ಸತ್ತುಹೋದುದರಿಂದ ಆ ಮಗುವಿಗೆ ಸಿದ್ಧರಸನ ಹೆಂಡತಿ ತನ್ನ ಹಸುಗೂಸು ನೀಲಲೋಚನೆ ಜೊತೆ ಹಾಲೂಡಿ ಬೆಳೆಸಿದಳು; ಆ ಕಾರಣ, ಬಿಜ್ಜಳನಿಗೆ ಸಿದ್ಧರಸನ ಬಗ್ಗೆ ಕೃತಜ್ಞತೆ, ನೀಲಲೋಚನೆ ಬಗ್ಗೆ ಒಂದು ರೀತಿ ತನ್ನ ತಂಗಿ ಎಂಬ ಭಾವನೆಯೂ ಇದ್ದಿತು. ಬಸವನ ಪತ್ನಿಯರಲ್ಲಿ ಗಂಗಾಂಬಿಕೆಯು ಬಲದೇವನ, ನೀಲಲೋಚನೆಯು (ಮಾಯಿದೇವಿ) ಸಿದ್ಧರಸನ ಮಗಳು ಎಂದು ಊಹಿಸಲು ಆಧಾರಗಳಿವೆ. ಅಣ್ಣ ತಮ್ಮಂದಿರ ಹೆಣ್ಣುಮಕ್ಕಳಾದ ಅವರು ಅವಿಭಕ್ತ ಕುಟುಂಬದಲ್ಲಿ ಅಕ್ಕ ತಂಗಿಯರಂತೆ ಬೆಳೆದುದು, ಅವರಿಬ್ಬರೂ ಬೇರೆ ಬೇರೆಯವರನ್ನು ಮದುವೆ ಯಾಗಿ ಪರಸ್ಪರ ಅಗಲಿರಲು ಬಯಸದಿದ್ದುದೂ ಅವರಿಬ್ಬರನ್ನೂ ಒಟ್ಟಿಗೆ ಒಂದೇ ಹಸೆಯಲ್ಲಿ ಬಸವಣ್ಣನಿಗೆ ಮದುವೆ ಮಾಡಿಕೊಡಲು ಕಾರಣವಿರುವಂತಿದೆ. ಇವರಲ್ಲಿ ನೀಲಲೋಚನೆಗೆ (ಬಾಲ) ಸಂಗಯ್ಯ ಎಂಬ ಮಗುವಾಗಿ ಅದು ಚಿಕ್ಕ ವಯಸ್ಸಿನಲ್ಲೇ ಕಣ್ಣು ಮುಚ್ಚಿತೆಂದೂ ಹೇಳಲು ಆಧಾರಗಳಿವೆ. ಆ ಇಬ್ಬರು ಸೋದರಿಯರೂ ಅಕ್ಕನಾಗಮ್ಮ ಮತ್ತು ಅವಳ ಗಂಡ ಶಿವದೇವನ ಜೊತೆ ಸೇರಿ, ಗೌರಾಯಿ (ಗೌರವ್ವೆ) ಎಂಬ ನಿಷ್ಠಾವಂತ ಸೇವಕಿಯ ಜೊತೆ ಬಸವಣ್ಣನವರ 'ಮಹಾಮನೆ'ಯ ಎಲ್ಲ ಒಳ ವ್ಯವಹಾರಗಳನ್ನು ಒಳ್ಳೆ ಗೃಹಿಣಿಯರಾಗಿ ನೋಡಿಕೊಂಡರು. ಬಸವಣ್ಣನ ಬದುಕಿನ ಯಶಸ್ಸಿನಲ್ಲಿ ಅವರು ವಹಿಸಿದ ಪಾತ್ರ ಖಂಡಿತ ನಗಣ್ಯವಾದುದಲ್ಲ. ಅವರು ಆದರ್ಶ ಪತ್ನಿಯರಾಗಿ ಗೃಹಿಣಿಯರಾಗಿ ಬದುಕಿದರೂ ಬಸವಣ್ಣನ ಕೇವಲ ನೆರಳಾಗಿ ಬದುಕ ಲಿಲ್ಲ; ಸ್ವತಂತ್ರ ವ್ಯಕ್ತಿತ್ವವನ್ನು ಬೆಳೆಸಿಕೊಂಡಿದ್ದ ಅವರು ವಚನಗಳನ್ನೂ ಬರೆದರು.

ಈ ಕಿರುಲೇಖನ ಬಸವನ ಬದುಕಿನ ಪೂರ್ವಾರ್ಧದ ಸಮಗ್ರ ಚಿತ್ರವಲ್ಲ; ಕೆಲವು ಹೊಸ ಹೊಳಹುಗಳ ರೇಖಾಚಿತ್ರ ಮಾತ್ರ.

---

11. ಎಂ. ಚಿದಾನಂದಮೂರ್ತಿ : ವೀರಶೈವ ಧರ್ಮ – ಭಾರತೀಯ ಸಂಸ್ಕೃತಿ (ಹಿಂದೂ, ಲಿಂಗಾಯತ); ಪು. 68.

## ಅನುಬಂಧ

ಬಸವಣ್ಣ 'ಶೈವ'ನಾಗಿದ್ದವನು 'ವೀರಶೈವ'ನಾದ ಎಂಬ ಕಾರಣದಿಂದ ಅರ್ಜುನವಾಡದ ಅವನ ಮಲಸೋದರ ದೇವರಾಜನೂ ವೀರಶೈವನಾಗಿರಲಾರ; ಆದರೆ ಅವನು ಬ್ರಾಹ್ಮಣನಾಗಿದ್ದೂ ವೀರಶೈವಾಭಿಮಾನಿಯಾಗಿರಬೇಕು. ಅರ್ಜುನ ವಾಡದ ದೇವರಾಜನ ವಂಶಸ್ಥರು ಈಗಲೂ ಇದ್ದಾರೆ – ಅವರು ಹಿಂದಿನಂತೆಯೇ ಶೈವ ಸ್ಮಾರ್ತ ಬ್ರಾಹ್ಮಣರು ಮತ್ತು ಈಗಿನ ಬಸವಣ್ಣನ ತಂದೆ ತಾಯಿ ಬ್ರಾಹ್ಮಣ ವಂಶಸ್ಥರಂತೆ ಕುಲಕರ್ಣಿಗಳೂ ಆಗಿದ್ದಾರೆಂಬುದನ್ನು ಬಾಗೆವಾಡಿ, ಇಂಗುಳೇಶ್ವರ, ಅರ್ಜುನವಾಡಗಳಿಗೇ ಹೋಗಿ ಮಾತನಾಡಿ ಖಚಿತಪಡಿಸಿಕೊಂಡಿದ್ದೇನೆ.



# 11

## ಆಧ್ಯಾತ್ಮಿಕ ಸಾಧಕ : ಬಸವಣ್ಣ

ಬಯಲ ರೂಪ ಮಾಡಬಲ್ಲಾತನೆ ಶರಣನು,
ಆ ರೂಪ ಬಯಲ ಮಾಡಬಲ್ಲಾತನೆ ಲಿಂಗಾನುಭಾವಿ.
ಬಯಲ ರೂಪ ಮಾಡಲರಿಯದಿದ್ದಡೆ ಎಂತು ಶರಣನೆಂಬೆ?
ಆ ರೂಪ ಬಯಲು ಮಾಡಲರಿಯದಿದ್ದಡೆ ಎಂದು ಲಿಂಗಾನುಭಾವಿಯೆಂಬೆ?
ಈ ಉಭಯ ಒಂದಾದಡೆ ನಿಮ್ಮಲ್ಲಿ ತೆರಹುಂಟೆ
ಕೂಡಲಸಂಗಮದೇವಾ ॥

ಬಸವಣ್ಣನವರ ಮೇಲಿನ ವಚನವು ಬಹು ಅರ್ಥಗರ್ಭಿತ ಮಾತ್ರವಲ್ಲ, ಒಂದು ರೀತಿಯಲ್ಲಿ ವೀರಶೈವ ಸಿದ್ಧಾಂತವು ಒಬ್ಬ ಆಧ್ಯಾತ್ಮಿಕ ಸಾಧಕನ ಬಗ್ಗೆ ತಾಳಿರುವ ನಿಲುವನ್ನು ಪರೋಕ್ಷವಾಗಿ ದಾಖಲಿಸುತ್ತದೆ. ವಿಶ್ವದ ಹಿಂದಿನ ಪರಮ ಚೈತನ್ಯ ಸ್ವರೂಪಿಯಾದ ಈಶ್ವರೀ ಶಕ್ತಿಯು ಸರ್ವಶಕ್ತ, ಅಗೋಚರ, ನಿರಾಕಾರ, ಸರ್ವಮಯ, ಸರ್ವಜ್ಞ; ಆ ಚೈತನ್ಯವನ್ನು ಸಾಮಾನ್ಯರು ಗ್ರಹಿಸಲಾರರು – ಅವರಿಗೆ ಒಂದು ನಿರ್ದಿಷ್ಟ ರೂಪ, ಹೆಸರು ಇರುವ ಭೌತಿಕವಸ್ತುವು ಅಗತ್ಯ; ಆ ಪೂಜಾರ್ಹ ರೂಪವು ಸಾಧಕರಿಗೆ ಸಾಧನ ಮಾಡಲು ಒಂದು ದಾರಿ ದೀವಿಗೆಯಾಗುತ್ತದೆ, ಭಗವಂತನೆಡೆಗೆ ಭಗವತ್ ಸ್ವರೂಪದ ಕಡೆಗೆ ಸಾಗಲು ಒಂದು ದಾರಿ ನಾಮಫಲಕವಾಗುತ್ತದೆ. ಅದೇ ವೀರಶೈವರಿಗೆ ಒಂದು ನಿರ್ದಿಷ್ಟ ರೂಪದ ಶಿವಲಿಂಗ. (ವೈಷ್ಣವರಿಗೆ ಸಾಲಿಗ್ರಾಮ ಆಗಬಹುದು; ಶೈವ ವೈಷ್ಣವರಿಗೆ ಶಿವ, ವಿಷ್ಣು ಮೂರ್ತಿ ರೂಪದ ವಿಗ್ರಹಗಳೇ ಆಗಬಹುದು.) 'ಶರಣ'ನಿಗೆ ಎಂದರೆ ಭಗವಂತನಲ್ಲಿ ಸಂಪೂರ್ಣವಾಗಿ ಅರ್ಪಿಸಿಕೊಂಡ ಭಕ್ತನಿಗೆ ಅದು, ಎಂದರೆ ಆ ಶಿವಲಿಂಗ ತಾನೇ ಗುರಿಯಲ್ಲ; ಗುರಿ ತಲುಪಲು ಮಾರ್ಗ. 'ಬಯಲು' ಒಂದು 'ರೂಪ'ವನ್ನು ಪಡೆದುಕೊಂಡದ್ದೇ ಶಿವಲಿಂಗ. ಶರಣನು ಆ ಶಿವಲಿಂಗವನ್ನು ಜಲ, ಪುಷ್ಪ, ವಿಭೂತಿಗಳಿಂದ ಪೂಜಿಸುತ್ತ, ಏಕಾಗ್ರಚಿತ್ತತೆಯನ್ನು ಸಾಧಿಸುತ್ತ ಬಹಿರ್ಮುಖಿಯಾಗಿದ್ದವನು ಕ್ರಮೇಣ ಅಂತರ್ಮುಖಿ

ಆಗುತ್ತಾನೆ. ಅವನು ಪೂಜಿಸುತ್ತಿದ್ದ ಶಿವಲಿಂಗವು ಕ್ರಮೇಣ ಅವನ ಮನಸ್ಸಿಗೆ ಸಮೀಪವಾಗುತ್ತ ತನ್ನ ಬಹಿರಂಗ ಆಕಾರವನ್ನು ಕಳೆದುಕೊಳ್ಳುತ್ತ ಅದು ಯಾವುದರ ಸಂಕೇತವೋ ಆ ಅಮೂರ್ತ ಚೈತನ್ಯ ಶಕ್ತಿ ಆಗಿ, ಆ ಚೈತನ್ಯ ಶಕ್ತಿಯು ನಾನೇ, ನಾನೇ ಆ ಪರಾತ್ಪರ ಚೈತನ್ಯ ಎಂಬ ಅರಿವು ಉಂಟಾಗುತ್ತದೆ. ಅದೇ ಆ ಸಾಧನೆಯ ಗುರಿ. ಶರಣನ ಸಾಧನೆಯ ಮೊದಲ ಹಂತದಲ್ಲಿ ಬಯಲು ಒಂದು 'ರೂಪ' ಆದದ್ದು, 'ಲಿಂಗಾನುಭಾವಿ' ಹಂತದಲ್ಲಿ ಆ ರೂಪವು 'ಬಯಲು' ಆಗುತ್ತದೆ. ಆ ಬಯಲೇ ಸಂಸ್ಕೃತದ 'ಶೂನ್ಯ.' ಶೂನ್ಯಸಂಪಾದನೆಯೇ ಷಟ್ಸ್ಥಲ ಸಾಧನೆ ಅಥವಾ ಎಲ್ಲ ಆಧ್ಯಾತ್ಮಿಕ ಸಾಧಕರ ಪರಮೋಚ್ಚ ಧ್ಯೇಯ. ವಚನಗಳ ಹದಿನೈದನೆ ಶತಮಾನದ ಒಂದು ಸಂಕಲನದ ಹೆಸರೇ 'ಶೂನ್ಯಸಂಪಾದನೆ' (ಮೂಲಕೃತಿ ಸೇರಿದಂತೆ ಆ ಹೆಸರಿನ ಕೃತಿಯ ನಾಲ್ಕು ಆವೃತ್ತಿಗಳಿವೆ).

ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಇವು ಮೇಲೆ ಹೇಳಿದ ಆರು ಸ್ಥಲಗಳು : 'ಭಕ್ತ'ನಾಗಿ ಆರಂಭಗೊಂಡು ತಾನು ಭಗವಂತನ ಭಕ್ತನೆಂಬ ದ್ವೈತ ಸ್ಥಿತಿಯ ಸಾಧನೆಯಿಂದ ತಾನೇ ಆ ಚಿದಾಕಾರ ಪರಬ್ರಹ್ಮ ವಸ್ತು, "ಶಿವೋऽಹಂ" (ನಾನೇ ಶಿವ) ಸ್ಥಿತಿಗೆ ಏರುವುದು ಅಂತಿಮವಾದ 'ಐಕ್ಯ' ಕಾಲ. 'ಲಿಂಗಾನುಭಾವಿ' ಎಂಬ ಸಮಾಸ ಪದದ ಉತ್ತರಾರ್ಧ 'ಅನುಭಾವ' ಪದವು ಇಂಗ್ಲಿಷಿನ Mysticism ಪದಕ್ಕೆ ಸಂವಾದಿಯಾದುದು. 'ದಾಸೋಹಂ' ಅನುಭವ 'ಶಿವೋಹಂ' ಆಗಿ ವಿಕಾಸಹೊಂದುವುದೇ 'ಅನುಭಾವ.'

ಮಂಜುಗಡ್ಡೆ, ನೀರು, ಆವಿ ಇವುಗಳಲ್ಲಿ ಜಲದ ನಿಜರೂಪ ಯಾವುದು? ಮೂರೂ ಜಲಗಳೇ. ಮಂಜುಗಡ್ಡೆಗೆ ಒಂದು ನಿರ್ದಿಷ್ಟ ಆಕಾರವುಂಟು. ಆ ಆಕಾರವು ನೀರಿನಲ್ಲಿ ಶಿಥಿಲಗೊಳ್ಳುತ್ತದೆ; ಆವಿಯಲ್ಲಿ ಆಕಾರವು ಸಂಪೂರ್ಣವಾಗಿ ಅಗೋಚರ ವಾಗುತ್ತದೆ. ಭಕ್ತಸ್ಥಲದಿಂದ ಐಕ್ಯಸ್ಥಲಕ್ಕೆ ಕ್ರಮಿಸುವ ಪಥವು ಸ್ಥೂಲವಾಗಿ ಮಂಜುಗಡ್ಡೆ, ನೀರು, ಆವಿ ಈ ಆವಿಷ್ಕಾರವನ್ನು ಹೋಲುತ್ತದೆ.

ಬಸವಣ್ಣನವರು ತಮ್ಮ ನಿರಂತರ ಸಾಧನೆಯಿಂದ 'ಭಕ್ತ' ಸ್ಥಿತಿಯಿಂದ 'ಐಕ್ಯ' ಸ್ಥಿತಿಗೆ ಏರಿದವರು. ಅವರ ರಚನೆಗಳಲ್ಲಿ ಭಕ್ತನಾಗಿದ್ದ ಅವರು ಕ್ರಮಕ್ರಮೇಣ ವಿಕಾಸ ಹೊಂದುತ್ತ ಬಂದುದರ ಒಂದು ಸ್ಥೂಲ ಚಿತ್ರ ದೊರಕುತ್ತದೆ. ಮೊದಲು ಲಿಂಗಧಾರಣೆ ಮಾಡುವ, ಮತ್ತು ಶಾಸ್ತ್ರೋಕ್ತ ಕರ್ಮ ವಿಧಿವಿಧಾನಗಳಿಂದ ಇಷ್ಟಲಿಂಗ ಪೂಜೆ ಮಾಡುವ ಶೈವಧರ್ಮದ ಜಟಿಲತೆಯಿಂದ ಸರಳ ಭಕ್ತಿ ಶ್ರದ್ಧೆಗಳ ವೀರಶೈವದ ಮಾರ್ಗಕ್ಕೆ ಬಂದುದಾಗಿ ಅವರೇ ಹೇಳಿಕೊಂಡಿದ್ದಾರೆ. ವೀರಶೈವದ ಭಕ್ತಿಯು ಮುಗ್ಧ ಶ್ರದ್ಧಾ ಮೂಲವಾದುದು. ಅವರು ತಮ್ಮ ಸಾಧನೆಯ ಆರಂಭದಲ್ಲಿ ಹೇಗೆ ಮನಸ್ಸು ಲಿಂಗದಲ್ಲೇ ಮಗ್ನವಾಗದೆ ಮತ್ತೆ ಮತ್ತೆ ಲೌಕಿಕ ವಿಷಯಗಳತ್ತ, ಇಂದ್ರಿಯ ಸುಖಗಳತ್ತ ಧಾವಿಸುತ್ತ ತಮ್ಮ ಸಾಧನೆಗೆ ಅಡಿಯಾಗುತ್ತಿತ್ತು ಎಂಬುದನ್ನು ಬಹು ನೋವಿನಿಂದ

ಹಲವು ಕಡೆ ಹೇಳಿಕೊಂಡಿದ್ದಾರೆ. "ನಾನೊಂದ ನೆನೆದಡೆ ತಾನೊಂದ ನೆನೆವುದು" ಇಂತಹ ವಚನಗಳು ಅವರ ಮಾನಸಿಕ ತುಮುಲಾಟಕ್ಕೆ ಸಾಕ್ಷಿ. ಶಿವಸಂಕೇತವಾದ ಲಿಂಗದಲ್ಲಿ ನಿಷ್ಠೆಯನ್ನು ದೃಢಪಡಿಸಿಕೊಂಡು, ಶಿವನೊಬ್ಬನೇ ದೈವ, ಶಿವಭಕ್ತರೇ ಶ್ರೇಷ್ಠ ಎಂಬ ತೀವ್ರ ನಿಷ್ಠೆಯನ್ನು, ಒಂದು ರೀತಿಯಲ್ಲಿ ಚಲದ ಭಕ್ತಿಯನ್ನು ಬೆಳೆಸಿ ಕೊಳ್ಳುವುದೇ ಮಾಹೇಶ್ವರಸ್ಥಲ. ಭಕ್ತನದು ತೀವ್ರನಿಷ್ಠೆಯಾಗಿ ಪರಿಣಮಿಸಿದರೆ ಅವನೇ ಮಾಹೇಶ್ವರ. ಈ ತೀವ್ರ ನಿಷ್ಠೆಯು ಸಾಧಕನ ಸಾಧನೆಯ ದೃಢ ನಿರ್ಧಾರವನ್ನು ಬಲಪಡಿಸುತ್ತದೆ. ಈ ನಿಷ್ಠೆ ಶಿವಭಕ್ತಿಯನ್ನು ಗಮನಿಸುತ್ತದೆಯೇ ಹೊರತು ಶಿವಭಕ್ತರ ಹುಟ್ಟು ಜಾತಿಗಳನ್ನಲ್ಲ. "ಆವ ಕುಲವಾದಡೇನು? ಶಿವಲಿಂಗವಿದ್ದವನೆ ಕುಲಜನು" ಎಂಬ ಅವರ ವಚನವನ್ನು ಗಮನಿಸಬೇಕು. ಮೈಮೇಲೆ ಶಿವಲಿಂಗ ಧರಿಸಿದರೆ ಸಾಕು, ಬ್ರಾಹ್ಮಣನಾಗಲಿ ಅಂತ್ಯಜನಾಗಲಿ ಎಲ್ಲರೂ ಸಮಾನ ಕುಲದವರೇ.

ಮನಸ್ಸು ಶಿವನಲ್ಲಿ ಶಿವಭಕ್ತರಲ್ಲಿ ತೀವ್ರವಾದ ಭಕ್ತಿಯನ್ನು ಬೆಳಸಿಕೊಂಡು ಮುಂದುವರಿಯುತ್ತ, ಆ ತೀವ್ರ ನಿಷ್ಠೆ ಕ್ರಮೇಣ ಶಿವನ ಹಾಗೂ ಶಿವನ ಅನುಯಾಯಿ ಗಳ ವಿಷಯದಲ್ಲಿ ಒಂದು ಬಗೆಯ ಸೇವಕ ಮನೋಭಾವವನ್ನು ಬೆಳೆಸುತ್ತದೆ; ಮಾಹೇಶ್ವರ ನಿಷ್ಠೆಯು ವ್ಯಕ್ತಿಯ ಅಹಂಕಾರವನ್ನು ಬೆಳೆಯಗೊಡದಂತೆ ನೋಡಿ ಕೊಂಡು ಅದು ಸಾಧಕನಲ್ಲಿ ಅಕೃತಕವಾದ ವಿನಯವನ್ನು ಶಿವಭಕ್ತರ ವಿಷಯದಲ್ಲಿ ಒಂದು ಬಗೆಯ ಸೇವಕ ಮನೋಧರ್ಮವನ್ನು ಬೆಳೆಸುತ್ತದೆ. ಶಿವಭಕ್ತರು ಉಂಡು ಬಿಟ್ಟಿದ್ದು ಸಾಧಕನಿಗೆ ಪ್ರಸಾದವಾಗುತ್ತದೆ – ಏಕೆಂದರೆ ಆ ಶಿವಭಕ್ತರು ಒಂದು ರೀತಿಯಲ್ಲಿ ಶಿವನೇ. ಮಾದಾರ ಚನ್ನಯ್ಯನ ಬಗ್ಗೆ ಇದ್ದ ಒಂದು ಕತೆಯನ್ನು ಬಸವಣ್ಣ ಜ್ಞಾಪಿಸಿಕೊಂಡಿದ್ದಾನೆ. ಮನೆಯಲ್ಲಿ ಮಾಡಿದ ಅಂಬಲಿಯು ಚನ್ನಯ್ಯನಿಗೆ ಬಹಳ ರುಚಿಯಾಗಿತ್ತು; ಆ ಎಂಜಲ ಅಂಬಲಿ ಶಿವನಿಗೆ ಪ್ರಿಯವಾಗುತ್ತದೆಯೆಂದು ಅದನ್ನು ಶಿವನಿಗಾಗಿ ಚನ್ನಯ್ಯ ಕಾಯ್ದಿರಿಸಿದನಂತೆ. ಅನ್ಯರು ಸಿದ್ಧಪಡಿಸಿದ ಭಕ್ಷ್ಯ ಭೋಜ್ಯ ಗಳಿಗಿಂತ ಮಾದಿಗರ ಜಾತಿಯ ಚನ್ನಯ್ಯನು ಕುಡಿದು ಬಿಟ್ಟ ಅಂಬಲಿಯೇ ಶಿವನಿಗೆ ಹೆಚ್ಚು ರುಚಿಸುತ್ತಿದ್ದಿತು. ಶಿವ ಸಾಧಕನಿಗೆ ಇಡೀ ಬದುಕೇ ಒಂದು ರೀತಿಯಲ್ಲಿ ಶಿವ ಕರುಣಿಸಿದ 'ಪ್ರಸಾದ' – ಶಿವ ಅನುಭವಿಸಿ ನೀಡಿದ್ದು. ಶಿವ ಮತ್ತು ಶಿವಭಕ್ತರು ಇಬ್ಬರೂ ಅಭಿನ್ನರು.

ಹೀಗೆ ಅಂತರ್ಮುಖಿಯಾಗುತ್ತ ನಡೆದ ಶಿವಸಾಧಕನಿಗೆ ತನ್ನ ಒಳಗೆ ಶಿವನು ಇರುವ ಅನುಭವವಾಗುವುದೇ ಪ್ರಾಣಲಿಂಗಿ ಸ್ಥಲ; ಹೊರಗಿನ ಇಷ್ಟಲಿಂಗವು ತನ್ನ ಒಳಗಿನ ಜೀವವಾಗಿ, ಪ್ರಾಣವಾಗಿ ಅನುಭವಕ್ಕೆ ಬರುತ್ತದೆ.

ಉಳ್ಳವರು ಶಿವಾಲಯವ ಮಾಡುವರು
ನಾನೇನ ಮಾಡುವೆ ಬಡವನಯ್ಯ
ಎನ್ನ ಕಾಲೇ ಕಂಬ, ದೇಹವೇ ದೇಗುಲ,

ಶಿರವೇ ಹೊನ್ನ ಕಳಶವಯ್ಯಾ,
ಕೂಡಲಸಂಗಮದೇವಾ, ಕೇಳಯ್ಯಾ,
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ.

ದೇಹವೇ ದೇವಾಲಯವಾಗಿ ಮಾರ್ಪಾಟಾದುದು ಒಂದು ಅದ್ಭುತ ಅನುಭವ. ಹೊರಗಿನ ದೇವಾಲಯದ ಶಿವಲಿಂಗಕ್ಕಾಗಿ ಮೈಮೇಲಿನ ಇಷ್ಟಲಿಂಗಕ್ಕಾಗಲಿ ಸಾವು ಅಥವಾ ವಿನಾಶ ಇರಬಹುದು; ಆದರೆ ಒಳಗೆ ಮಿಂಚಿರುವ ಆ ಬೆಳಕಿನ ಲಿಂಗಕ್ಕೆ ಸಾವು ಎಲ್ಲಿಯದು? ಹೊರಗಿನ ಇಷ್ಟಲಿಂಗ ಒಳಗಿನ ಭಾವಲಿಂಗವಾದಾಗ ವ್ಯಕ್ತಿ ಆ ಚಿಚ್ಛಕ್ತಿಗೆ ಸಮೀಪವರ್ತಿಯಾಗಿದ್ದಾನೆಂದೇ ಅರ್ಥ.

ಪ್ರಾಣಲಿಂಗಿಯಾದವನು ವಿಕಾಸ ಹೊಂದುತ್ತ ಬಂದಂತೆ ಅವನು ಸಾಧನೆಗೆ ಶರಣಾಗುತ್ತಾನೆ; ಅವನ ನಿದ್ರೆ ಜಪವಾಗುತ್ತದೆ; ಅವನು ನಡೆಯುವುದೇ ಪಾವನ ವಾಗುತ್ತದೆ; ಅಂತಹ 'ಶರಣ'ನ ಬಾಯಿಂದ ಬರುವುದೆಲ್ಲ ಶಿವತತ್ವವೇ ಆಗುತ್ತದೆ. "ಕೂಡಲಸಂಗನ ಶರಣನ ಕಾಯವೆ ಕೈಲಾಸ ಕಾಣಿರೋ." ಮುಂದಿನ ಹಂತವಾದ ಐಕ್ಯ ಸ್ಥಲದಲ್ಲಿ 'ಘನ'ವಾಗಿದ್ದುದು 'ಘನ'ವಾಗುವುದರ, ಸ್ವರೂಪತಃ ಬೆಳಗೇ ಆಗಿದ್ದುದು ಮಹಾಬೆಳಗು ಆದುದರ ಅನುಭವ ಅವರ್ಣನೀಯ; ಮಾತಿಗೆ ಮೀರಿದ್ದು.

ಘನಗಂಭೀರ ಮಹಾಘನದೊಳಗೆ
ಘನಕ್ಕೆ ಘನವಾಗಿದ್ದೆನಯ್ಯಾ.
ಕೂಡಲಸಂಗಮದೇವಯ್ಯನೆಂಬ
ಮಹಾಬೆಳಗಿನ ಬೆಳಗಿನೊಳಗಿದ್ದೇನೆಂಬ
ಶಬ್ದ ಮುಗ್ಧವಾದುದನೇನೆಂಬೆನಯ್ಯಾ.

ಕೂಡಲಸಂಗಮ ಎಂಬ ಬೆಳಗಿನೊಳಗೆ ಸಾಧಕ ಒಂದಾದ. ಆ ಮನಸ್ಥಿತಿ ಯನ್ನು ಯಾವ ಶಬ್ದವೂ, ಭಾಷೆಯೂ ವಿವರಿಸಲಾರದು; ಭಾಷೆ ಅಲ್ಲಿ ಸೋಲುತ್ತದೆ; ಅನುಭಾವಿಯ ಆ ಅನುಭವ ಮಾತನ್ನು ಮೀರಿದ್ದು; ಆ ಆನಂದ ನಿರುಪಮ ವಾದುದು. "ದಾಸೋಹಂ" – ನಾನು ಶಿವನ ದಾಸ ಎಂಬ ಸ್ಥಿತಿಯಿಂದ "ಶಿವೋಹಂ" – ನಾನೇ ಶಿವ ಎಂಬ ಸ್ಥಿತಿಗೆ ಏರುವುದೇ ಸಿದ್ಧಿ; ಎಲ್ಲ ಆಧ್ಯಾತ್ಮಿಕ ಸಾಧಕರ ಪರಮಗುರಿ. ನಿಜವಾದ ಅನುಭಾವವು 'ಶಬ್ದ ಮುಗ್ಧ'ವಾದುದು.

ವೀರಶೈವ ದರ್ಶನವನ್ನು "ದ್ವೈತಾದ್ವೈತ" ಎಂದು ವಚನಕಾರರೇ ಹೆಸರಿಸಿರು ವುದು ಅರ್ಥಪೂರ್ಣ. 'ಭಕ್ತ'ನಿಂದ 'ಐಕ್ಯ'ನವರೆಗಿನ ಮಾರ್ಗವು ಸಾಧಕ ಕ್ರಮಿಸುವ ಪಥ.

ಬಸವಣ್ಣ ಮತ್ತು ಅವರ ಸಮಕಾಲೀನ ಶರಣರ ಆಧ್ಯಾತ್ಮಿಕ ದೃಷ್ಟಿಕೋನ

ಬರೀ ಪರಲೋಕದತ್ತ ಬಾಗಿರುವುದಲ್ಲ; ಈ ಲೋಕದ ಬದುಕೂ ಅವರಿಗೆ ಅಷ್ಟೇ ಮುಖ್ಯವಾಗಿತ್ತು. ತಾವೂ ಸುಧಾರಣೆ ಪಡೆದು, ಜಗತ್ತನ್ನೂ ಸುಧಾರಿಸುವುದು, ಸರ್ವಸಮಾನತೆಯನ್ನು ಸಾಧಿಸಿ ಜಗತ್ತನ್ನು ದುಃಖವಿಮುಕ್ತಗೊಳಿಸುವುದು ಅವರ ಧ್ಯೇಯವಾಗಿತ್ತು. ಬಸವಣ್ಣ ಹೇಗೆ ಆಧ್ಯಾತ್ಮಿಕ ಸಾಧಕರೋ ಅಂತೆಯೇ ಸಮಾಜ ಸುಧಾರಕರೂ ಹೌದು. "ಅಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು" – ಅವರ ಈ ಮಾತು ಅವರ ಬಗ್ಗೆ ಎಲ್ಲವನ್ನೂ ಹೇಳುತ್ತದೆ. ಅನುಭಾವಿ ಸಂತ ಅಲ್ಲಮಪ್ರಭು ಅವರನ್ನು "ಯುಗದ ಉತ್ಸಾಹ" ಎಂದು ಕರೆದಿರುವುದು ಬಸವಣ್ಣನ ಬಗ್ಗೆ ಹೇಳಬೇಕಾದ ಎಲ್ಲವನ್ನೂ ಹೇಳುತ್ತದೆ.



# 12

# ವೀರಶೈವದ "ಆನ್ವಯಿಕ ವಿಜ್ಞಾನಿ" – ಬಸವಣ್ಣ

## ವೀರಶೈವ :

ಹಿಂದೂಧರ್ಮದ ಉಪಧರ್ಮವಾಗಿರುವ (Religious Denomination) ವೀರಶೈವದ ಪ್ರಾಚೀನತೆಯನ್ನು ನಿಖರವಾಗಿ ಹೇಳಲು ಸಾಧ್ಯವಿಲ್ಲವಾದರೂ ಅದು ಸ್ಪಷ್ಟವಾಗಿ ಹನ್ನೆರಡನೆಯ ಶತಮಾನಕ್ಕಿಂತ ಹಿಂದಿನದು; ಬಸವಪೂರ್ವ ಯುಗದ್ದು. ಬಸವಣ್ಣನವರಿಗಿಂತ ಸ್ವಲ್ಪ ಹಿಂದೆ ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿ (ಕ್ರಿ.ಶ. 1120) ಮಂತ್ರಿಯಾಗಿದ್ದ ಕೊಂಡಗುಳಿ ಕೇಶಿರಾಜನೆಂಬ ವೀರಶೈವ ಶಿವಭಕ್ತನ ಕೆಲವು ಕೃತಿಗಳು ಲಭ್ಯವಾಗಿವೆ. ಅವನ ಕ್ರಿ.ಶ. 1107 ಮತ್ತು 1132ರ ಶಾಸನಗಳೂ ಪ್ರಕಟ ವಾಗಿವೆ. ಅವನ 'ಶೀಲಮಹತ್ವದ ಕಂದ' ಕೃತಿಯಲ್ಲಿ ವೀರಶೈವದ ಉಲ್ಲೇಖವಿದೆ; ಅವನ ಕೃತಿಗಳು ವೃತ್ತ ಕಂದರೂಪವಾಗಿವೆ. ಅವನೇ ನಮಗೆ ತಿಳಿದಿರುವಂತೆ ಮೊದಲ ವೀರಶೈವ ಕವಿ; ವಚನಸಾಹಿತ್ಯದ ಆರಂಭಕಾರ ಜೇಡರ ದಾಸಿಮಯ್ಯ (ಕ್ರಿ.ಶ. 1140). ಮುಂದೆ ಬಂದ ಬಸವಣ್ಣ, ಸಿದ್ಧರಾಮ, ಅಕ್ಕಮಹಾದೇವಿ ಮೊದಲಾದವರ ವಚನಗಳಲ್ಲಿ 'ವೀರಶೈವ'ದ ಉಲ್ಲೇಖವಿದೆ; ಹಲವು ವಚನಗಳ ಮಧ್ಯೆ ಉಲ್ಲೇಖವಾಗಿರುವ ಸಂಸ್ಕೃತ ಶ್ಲೋಕಗಳಲ್ಲಿಯೂ 'ವೀರಶೈವ'ದ ಉಲ್ಲೇಖವಿದೆ. ಈ ಬಗ್ಗೆ ಅನುಮಾನವೇ ಇಲ್ಲ; ವೀರಶೈವ ಪರಂಪರೆ ಬಸವಪೂರ್ವಯುಗಕ್ಕೆ ಸೇರಿದ್ದು – ಅದರ ಪ್ರಾಚೀನತೆ ನಿರ್ದಿಷ್ಟವಾಗಿ ನಮಗೆ ತಿಳಿಯದು. ಶೈವರಾಗಿದ್ದ ತಾವು ಚನ್ನಬಸವಣ್ಣನವರ ಮೂಲಕ ವೀರಶೈವದ ಪರಿಚಯ ಪಡೆದು ವೀರಶೈವ ನಾದೆನೆಂದು ಬಸವಣ್ಣ ತಮ್ಮೊಂದು ವಚನದಲ್ಲಿ ಹೇಳಿಕೊಂಡಿದ್ದಾರೆ. – "ಎನ್ನ ಬಂದ ಭವಂಗಳನು ಪರಿಹರಿಸಿ, ಎನಗೆ ಭಕ್ತಿಘನವನೆತ್ತಿ ತೋರಿ, ಎನ್ನ ಹೊಂದಿದ ಶೈವ ಮಾರ್ಗಂಗಳನತಿಗಳೆದು, ನಿಜ ವೀರಶೈವಾಚಾರವನರುಹಿ ತೋರಿ..." ಎಂಬಂತಹ ಅವರ ವಚನಗಳನ್ನು ನೋಡಿದರೆ ಶೈವ ಮಾರ್ಗವು 'ಕರ್ಮ'ಕ್ಕೆ ವೀರಶೈವ ಮಾರ್ಗವು 'ಭಕ್ತಿ'ಗೆ ಹೆಚ್ಚು ಮಹತ್ವವನ್ನು ನೀಡಿದ್ದಿತೆಂಬುದು ಸ್ಪಷ್ಟವಾಗುತ್ತದೆ.

'ಕರ್ಮ'ವು ಶಾಸ್ತ್ರಬದ್ಧ, ವಿಧಿಬದ್ಧ – ಅದು ಮೇಲ್ಜಾತಿ ಕೀಳ್ಜಾತಿ ಎಂಬ ಅನುಶ್ರೇಣಿಗೆ ಎಡೆಮಾಡಿಕೊಡುತ್ತದೆ. ಅಸ್ಸಾಂ, ಬಂಗಾಳ, ಒರಿಸ್ಸಾ, ರಾಜಸ್ತಾನ, ಉತ್ತರ ಪ್ರದೇಶ, ಆಂಧ್ರ, ತಮಿಳುನಾಡು, ಕರ್ನಾಟಕ ಹೀಗೆ ಭಾರತಾದ್ಯಂತ ನಡೆದಿರುವ ಎಲ್ಲ ಭಕ್ತಿ ಚಳವಳಿಗಳೂ ಭಕ್ತನ ಹೃದಯ ಶುದ್ಧಿಗೆ, ನಿರ್ಮಲ ಭಕ್ತಿಗೆ ಒತ್ತುಕೊಟ್ಟಿವೆಯೇ ಹೊರತು ಶಾಸ್ತ್ರಬದ್ಧ ಕರ್ಮಗಳಿಗೆ (Rituals) ಅಲ್ಲ. ಯಾವುದೇ ಜಾತಿಯಲ್ಲಿ ಹುಟ್ಟಿದರೂ ಭಕ್ತರಾದ ಮೇಲೆ ಎಲ್ಲರೂ ಸಮಾನರು ಎಂದು ಎಲ್ಲ ಭಕ್ತಿ ಚಳವಳಿಗಳೂ ಹೇಳುತ್ತವೆ. ಅಂದಿನ ವೀರಶೈವವೂ ಅದನ್ನೇ ಪ್ರತಿಪಾದಿಸುತ್ತಿದ್ದುದು, ಪೂಜೆ ಜಪ ತಪ ಯಜ್ಞ ಯಾಗ ಇತ್ಯಾದಿ ಕರ್ಮಗಳಿಗೆ ಮಹತ್ವವನ್ನು ನೀಡಿರದೇ ಇದ್ದುದು ಬಸವಣ್ಣನವರಿಗೆ ಪ್ರಿಯವಾಯಿತು.

**ಕೊಂಡಗುಳಿ ಕೇಶಿರಾಜ :**

ತನ್ನ ರಾಜನಿಗೆ (ಆರನೆಯ ವಿಕ್ರಮಾದಿತ್ಯ) ವೃತ್ತಿಯಿಂದ ನಿಷ್ಠನಾಗಿದ್ದರೂ ಕೇಶಿರಾಜನ ಅಂತರಂಗದ ನಿಷ್ಠೆ, ಭಕ್ತಿಗಳು ಶಿವನಿಗೆ ಮಾತ್ರ ಮೀಸಲಾಗಿದ್ದುವು. ಇದನ್ನು ತಿಳಿದ ರಾಜನು ತನ್ನ ಅಸಮಾಧಾನ ವ್ಯಕ್ತಪಡಿಸಿದಾಗ ಅವನು ತನ್ನ ಮಂತ್ರಿ ಪದವಿಗೇ ರಾಜಿನಾಮೆಯಿತ್ತು ತನ್ನ ಪತ್ನಿ ಸಮೇತ ರಾಜಧಾನಿಯ ಹೊರಗಿದ್ದ ಮೇದರು ಎಂಬ ಕೆಳವರ್ಗದ ಜಾತಿಯ ಭಕ್ತನ ಮನೆಯಲ್ಲಿ ನೆಲಸುತ್ತಾನೆ. (ಭಕ್ತನಾಗಿ ರಾಜಪ್ರಭುತ್ವವನ್ನು ಧಿಕ್ಕರಿಸಿದ ಮೊದಲ ಧೀರ ಅವನು.) ಭಕ್ತಿಯ ಮುಂದೆ ಎಲ್ಲರೂ ಸಮಾನವೆಂಬ ತತ್ವವನ್ನು ಅಕ್ಷರಶಃ ಪರಿಪಾಲಿಸಿದ್ದ ಕೊಂಡಗುಳಿ ಕೇಶಿರಾಜನಂಥವರು ತೀರ ವಿರಳವಾಗಿದ್ದರು. ವೀರಶೈವದ ಕ್ರಾಂತಿಕಾರಕ ತತ್ವವು ಬಹುತೇಕ ಸಿದ್ಧಾಂತವಾಗಿ ಉಳಿದಿತ್ತು; ಹೆಚ್ಚು ಆಚರಣೆಗೆ ಬಂದಿರಲಿಲ್ಲ. ಆ ತತ್ವಕ್ಕೆ ಮನಸೋತ ಬಸವಣ್ಣ 'ವೀರಶೈವ'ನಾಗಿ ವೀರಶೈವದ ಕ್ರಾಂತಿಕಾರಕ ತತ್ವಗಳನ್ನು ಬದುಕಿನಲ್ಲಿ ಅಳವಡಿಸಿ ಕೊಂಡರು – ಅವರಿಂದ ವೀರಶೈವ ಜನಪ್ರಿಯವಾಯಿತು; ಜನಹಿತ ಕಾರ್ಯಕ್ಕೆ ಅದು ನೆರವಾಯಿತು. ಬಸವಣ್ಣ ಜನಸಾಮಾನ್ಯರ ಮಟ್ಟಕ್ಕೆ ಅದನ್ನು ಇಳಿಸಿ ಉದಾತ್ತ ಮಟ್ಟಕ್ಕೆ ಅದನ್ನು ಏರಿಸಿದ. ಇದು ಆಕಸ್ಮಿಕವಾದರೂ ಸ್ವಾರಸ್ಯವಾದುದು – ಕೊಂಡಗುಳಿ ಕೇಶಿರಾಜ (1120), ಬಸವಣ್ಣ (1160) ಇಬ್ಬರೂ ಇದ್ದುದು ಚಾಲುಕ್ಯ ಸಾಮ್ರಾಜ್ಯದ ಆಡಳಿತ ಕಾಲದಲ್ಲಿ; ಅವರ ಆಸ್ಥಾನದ ಅಧಿಕಾರಿಗಳಾಗಿ (ಬಿಜ್ಜಳ ಮೂಲತಃ ಕಲಚುರಿ ವಂಶದವನಾದರೂ ಅವನು ಚಾಲುಕ್ಯ ದೊರೆಯನ್ನು ಕೊಂದು ಏರಿದ್ದು ಚಾಲುಕ್ಯರ ಸಿಂಹಾಸನವನ್ನೇ.)

**'ಆನ್ವಯಿಕ ವಿಜ್ಞಾನಿ' :**

ಕೊಂಡಗುಳಿ ಕೇಶಿರಾಜನ "ಶಿವಭಕ್ತರೆ ತನಗೆ ತಂದೆ ತಾಯಿಗಳ್", "ನರರೊಳಗೆ ಭಕ್ತರಧಿಕರ್" ಎಂಬ ಮಾತಿಗೆ ಸಂವಾದಿಯಾದ ಬಸವಣ್ಣನವರ

"ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಕೂಡಲಸಂಗನ ಶರಣರೇ ಕುಲಜರು" ಎಂಬ ವಚನವಿದೆ. ವೀರಶೈವ ಸಿದ್ಧಾಂತವನ್ನು ಪ್ರತಿಪಾದಿಸುವ ಸಿದ್ಧಾಂತ ಶಿಖಾಮಣಿ ಎಂಬ ಸಂಸ್ಕೃತ ಗ್ರಂಥದ (ಅದರ ಕಾಲ, ಕರ್ತೃ ವಿಚಾರ ಸದ್ಯಕ್ಕೆ ಅನಗತ್ಯ) ಈ ಶ್ಲೋಕ ಗಮನಾರ್ಹ – "ಬ್ರಾಹ್ಮಣಃ ಕ್ಷತ್ರಿಯೋ ವಾಪಿ ವೈಶ್ಯೋ ಶೂದ್ರ ಏವ ವಾ । ಅಂತ್ಯಜೋ ವಾ ಶಿವೇ ಭಕ್ತಿಃ ಶಿವವತ್ ಮಾನ್ಯ ಏವ ಸಃ" (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಅಂತ್ಯಜ ಇವರು ಶಿವಭಕ್ತರಾಗಿದ್ದರೆ, ಅವರು ಶಿವನಷ್ಟೇ ಮಾನ್ಯರು). ಇಂತಹ ಹಲವು ಕ್ರಾಂತಿಕಾರಕ ತತ್ವಗಳನ್ನು ಅಂತರ್ಗತಗೊಳಿಸಿಕೊಂಡಿದ್ದ ವೀರಶೈವ ವನ್ನು ಶುದ್ಧ ವಿಜ್ಞಾನಕ್ಕೆ ಹೋಲಿಸಬಹುದು. ವಿಶ್ವದ ಒಳರಹ್ಯಗಳನ್ನು ನಿಯಮಗಳನ್ನು ಕಂಡುಹಿಡಿದು ಹೇಳುವುದು ಶುದ್ಧ ವಿಜ್ಞಾನ (Pure Science). ಉದಾಹರಣೆಗೆ ನ್ಯೂಟನ್ನನ 'Law' ಎಂದೇ ಪ್ರಸಿದ್ಧವಾಗಿರುವ "ಕ್ರಿಯೆ ಪ್ರತಿಕ್ರಿಯೆಗಳು ಸಮಾನ ಮತ್ತು ವಿರುದ್ಧ" ಎಂಬುದು ಶುದ್ಧ ವಿಜ್ಞಾನವಾದರೆ ಅದನ್ನು ಬಳಸಿಕೊಂಡು ರಾಕೆಟ್ ತಯಾರಿಸಿದ್ದು ಆನ್ವಯಿಕ ವಿಜ್ಞಾನ (Applied Science). ಕಾರ್ಲ್ ಮಾರ್ಕ್ಸ್‌ನ (ಅವನು ತತ್ವಜ್ಞಾನಿ ಮತ್ತು ಸಮಾಜವಿಜ್ಞಾನಿ ಕೂಡ) ಸಿದ್ಧಾಂತವೆಂದರೆ, ಮನುಷ್ಯನ ಚರಿತ್ರೆಯು ಆಳುವ ಮತ್ತು ದುಡಿಯುವ ಜನರ ಸಂಘರ್ಷವೇ ಆಗಿದೆ; ಅದು 'ಶುದ್ಧ ವಿಜ್ಞಾನ'; ಅದನ್ನು ಕಮ್ಯುನಿಸ್ಟ್ ಸಿದ್ಧಾಂತದ ಮೂಲಕ, ಶೋಷಿತರನ್ನು ಶೋಷಣೆ ಯಿಂದ ಬಿಡುಗಡೆಗೊಳಿಸುವುದರ ಮೂಲಕ ಸಾಕಾರಗೊಳಿಸಿದ ಲೆನಿನ್ ಒಬ್ಬ ಆನ್ವಯಿಕ ವಿಜ್ಞಾನಿ. ಹನ್ನೆರಡನೆಯ ಶತಮಾನಕ್ಕಿಂತ ಹಿಂದಿನ ವೀರಶೈವ ಧರ್ಮದ ತತ್ವಗಳನ್ನು, ಗಂಡು–ಹೆಣ್ಣು, ಸ್ಪೃಶ್ಯ–ಅಸ್ಪೃಶ್ಯ, ಮೇಲ್ವರ್ಗ–ಕೆಳವರ್ಗ, ಉತ್ತಮ ವೃತ್ತಿ–ಕೆಳ ವೃತ್ತಿ ಇವುಗಳ ಭೇದವನ್ನು ಅಳಿಸಿ ಹಾಕುವ ಆ ತತ್ವಗಳನ್ನು ಸಮಾಜೋ–ಧಾರ್ಮಿಕ ಚಳವಳಿಯೊಂದರ ಮೂಲಕ ಸಾರ್ವಜನಿಕಗೊಳಿಸಿ ಸಾರ್ವತ್ರೀಕರಣ ಗೊಳಿಸಿ ಬದುಕಿನ ಉತ್ತಮಿಕೆಗಾಗಿ ಅವುಗಳನ್ನು ಅನ್ವಯಿಸಿದ ಬಸವಣ್ಣ ವೀರಶೈವದ "ಆನ್ವಯಿಕ ವಿಜ್ಞಾನಿ" (Applied Science). ಹಿಂದಿನ ಅಜ್ಞಾತ ಕವಿಯೊಬ್ಬ ಅವರನ್ನು ಸ್ತೋತ್ರ ಮಾಡಿರುವ ಬಗೆ ಹೀಗೆ – "ವಿಶ್ವಧರ್ಮವನೊಂದುಗೂಡಿಪ ವೀರಶೈವರ ಚಂದಿರಾ । ವಿಶ್ವಸುತ ವರ ವೇದ ಬೋಧಕ ವಿಬುಧಪ್ರಿಯ ಬಸವೇಶ್ವರಾ." ತಾವು ಅವಲಂಬಿಸಿದ ವೀರಶೈವದ ಮೂಲಕ ವಿಶ್ವಧರ್ಮಗಳನ್ನು ಒಂದುಗೂಡಿಸಿದವರು. ಅವರು ಮಾದಿರಾಜ ಮಾದಲಾಂಬಿಕೆಯರ ಮಗನಾಗಿದ್ದರೂ 'ವಿಶ್ವಸುತ'ನೂ ಆಗಿ ಬೆಳಗಿದವರು ಬಸವಣ್ಣನವರು (ಅನುಬಂಧ ನೋಡಿ).

**ಹಿನ್ನೆಲೆ :**

ಆಲಿವರ್ ಕಾಕ್ಸ್ ಎಂಬಾತ ಹೇಳುವಂತೆ ಕರಿಯರನ್ನು ಬಿಳಿಯರ ಹಿಡಿತ ದಿಂದ ಬಿಡಿಸಬೇಕಾದರೆ ಅದರ ನಾಯಕತ್ವ ವಹಿಸುವ ವ್ಯಕ್ತಿ ಬಿಳಿಯರ ವರ್ಗ ದಿಂದಲೇ ಮೂಡಿಬರುವುದು ಅನಿವಾರ್ಯವಾಗಿತ್ತು. ಉದಾಹರಣೆಗೆ 'ನೀಗ್ರೋ'ಗಳನ್ನು

ದಾಸ್ಯದಿಂದ ವಿಮುಕ್ತಿಗೊಳಿಸಿದವನು ಬಿಳಿಯ ಏಬ್ರಹಾಂ ಲಿಂಕನ್ (1860) – ಈತ ಅಮೆರಿಕದ ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷನಾಗಿದ್ದ. ಹನ್ನೆರಡನೆಯ ಶತಮಾನದಲ್ಲೂ ಅಂತಹುದೇ ನಡೆಯಿತು.

ಬಸವಣ್ಣನವರ ತಂದೆ ತಾಯಿಗಳು ಬ್ರಾಹ್ಮಣರೆಂದೇ ಎಲ್ಲ ಪ್ರಾಚೀನ ಕೃತಿಗಳಲ್ಲೂ ಇರುವುದಲ್ಲದೆ ಅವರೇ ತಮ್ಮ ವಚನಗಳಲ್ಲಿ ತಾನು ಹುಟ್ಟಿನಿಂದ ಬ್ರಾಹ್ಮಣನೆಂದು ಸೂಚನೆ ನೀಡಿದ್ದಾರೆ. "ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟದ ಹೊರೆಯ ಹೊರಿಸದಿರಯ್ಯಾ" ಎಂಬ ವಚನ ಗಮನಾರ್ಹ. "ತಾನು ಹಾರುವ ಅಲ್ಲ; ಆಗುವುದಾದರೆ 'ಸದ್ಭಕ್ತರು ಎನ್ನವರೆಂದು' ಹಾರುವ (=ಬಯಸುವ) ಹಾರುವ (=ಬ್ರಾಹ್ಮಣ) ಆಗುತ್ತೇನೆ" ಎಂದಿದ್ದಾರೆ. ಬ್ರಾಹ್ಮಣನೆಂದು ತಮ್ಮನ್ನು ಗುರುತಿಸಿಕೊಳ್ಳಲು ಅವರಿಗೆ ಸ್ವಲ್ಪವೂ ಮನಸ್ಸಿರಲಿಲ್ಲ; ಆದರೆ 'ಹಾರುವ' ಆಗುವುದಾದರೆ ಎಲ್ಲ ಸದ್ಭಕ್ತರೂ ತನ್ನ ಬಂಧುಗಳು ಎಂದು ಹಾರುವ (ಹಾರೈಸುವ) ವ್ಯಕ್ತಿ ಆಗುತ್ತೇನೆ ಎಂದಿರುವುದು ಗಮನಾರ್ಹ. ಸಿರಿಯಾಳ, ಕಕ್ಕಯ್ಯ, ಮಾಚಯ್ಯ, ಚನ್ನಯ್ಯರನ್ನು ಭಕ್ತರೆಂದು ಗುರುತಿಸಬೇಕೇ ಹೊರತು ಸೆಟ್ಟಿ, ಡೋಹರ, ಮಡಿವಾಳ, ಮಾದರ ಎಂದು ಜಾತಿ ಹಿಡಿದು ಗುರುತಿಸಬಾರದು ಎಂದೂ ತಮ್ಮನ್ನೂ ಕೂಡ 'ಹಾರುವ' ಎಂದು ಗುರುತಿಸಬಾರದೆಂದೂ ಬೇಡಿಕೊಂಡಿದ್ದಾರೆ. ಈಗಲೂ ಬಸವನ ಬಾಗೆವಾಡಿ, ಇಂಗುಳೇಶ್ವರಗಳಲ್ಲಿರುವ ಅವರ ತಂದೆ ತಾಯಿಗಳ ವಂಶಸ್ಥರು ಕಾಶ್ಯಪ, ಕೌಂಡಿನ್ಯ ಗೋತ್ರದ ಸ್ಮಾರ್ತ ಬ್ರಾಹ್ಮಣರು; ಅವರ ತೀರ ಸಮೀಪದ ಬಂಧುಗಳಾಗಿದ್ದವರ ವಂಶಸ್ಥರು ಹುಕ್ಕೇರಿ ತಾಲೂಕಿನ ಅರ್ಜುನವಾಡ ಗ್ರಾಮದಲ್ಲಿದ್ದು ಅವರೂ ಕಾಶ್ಯಪ ಗೋತ್ರದವರೇ ಆಗಿದ್ದಾರೆ (ಆ ಮೂರು ಊರುಗಳಿಗೂ ಹೋಗಿ ಈಗಿನ ವಂಶಸ್ಥರ ಜೊತೆ ಮಾತನಾಡಿದ್ದೇನೆ). ನಿಸ್ಸಂಶಯವಾಗಿ ಬಸವಣ್ಣನವರು ಹುಟ್ಟಿನಿಂದ ಶೈವ ಬ್ರಾಹ್ಮಣರು. ಮಡಿವಾಳ ಮಾಚಿದೇವನು ಅವರ ತಂದೆ ಮಾದರಸನನ್ನು 'ಶೈವಾಗಮಾಚಾರ್ಯ'ನೆಂದು ಕರೆದಿರುವುದೂ ಅದನ್ನೇ ಹೇಳುತ್ತದೆ.

ಅಂತಹ ಶ್ರೀಮಂತ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದ ಬಸವಣ್ಣನವರು ಕೆಳವರ್ಗದ ಜನರ ಒಳಿತಿಗಾಗಿ ನಡೆದ ಚಳವಳಿಯ ನೇತಾರರಾದ ರೀತಿಯನ್ನು ಅರ್ಥಮಾಡಿಕೊಳ್ಳಬಹುದು. ಅವರು ತಮ್ಮನ್ನು ಮಾದಾರ ಚನ್ನಯ್ಯ, ಡೋಹರ ಕಕ್ಕಯ್ಯರ ತೊತ್ತುಗಳ ಅನೈತಿಕ ಸಂಪರ್ಕದಿಂದ ಜನಿಸಿದವನೆಂದು ಹೇಳಿಕೊಂಡಿರುವುದು, ತಾವು 'ಹೊರಗಣವನು' (ಅಸ್ಪೃಶ್ಯ) ಎಂದು ಹೇಳಿಕೊಂಡಿರುವುದು ಅವರು ತಮ್ಮ ಹುಟ್ಟು ಬ್ರಾಹ್ಮಣ್ಯದಿಂದ ತಮ್ಮನ್ನು ತಾವು ಸಂಪೂರ್ಣ ಬಿಡಿಸಿಕೊಂಡು ಕೆಳವರ್ಗದವರ ಜೊತೆ ಪ್ರಾಮಾಣಿಕವಾಗಿ ಸಮೀಕರಿಸಿಕೊಂಡುದರ ಸೂಚನೆ. (ತಮ್ಮ ಹೆಸರು ಕೇತುಗ, ಪೋಲುಗ, ಕಾಟುಕ ಎಂದು ಹೇಳಿಕೊಂಡಿರುವುದೂ ಅದನ್ನೇ ಸೂಚಿಸುತ್ತದೆ.)

## ವೀರಶೈವ–ಲಿಂಗಾಯತ :

ಬಸವಣ್ಣನವರು ವೀರಶೈವರೂ ಹೌದು, ಲಿಂಗಾಯತರೂ ಹೌದು – ಈ ಬಗ್ಗೆ ಭಿನ್ನಾಭಿಪ್ರಾಯಕ್ಕೆ ಅವಕಾಶವೇ ಇಲ್ಲ. 'ವೃಕ್ಷ', 'ಮರ' ಎಂಬುವು ಭಿನ್ನ ಶಬ್ದಗಳಾದರೂ ಅವು ಸೂಚಿಸುವುದು ಒಂದನ್ನೇ; ಅಂತೆಯೇ ವೀರಶೈವ–ಲಿಂಗಾಯತ ಪದಗಳು. 1120ರ ಕೊಂಡಗುಳಿ ಕೇಶಿರಾಜನಲ್ಲಿಯೇ 'ಲಿಂಗಾಯತ' ಪದ ಬಂದಿದ್ದರೂ ಅಲ್ಲಿ ಮತ್ತು ಮುಂದೆ ಲಿಂಗವನ್ನು ಧರಿಸುವ ಒಂದು ವಿಧಿ ಅಥವಾ ಪ್ರಕ್ರಿಯೆಯನ್ನು ಅದು ಹೇಳುತ್ತದೆ. ಹಾಗೆ ಲಿಂಗವನ್ನು ಧರಿಸುವವನೇ ಲಿಂಗಾಯತ ಅಥವಾ ವೀರಶೈವ ಎಂಬರ್ಥ ಆ ಪದಕ್ಕೆ ಆಮೇಲೆ ಬಂದಿದೆ. ಈಗ 'ಲಿಂಗಾಯತ' ಪದ ಹೆಚ್ಚಾಗಿ ಜನರ ಆಡುಮಾತಿನಲ್ಲಿ ಬಳಕೆಯಾಗುತ್ತಿದ್ದರೆ 'ವೀರಶೈವ' ಹೆಚ್ಚಾಗಿ ಬರಹದ ಭಾಷೆಯಲ್ಲಿ ಬಳಕೆಯಾಗುತ್ತಿದೆ. ಎರಡಕ್ಕೂ ಏನೂ ಭೇದವಿಲ್ಲವೆಂಬುದನ್ನು ಆ ಬಗ್ಗೆ ವಿಶೇಷವಾಗಿ ಅಧ್ಯಯನ ಮಾಡಿರುವ ನಾನು ಸ್ಪಷ್ಟವಾಗಿ ಹೇಳಬಯಸುತ್ತೇನೆ : ಅವೆರಡೂ ಬೇರೆ ಬೇರೆ ಎಂದು ಹೇಳುವುದು ಅನುಚಿತ; ಮತ್ತು ಅದು ಲಿಂಗಾಯತ ಧರ್ಮವನ್ನು ಛಿದ್ರಗೊಳಿಸುವಂತಹುದೂ ಆಗಿದೆ.

## ಅನುಬಂಧ : ಶುದ್ಧ ವಿಜ್ಞಾನ–ಆನ್ವಯಿಕ ವಿಜ್ಞಾನ

ಆಧುನಿಕ ವಿಜ್ಞಾನದ ಆಯಾಮಗಳು ಮುಖ್ಯವಾಗಿ ಎರಡು. ಒಂದು – ತಾರ್ಕಿಕ ಚಿಂತನೆ, ಪ್ರಯೋಗಾನ್ವೇಷಣೆಗಳಿಂದ ರೂಪುಗೊಂಡ ನಿಯಮಗಳು ಹಾಗೂ ತತ್ವಸಿದ್ಧಾಂತಗಳು. ಇದೇ ಶುದ್ಧ ವಿಜ್ಞಾನ ಅಥವಾ Pure Science. ಎರಡನೆಯದು – ಶುದ್ಧ ವಿಜ್ಞಾನವನ್ನು ತಂತ್ರಜ್ಞಾನ ರೂಪದಲ್ಲಿ ಬಳಸಿಕೊಂಡು ಪ್ರಕೃತಿಯಲ್ಲಿ ದೊರಕುವ ಸಂಪನ್ಮೂಲಗಳನ್ನು ನಮ್ಮ ಐಹಿಕ ಜೀವನವು ಉನ್ನತ ಮಟ್ಟಕ್ಕೇರುವಂತೆ ರೂಪಿಸಿ ಕೊಳ್ಳುವುದು. ಇದೇ ಆನ್ವಯಿಕ ವಿಜ್ಞಾನ ಅಥವಾ Applied Science (ಎರಡನೆಯ ದಾದ ತಂತ್ರಜ್ಞಾನಕ್ಕೆ ಕರಾಳಮುಖವೂ ಇದೆ – ಉದಾಹರಣೆಗೆ ವಿನಾಶಕಾರಿ ಶಸ್ತ್ರಾಸ್ತ್ರ ಗಳನ್ನು ತಯಾರಿಸುವುದು.)

ಈಗ ನಾವು ಕಾಣುತ್ತಿರುವ, ಅವುಗಳಿಂದ ಅನೇಕ ಪ್ರಯೋಜನಗಳನ್ನು ಅನುಭವಿಸುತ್ತಿರುವ ವಿವಿಧ ಕೈಗಾರಿಕೆಗಳು ಮತ್ತು ಯಾಂತ್ರಿಕ ಸಮುದಾಯಗಳು ಭೌತಶಾಸ್ತ್ರ, ರಸಾಯನಶಾಸ್ತ್ರ ಹಾಗೂ ಜೀವವಿಜ್ಞಾನಗಳ ಮೂಲಭೂತ ಸಂಶೋಧನೆ ಗಳ ತತ್ವಗಳನ್ನು ಅವಲಂಬಿಸಿವೆ. ಉದಾಹರಣೆಗೆ, ಇಪ್ಪತ್ತನೇ ಶತಮಾನದ ಪ್ರತಿಭಾ ಶಾಲಿ ವಿಜ್ಞಾನಿ ಆಲ್ಬರ್ಟ್ ಐನ್‌ಸ್ಟೀನನು ಶಕ್ತಿಗೂ ವಸ್ತುವಿಗೂ (Mass) ಇರುವ ಸಂಬಂಧವನ್ನು ಒಂದು ಸಮೀಕರಣದ ಮೂಲಕ ತಾತ್ವಿಕವಾಗಿ ಪ್ರತಿಪಾದಿಸಿದ. ಇದು ತಂತ್ರಜ್ಞಾನವಾಗಿ ರೂಪುಗೊಂಡು ಅಗಾಧ ಪ್ರಮಾಣದಲ್ಲಿ ಪರಮಾಣು ಶಕ್ತಿ

ಪಡೆಯಲು ಸಾಧ್ಯವಾಯ್ತು. ಈ ಶಕ್ತಿಯನ್ನು ವಿದ್ಯುಚ್ಛಕ್ತಿಯ ರೂಪದಲ್ಲಿ ಎಲ್ಲ ದೇಶಗಳೂ ಉತ್ಪಾದಿಸುತ್ತಿವೆ. ನಾವು ಬಳಸುತ್ತಿರುವ ಪ್ಲಾಸ್ಟಿಕ್, ಬಗೆಬಗೆಯ ರಾಸಾಯನಿಕ ವಸ್ತುಗಳು, ಔಷಧಿಗಳಿಗೆ ಹಲವಾರು ಕೃಷಿ ಮೊದಲಾದ ಉತ್ಪನ್ನಗಳಿಗೆ ರಸಾಯನ ವಿಜ್ಞಾನ ಜೀವವಿಜ್ಞಾನಗಳ ಮೂಲಭೂತ ಪರಿಶೋಧಗಳೇ ಆಧಾರ. ಮುಖ್ಯವಾಗಿ ಶುದ್ಧವಿಜ್ಞಾವು ಸೈದ್ಧಾಂತಿಕವಾದುದು, ಆನ್ವಯಿಕ ವಿಜ್ಞಾನವು ವ್ಯಾವಹಾರಿಕವಾದುದು.

ಸಮಾಜವಿಜ್ಞಾನದಿಂದ ಒಂದು ಉದಾಹರಣೆಯನ್ನು ಕೊಡಬಹುದು. ಮಕ್ಕಳ ಮಾನಸಿಕ ಖಿನ್ನತೆ, ಓದಿನಲ್ಲಿ ನಿರಾಸಕ್ತಿ ಇವುಗಳ ಬಗ್ಗೆ ಮನೋವಿಜ್ಞಾನಿಗಳು ಮಕ್ಕಳ ಬಗ್ಗೆ ತಾಯಿ ತಂದೆಗಳು ಅಷ್ಟು ಆಸಕ್ತಿ ವಹಿಸದೇ ಇರುವುದು ಎಂಬುದನ್ನು ವ್ಯಾಪಕ ಕ್ಷೇತ್ರಕಾರ್ಯದಿಂದ ಸಾಬೀತುಮಾಡಿದ್ದಾರೆ. ಅಂತಹ ಮಕ್ಕಳನ್ನು ಮಾನಸಿಕ ತಜ್ಞರ ಬಳಿಗೆ ಕರೆದೊಯ್ದರೆ, ಅವರು ತಂದೆ ತಾಯಂದಿರಿಗೆ ತಿಳಿ ಹೇಳಿ, ಶಿಕ್ಷಣವನ್ನು ನೀಡಿ, ಮಕ್ಕಳ ಕಡೆ ನಿಗಾ ವಹಿಸುವುದರ ಬಗ್ಗೆ ಸ್ಪಷ್ಟ ಪಡಿಸುತ್ತಾರೆ. ಮೊದಲನೆಯದು ಶುದ್ಧ ವಿಜ್ಞಾನ, ಎರಡನೆಯದು ಆನ್ವಯಿಕ ವಿಜ್ಞಾನ.

ಈ ಹಿನ್ನೆಲೆಯಲ್ಲಿ ಬಸವಣ್ಣನವರನ್ನು "ವೀರಶೈವದ ಆನ್ವಯಿಕ ವಿಜ್ಞಾನಿ" ಎಂದು ಕರೆಯಲಾಗಿದೆ. ಅವರಿಗಿಂತ ಹಿಂದೆ ವೀರಶೈವ ಪಂಥದ ಕ್ರಾಂತಿಕಾರಕ ತತ್ವಗಳು ಹೆಚ್ಚಾಗಿ ಸೈದ್ಧಾಂತಿಕವಾಗಿದ್ದುವು. ಅವರು ಆ ತತ್ವಗಳನ್ನು ಕಾರ್ಯರೂಪವಾಗಿ ಬಳಸಿಕೊಂಡು ಸಮಾಜದಲ್ಲಿ ಕ್ರಾಂತಿಕಾರಕ ಬದಲಾಣೆ ಮಾಡಿದರು. ಅವರದು ಒಂದ ಅಪೂರ್ವ ಸಮಾಜೋ ಧಾರ್ಮಿಕ ಆಂದೋಲನ ಅಥವಾ ಕ್ರಾಂತಿ.



# 13

# "ವಿರೂಪಾಕ್ಷ ಸಂಗ" – ಬಸವಣ್ಣನ ಗೃಹಸಂಸಾರದ ಮೇಲೊಂದು ಕ್ಷ–ಕಿರಣ

ಬಸವಣ್ಣನವರ ಧರ್ಮಪತ್ನಿಯರಾದ ಗಂಗಾಂಬಿಕೆ, ನೀಲಲೋಚನೆಯರು ಅಕ್ಕ ತಂಗಿಯರು – ಇವರು ಬಿಜ್ಜಳನ ಬಳಿ ಅಧಿಕಾರಿಗಳಾಗಿದ್ದ ಬಲದೇವ ಮತ್ತು ಸಿದ್ಧರಸ ಎಂಬ ಸೋದರರ ಹೆಣ್ಣುಮಕ್ಕಳು. (ನೀಲಲೋಚನೆಗೆ 'ಮಾಯಿದೇವಿ' ಎಂಬ ಇನ್ನೊಂದು ಹೆಸರಿತ್ತೆಂದು ಹೇಳಲು ಅವಕಾಶಗಳಿವೆ.) ಅವರಿಬ್ಬರೂ ಬಸವಣ್ಣನಿಗೆ ಎಲ್ಲ ರೀತಿಗಳಿಂದ ಅನುರೂಪರಾಗಿದ್ದ ವಿದ್ಯಾವಂತ ಪತ್ನಿಯರಾಗಿದ್ದರು. (ನೀಲಲೋಚನೆಯು ಬಿಜ್ಜಳನ ಸಾಕುತಂಗಿ ಎಂದು ಕೆಲವರು ದುರ್ಬಲ ಆಧಾರಗಳೊಡನೆ ಪ್ರತಿಪಾದಿಸಿದ್ದರೂ ಅದಿನ್ನೂ ಕೇವಲ ಊಹೆ, ಕಲ್ಪನೆಯಾಗಿಯೇ ಉಳಿದಿದೆ.) ಗಂಗಾಂಬಿಕೆ "ಗಂಗಾಪ್ರಿಯ ಕೂಡಲಸಂಗಮದೇವ" ಎಂಬ ಅಂಕಿತ ಮೊಡನೆ, ನೀಲಲೋಚನೆ "ಸಂಗಯ್ಯ" ಎಂಬ ಅಂಕಿತಮೊಡನೆ ವಚನ ಬರೆದಿದ್ದಾರೆ. ಅವೆರಡೂ ಅಂಕಿತಗಳು ಬಸವಣ್ಣನವರ "ಕೂಡಲಸಂಗಮದೇವ" ಅಂಕಿತ ಆಧರಿಸಿ ರೂಪುಗೊಂಡವು ಎಂಬಲ್ಲಿ ಅನುಮಾನವಿಲ್ಲ.

ಗಂಗಾಂಬಿಕೆಯ ವಚನಗಳನ್ನು ನೋಡಿದರೆ ಅವಳು ಒಬ್ಬ ಸಾಧಕಿ, ಅನುಭಾವಿ ಎಂಬುದು ಸ್ಪಷ್ಟವಾಗುತ್ತದೆ. ನೀಲಲೋಚನೆಯೂ ಅಷ್ಟೇ.

ಇಬ್ಬರಿಗೂ ಮಕ್ಕಳಾದರೂ ಇಬ್ಬರೂ ಬಾಲ್ಯದಲ್ಲಿಯೇ ತೀರಿ ಹೋದರೆಂದು ಹೇಳಲು ಆಧಾರಗಳಿವೆ. ಆ ನೋವನ್ನು ಇಬ್ಬರೂ ಭಕ್ತಿ ಸಾಧನೆಯ ಭಾಗವಾಗಿ ಪರಿವರ್ತಿಸಿಕೊಂಡು ವಿಕಾಸಗೊಂಡರು. ಅವರಲ್ಲಿ ನೀಲಲೋಚನೆಯು ಗಂಗಾಂಬಿಕೆ ಗಿಂತ ಹೆಚ್ಚು ಭಾವುಕಳು – ಅವಳು ಒಂದೆಡೆ ತನ್ನನ್ನು 'ವಿಚಾರ ಪತ್ನಿ'ಯೆಂದು ಕರೆದುಕೊಂಡಿದ್ದಾಳೆ.

ಪಾರ್ವತಿಯ ರೂಪ ಕಂಡು ಪರಶಿವನ ಸಂಗ ನಿಸ್ಸಂಗವಾಗಿ
ತಾಯಿ ಮಗನಂಗದಿಂದ ತನುವಳಿದು ನಿರಾಭಾರರೂಪವನೆಯ್ದಿ,
ಬಸವನ ಅನುಭವದಿಂದ ವಿವರವ ಕಂಡು
ವಿಚಾರ ಪತ್ನಿಯಾದೆನಯ್ಯಾ ಸಂಗಯ್ಯಾ.

ಮೇಲ್ಕಂಡ ವಚನದ ನಿಜವಾದ ಧ್ವನಿತಾರ್ಥವನ್ನು ಗ್ರಹಿಸುವುದು ನನಗೆ ಕಷ್ಟವಾಗಿದೆ. ಪಾರ್ವತಿಯ ಸೌಂದರ್ಯವನ್ನು ಕಂಡ ಪರಶಿವನ ಸಂಗವು ನಿಸ್ಸಂಗವಾಯಿತು – ಎಂದರೆ ಪಾರ್ವತಿಯ ಸೌಂದರ್ಯವು ಶಿವನನ್ನು ಇಂದ್ರಿಯ ಭೋಗಿಯನ್ನಾಗಿಸಲಿಲ್ಲ – ಅದರ ಬದಲು ಅವನು ಇಂದ್ರಿಯ ನಿಗ್ರಹ ಮಾಡಿದ ತಪಸ್ವಿಯಾದ, ನಿಸ್ಸಂಗನಾದ – ಎಂದರೆ ತನ್ನ ಚೆಲುವನ್ನು ಕಂಡೂ ಬಸವ ಮೋಹಿತನಾಗಲಿಲ್ಲ, ನಿರ್ಮೋಹಿತನಾದ ಎಂದು ನಿಲಲೋಚನೆ ಇಲ್ಲಿ ಸೂಚಿಸಿರುವಂತಿದೆ. ಎರಡನೆಯ ಪಾದದ ಅರ್ಥವು ಹೀಗಿರಬಹುದು : ತಾಯಿಯಾದ ತಾನು ಮಗನನ್ನು ಕಳೆದುಕೊಂಡರೂ, ದೇಹಾಭಿಮಾನವನ್ನು ಅಳಿದು 'ನಿರಾಭಾರಿ'ಯಾದೆ – ಎಂದರೆ ತಾಯಿಯಾದ ತಾನು ಮಗನ ಸಾವಿನ ಯಾತನೆಯನ್ನು 'ನಿರಾಭಾರಿ'ಯಾಗಲು ಬಳಸಿಕೊಂಡೆ ಎಂದು ತನ್ನನ್ನು ತಾನು ಸಂತೈಸಿಕೊಂಡಿರುವಂತಿದೆ. ಆ ಎಲ್ಲ ಸಹನೆ ತನ್ನ ಪತಿ ಬಸವಣ್ಣನ ಬದುಕಿನ ಅನುಭವಗಳ ಫಲ, ಅವನಿಂದ ಅದೆಲ್ಲವನ್ನೂ ತಾನು ಕಲಿತೆ ಎಂದು ನೀಲಲೋಚನೆ ಸೂಚಿಸಿದ್ದಾಳೆ. ಆ ಎಲ್ಲ ದುಃಖಾನುಭವಗಳಿಂದ ತಾನು 'ವಿಚಾರ ಪತ್ನಿ'ಯಾದೆ ಎಂದು ಹೇಳಿಕೊಂಡಿದ್ದಾಳೆ. 'ವಿಚಾರ ಪತ್ನಿ' ('Intellectual Consort') ಮಾತನ್ನು ಹೀಗೆ ವಿವರಿಸಬಹುದು. ನೀಲಲೋಚನೆ ಭಾರತೀಯ ಸ್ತ್ರೀ ನಿಜ; ಆದರೆ ಅವಳಿಗೆ ಪುರುಷನಷ್ಟೇ ವೈಚಾರಿಕ ಶಕ್ತಿಯಿತ್ತು; ಸರಿ ತಪ್ಪುಗಳನ್ನು ವಸ್ತುನಿಷ್ಠವಾಗಿ ವಿಮರ್ಶಿಸುವ ಮನೋಧರ್ಮ ಅವಳಲ್ಲಿದೆ – ಆ ಮನೋಧರ್ಮವು ಬಸವಣ್ಣನಿಂದ ಇನ್ನೂ ದೃಢಗೊಂಡಿತು. ಪುರುಷ–ಸ್ತ್ರೀಯರಿಗೆ ಸಮಾನ ಹಕ್ಕುಗಳಿವೆಯೆಂಬ ವಚನ ಚಳವಳಿಯ ತತ್ವಕ್ಕೆ ಸಂಪೂರ್ಣ ಬದ್ಧನಾಗಿದ್ದ ಬಸವಣ್ಣನ ಪತ್ನಿಯರೂ ಅಕ್ಷರಶಃ "ವಿಚಾರ ಪತ್ನಿ"ಯರಾಗಿದ್ದರು ಎಂಬುದು ಅತ್ಯಂತ ಗಮನಾರ್ಹ ಸಂಗತಿ. ನೀಲಮ್ಮ ತನ್ನ ಒಂದು ವಚನದಲ್ಲಿ "ಬಸವಣ್ಣನ ಮನೆಯ ತೊತ್ತಿನ ಮಗಳು" ಎಂದು ಹೇಳಿಕೊಂಡಿರುವುದು ಮೇಲಿನ ನನ್ನ ವಿವರಣೆಗೆ ಮೇಲ್ನೋಟಕ್ಕೆ ವಿರೋಧವಾಗಿದೆಯೆಂಬುದು ನಿಜ. ಆ ವಚನ ಹೀಗಿವೆ –

ನಾನು ನಿಮ್ಮವಳಲ್ಲವಯ್ಯಾ, ನಾನು ಅನಿಮಿಷನರವಳು
ನಾನು ನಿಮ್ಮವಳಲ್ಲವಯ್ಯಾ, ನಾನು ಅಜಗಣ್ಣನವರವಳು
ನಾನು ನಿಮ್ಮವಳಲ್ಲವಯ್ಯಾ, ನಾನು ಪ್ರಭುವಿನ ಸಂತತಿಯವಳು
ನಾನು ನಿಮ್ಮವಳಲ್ಲವಯ್ಯಾ, ನಾನು ಮಾದಾರ ಚನ್ನಯ್ಯನ ಮೊಮ್ಮಗಳು
ನಾನು ನಿಮ್ಮವಳಲ್ಲವಯ್ಯಾ, ನಾನು ಪ್ರಸಾದಿಗಳ ಮನೆಯ ಕೀಳು ತೊತ್ತು

ನಾನು ನಿಮ್ಮವಳಲ್ಲವಯ್ಯಾ, ಸಂಗಯ್ಯಾ
ನಾನು ಬಸವಯ್ಯನ ಮನೆಯ ತೊತ್ತಿನ ಮಗಳು

ನೀಲಲೋಚನೆ ತನ್ನ ಇಷ್ಟಲಿಂಗಕ್ಕೆ ಹೇಳುತ್ತಾಳೆ–ನಾನು ನಿನ್ನ ಕಡೆಯವಳಲ್ಲ, ನಾನು ಅನಿಮಿಷ (ಅಲ್ಲಮನಿಗೆ ಗುಹೆಯಲ್ಲಿ ಇಷ್ಟಲಿಂಗ ದಯಪಾಲಿಸಿದ ಗುರುವಿನ ಹೆಸರು), ಅಜಗಣ್ಣ, ಅಲ್ಲಮಪ್ರಭು, ಮಾದಾರ ಚನ್ನಯ್ಯ, ಪ್ರಸಾದಿ (=ಪ್ರಸಾದಿ .............?) ಇವರಿಗೆ ಸೇರಿದವಳು; ಇವರ ದಾಸಿ; ಅಷ್ಟೇ ಅಲ್ಲ, ನಾನು ಬಸವಣ್ಣನ ಮನೆಯ ದಾಸಿಯ ಮಗಳು ಎಂದು ಹೇಳಿಕೊಂಡಿದ್ದಾಳೆ. ಇಲ್ಲೆಲ್ಲ ಆ ಹಿರಿಯರ ಬಗ್ಗೆ ಅವಳಿಗಿರುವ ನಿಷ್ಕಲಂಕ ಶ್ರದ್ಧೆ, ಭಕ್ತಿ, ಗೌರವ ವ್ಯಕ್ತವಾಗಿರುವುದೇ ಹೊರತು, ತಾನು ಆ ಶ್ರೇಷ್ಠರು ಹೇಳಿದ್ದನ್ನೇ ಮಾಡುವ, ವ್ಯಕ್ತಿ ಸ್ವಾತಂತ್ರ್ಯವಿಲ್ಲದ ದಾಸಿ ಅಥವಾ ತೊತ್ತು (slave) ಎಂಬರ್ಥವಿಲ್ಲ. ನೀಲಲೋಚನೆ ತಾನು ಬಸವಣ್ಣನ "ವಿಚಾರ ಪತ್ನಿ" ಎಂದು ಹೇಳಿಕೊಂಡಿರುವುದೇ ಅವಳ ಸ್ಪಷ್ಟ ದೃಢ ನಿಲುವು. ಎಂದರೆ, ಬಸವಣ್ಣ ತನ್ನ ಇಬ್ಬರು ಪತ್ನಿಯರಿಗೂ ನಡೆಯಲ್ಲಿ ಹಾಗೂ ನುಡಿಯಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯದ ವಾತಾವರಣ ನಿರ್ಮಿಸಿದ್ದ; ಅವರೂ ಆ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಸಹಜವಾಗಿಯೇ ವ್ಯಕ್ತಿಶಃ ಪಡೆದವರಾಗಿದ್ದರು. (ಅವರು ಹಿರಿಯ ಅಧಿಕಾರಿಗಳ ಹೆಣ್ಣುಮಕ್ಕಳು ಎಂಬದು ಗಮನಿಸಬೇಕಾದ್ದು.)

ಹಿಂದೆ ಹೇಳಿದಂತೆ ನೀಲಲೋಚನೆ ಒಬ್ಬ ಭಾವಜೀವಿ; ಮತ್ತು ಅವಳ ವಚನ ಗಳಲ್ಲಿ ಅನೇಕವು ಬಸವಣ್ಣ ಐಕ್ಯನಾದ ಬಳಿಕ ಬರೆದಂಥವು. ಉದಾ.:

ಕಾಯವಿಲ್ಲದೆ ಪುಷ್ಪಕವ ಕಂಡ ನಮ್ಮ ಬಸವಯ್ಯನು
ನಮ್ಮ ಬಸವಯ್ಯನ ನೆಲೆಮಾಡ ಕರುಮಾಡವಾಯಿತ್ತು*
ನಮ್ಮ ಬಸವಯ್ಯ ಹೂವಿನ ರಥವನೇರಿದ
ನಮ್ಮ ಬಸವಯ್ಯ ಸಂಗಯ್ಯನಾದ
ಬಸವನ ರೂಪು ತದ್ರೂಪವಾಯಿತ್ತು

ನೀಲಲೋಚನೆಯ ಶೋಕವು ಒಂದು ಸಾಹಿತ್ಯಕ ಮೌಲ್ಯದ ಶೋಕಗೀತೆ ಯಾಗಿರುವುದನ್ನು ಗಮನಿಸಬೇಕು (ಅವಳ ಹಲವು ಕೃತಿಗಳು elegy ಅಥವಾ ಶೋಕಗೀತೆಗಳೇ). ಬಸವಣ್ಣನವರಂತೆಯೇ ಆಕೆಯದೂ ಕವಿಹೃದಯ, ಭಾಷೆಯೂ ಸಾಹಿತ್ಯಕ ಭಾಷೆ.

---

* ಕರುಮಾಡ=ಉಪ್ಪರಿಗೆ. ಈ ವಚನವೂ ಗಮನಾರ್ಹ – "ನಾಡಿನ ಹೆಣ್ಣುಗಳೆಲ್ಲ ಬನ್ನಿರೆ ಅಕ್ಕಗಳಿರಾ, ಅಕ್ಕನರಸ ಬಸವಯ್ಯನು ಬಯಲ ಕಂಡು ಬಟ್ಟ ಬಯಲಾದನು. ಅಕ್ಕನರಸನಿಲ್ಲದೆ ನಿರಕ್ಕರನಾದನು ಬಸವಯ್ಯನು, ನಮ್ಮ ಸಂಗಯ್ಯನಲ್ಲಿ ಬಸವಯ್ಯನೈಕ್ಯ ಬಯಲಿಲ್ಲದ ಬಯಲು."

ಈ ಹಿನ್ನೆಲೆಯಲ್ಲಿ ಕೆಳಗಿನ ವಚನವನ್ನು ವಿಶ್ಲೇಷಿಸಬಯಸುತ್ತೇನೆ.

ಮುಕ್ತಿಯನಳಿದು ನಿರ್ಮುಕ್ತಳಾದ ಕಾರಣ
ಮುಕ್ತಿಯಿಲ್ಲವಯ್ಯಾ ಬಸವಯ್ಯಾ ಎನಗೆ
ಸಂಗ ನಿಸ್ಸಂಗದವಳಾದ ಕಾರಣ
ಎನಗೆ ಸಂಗದ ಸಂಗವಿಲ್ಲವಯ್ಯಾ ಬಸವಯ್ಯಾ
ನನಗೇತರ ಪರಿಣಾಮದ ಕೂಟಪ್ರಭೆ?
ವಿರೂಪಾಕ್ಷ ಸಂಗವನನುಭವಿಸಿದೆನಯ್ಯಾ ಬಸವಯ್ಯಾ
ಸಂಗಯ್ಯಾ, ಬಸವ ವರಪ್ರಣವ ಸ್ವರೂಪನಾಯಿತ್ತು

ನೀಲಲೋಚನೆ ಹೇಳಿಕೊಂಡಿರುವಂತೆ, ಅವಳು 'ಮುಕ್ತ'ಳಾಗಬೇಕು ಎಂಬ ಬಯಕೆಯನ್ನೂ ಕೈಬಿಟ್ಟು ನಿರ್ಮುಕ್ತಳಾದವಳು; ಅವಳು 'ಸಂಗ', 'ನಿಸ್ಸಂಗ' ಎರಡರ ದ್ವಂದ್ವವನ್ನೂ ಮೀರಿದವಳು. ಇದರಿಂದ ಅವಳಿಗೆ ಸಾಧನೆಯ 'ಪರಿಣಾಮ'(ಫಲ) ವಾದ 'ಕೂಟ'ದ (ಜೀವ–ಆತ್ಮರ ಏಕಾನುಭವ) ಬೆಳಕಿನ ಅಗತ್ಯವೂ ಇಲ್ಲ. ಇಂತಹ ಅತ್ಯುನ್ನತ ಸಿದ್ಧಿಯನ್ನು ಪಡೆದದ್ದು ಅವಳು ಅನುಭವಿಸಿದ 'ವಿರೂಪಾಕ್ಷ ಸಂಗ'ದಿಂದ. ಆ 'ವಿರೂಪಾಕ್ಷ ಸಂಗ'ಕ್ಕೆ ಮೂಲಕಾರಣನಾದ ಬಸವಯ್ಯನೇ ಅವಳಿಗೆ ಪ್ರಣವ, ಅಥವಾ ಓಂಕಾರ. ವ್ಯಕ್ತಿಯ ಬಿಡುಗಡೆಯ ಅತ್ಯುನ್ನತ ಸಾಧನಮಾರ್ಗವಾದ ಪ್ರಣವ ಅಥವಾ ಓಂಕಾರವು ಅವಳಿಗೆ ಯಾವುದೆಂದರೆ ಬಸವ, ಬಸವ ನಾಮದ ಉಚ್ಚಾರ, ಬಸವ ನಾಮದ ಸ್ಮರಣೆ (ಆದ್ದರಿಂದಲೇ ಅವಳ ಎಲ್ಲ ವಚನಗಳಲ್ಲಿ ಬಸವ ನಾಮಸ್ಮರಣೆಯಿದೆ).

ಮೇಲಿನ ವಚನಗಳಲ್ಲಿ ಎದ್ದು ಕಾಣುವ ಭಾಗ 'ವಿರೂಪಾಕ್ಷ ಸಂಗ.' ಆ ಸಮಾಸ ಪದ ಬಹು ಅರ್ಥಪೂರ್ಣ; ನೀಲಲೋಚನೆ, ಬಸವಣ್ಣ ಇವರ ದಾಂಪತ್ಯದ ಹಿನ್ನೆಲೆಯಲ್ಲಿ ಅದು ವ್ಯಾಖ್ಯಾನಾರ್ಹ. ವಿರೂಪಾಕ್ಷ ಎಂದರೆ ಶಿವ, ಫಾಲನೇತ್ರ ಅಥವಾ ಉರಿಗಣ್ಣ. 'ಶಿವ' ಮಾತಿಗೆ ಮಂಗಳ, ಸೌಮ್ಯ, ಶುಭ ಎಂಬರ್ಥಗಳಿವೆ. ಬಸವಣ್ಣ ಹೊರನೋಟಕ್ಕೆ (ಸತ್ಯ) ನಿಷ್ಠುರ ಸ್ವಭಾವದವನಾದರೂ, ಅವನು ವಾಸ್ತವ ವಾಗಿ ಸೌಮ್ಯ, ದಯಾಪರ, ಸ್ನೇಹಜೀವಿ. ವಿರೂಪಾಕ್ಷನು ತನ್ನ ತಪಸ್ಸನ್ನು ಹಾಳು ಮಾಡಲು ಯತ್ನಿಸಿದ ಕಾಮನನ್ನು ಸುಟ್ಟು, ಬಳಿಕ ತನ್ನನ್ನು ಒಲಿಸಿಕೊಳ್ಳಲು ಮಾಡಿದ ಗಿರಿಜೆ ಅಥವಾ ಪಾರ್ವತಿಯನ್ನು (ಇವಳು ಗಿರಿರಾಜ ಅಥವಾ ಪರ್ವತ ರಾಜನ ಮಗಳು) ಮೆಚ್ಚಿ ಅವಳ ಕೈಹಿಡಿಯುತ್ತಾನೆ. ಬಸವನಿಗಾಗಿ ಹಂಬಲಿಸಿ ಮದುವೆಯಾದ ವಳು ಅಥವಾ ಮನಃಪೂರ್ವಕವಾಗಿ ಅವನ ಕೈಹಿಡಿದವಳು ನೀಲಾಂಬಿಕೆ. (ಇದು ಆಕಸ್ಮಿಕ – ವಿರೂಪಾಕ್ಷನಿಗೆ ಗಿರಿಜೆ ಮತ್ತು ಪಂಪಾಂಬಿಕೆಯರು ಇಬ್ಬರು ಪತ್ನಿಯರು; ಬಸವಣ್ಣನಿಗೆ ನೀಲಲೋಚನೆ, ಗಂಗಾಂಬಿಕೆ ಎಂಬ ಇಬ್ಬರು ಪತ್ನಿಯರು.) ಶಿವನು ಹೊರಗೆ ಉರಿಗಣ್ಣನಾದರೂ ಲೋಕದ ಹಿತವನ್ನು ಬಯಸುವವನು – ಅವನ ದೃಷ್ಟಿ

ಸದಾ ತನ್ನ ಸಂಸಾರದ ಹೊರಗೆ – ಅಂತಹ ಶಿವನ ಒಳ ಸಂಸಾರವನ್ನು ನಿರ್ವಹಿಸುವಲ್ಲಿ ಪಾರ್ವತಿ ತೋರಿರುವ, ಅನುಭವಿಸಿರುವ ಸಹನೆ, ಕಷ್ಟ ಇವುಗಳನ್ನು ನಾವು ಊಹಿಸಬಹುದು. ಪ್ರತಿ ದೊಡ್ಡ ಪ್ರಸಿದ್ಧ ಸಾಧಕನ ಯಶಸ್ಸಿನ ಹಿಂದೆ ಒಬ್ಬ ಪ್ರಸಿದ್ಧಳಲ್ಲದ ಮಹಿಳೆ ಇರುತ್ತಾಳೆ; ಅವನು ಪ್ರಸಿದ್ಧನಾಗಲು, ಶ್ರದ್ಧೆಯಿಂದ ಸಮಾಜಮುಖಿ ಕರ್ಮಗಳಲ್ಲಿ ತೊಡಗಿಕೊಳ್ಳುವುದಕ್ಕೆ ಅವನು ಎಷ್ಟು ಕಾರಣನೋ ಅವನ ಎಲ್ಲ ಒಳ ಸಂಸಾರದ ಆಗು ಹೋಗುಗಳನ್ನು ಕಷ್ಟ ಸುಖಗಳನ್ನು ಶ್ರದ್ಧೆಯಿಂದ ನೋಡಿಕೊಂಡ ಅವನ ಗೃಹಿಣಿಯ ತ್ಯಾಗವೂ ಅಷ್ಟೇ ಕಾರಣ. (ಗಾಂಧೀಜಿ ಜೊತೆ ಬದುಕಿದ ಕಸ್ತೂರಿ ಬಾ ಅವರೂ ಕೂಡ ಮಹಾತ್ಯಾಗಿ; ಗಾಂಧೀಜಿ ಮಹಾತ್ಮರಾಗಲು ಅವರೂ ಕಾರಣ, ಕಸ್ತೂರಿ ಬಾ ಅವರ ತ್ಯಾಗಜೀವನವೂ ಕಾರಣ.)

ಬಿಜ್ಜಳನ ಭಂಡಾರಿ, ರಾಜಕೀಯ ಸಲಹೆಗಾರ, ಸಾಮಾಜಿಕ ಮುಖಂಡ, ರಾಷ್ಟ್ರ ಮಟ್ಟದ ಆಂದೋಲನವೊಂದರ ನೇತಾರ, ಎಲ್ಲರ ಜೊತೆ ಬೆರೆಯುವ ಶಿವಭಕ್ತ, ನಾನಾ ಭಾಗಗಳಿಂದ ಬರುತ್ತಿದ್ದ ಭಕ್ತರನ್ನು ಆರೈಸುವವನು ಆಗಿದ್ದ ಬಸವಣ್ಣನವರಿಗೆ ಸ್ವಂತ ಕೆಲಸಗಳಿಗೆ ಸಮಯವೇ ಇರಲಿಲ್ಲ; ಸಯಮ ದೊರಕಿದಾಗಲೂ ವಚನ ರಚನೆಯಲ್ಲಿ ಮಗ್ನನಾಗಿರುತ್ತಿದ್ದ. ಇಂತಹ ಬಸವಣ್ಣ ಒಮ್ಮೊಮ್ಮೆ ತನ್ನ ಪತ್ನಿಯರ ಜೊತೆ ಸಿಡಿಮಿಡಿಗೊಳ್ಳುತ್ತಿದ್ದುದು ಅಸಂಭವವಲ್ಲ; ಹೊರಗೆ ಆದ ನೋವನ್ನು ಮನೆಯಲ್ಲಿ ವ್ಯಕ್ತಮಾಡಿ ಹಗುರಗೊಳಿಸಿಕೊಳ್ಳುತ್ತಿದ್ದ ಎಂದೂ ಊಹಿಸುವುದರಲ್ಲಿ ತಪ್ಪಿಲ್ಲ. ಅವನ ಪತ್ನಿಯರಿಗೂ ಸ್ವಲ್ಪ ಬೇಸರವಾದರೂ ಅವರು ಅದೆಲ್ಲವನ್ನೂ ಸಂತೋಷದಿಂದ ಸಹಿಸಿಕೊಳ್ಳುತ್ತಿದ್ದರು. ಆದರೆ ಬಹುಶಃ ಅವನ ಪತ್ನಿಯರಲ್ಲಿ ಪರಸ್ಪರ ಭಿನ್ನಾಭಿಪ್ರಾಯಗಳು ಎಂದೂ ಬಂದಿರಲಾರವು. ಸ್ವಾಭಾವಿಕವಾಗಿ ಬಂದಿದ್ದರೂ ಅವು ಆ ಕ್ಷಣದಲ್ಲೇ ಪರಿಹಾರವಾಗುತ್ತಿದ್ದುವೆಂದು ಊಹಿಸಬಹುದು. ಇಷ್ಟಂತೂ ನಿಜ – ಮಕ್ಕಳಿಲ್ಲದಿದ್ದ ಆ ಇಬ್ಬರಿಗೂ ಬಸವಣ್ಣ ಒಂದು ಬಗೆಯಲ್ಲಿ ಮಗುವಿನಂತಿದ್ದ ಎಂದು ಹೇಳಬಹುದು.

ಹಿಂದೆ ಸೂಚಿಸಿದ ಹಾಗೆ ತನ್ನ ಸೂಕ್ಷ್ಮ ಅನುಭವಗಳನ್ನು ವಚನಗಳಲ್ಲಿ ನೀಲಲೋಚನೆ ಹೇಳಿಕೊಂಡಿರುವಂತೆ ಗಂಗಾಂಬಿಕೆ ಅಷ್ಟಾಗಿ ಹೇಳಿಕೊಂಡಿಲ್ಲ. ನೀಲಲೋಚನೆಯ “ವಿರೂಪಾಕ್ಷ ಸಂಗವನನುಭವಿಸಿದೆನಯ್ಯಾ ಬಸವಯ್ಯಾ” ಎಂಬ ಮಾತು ಬಸವಣ್ಣನವರ ಮನೆಯ, ಸಂಸಾರದ ಒಳಚಿತ್ರಣವನ್ನು ಸೂಕ್ಷ್ಮವಾಗಿ ಧ್ವನಿಸುತ್ತದೆ. ಮೇಲಿನ ಮಾತುಗಳನ್ನು ಸಾರಾಂಶೀಕರಿಸುತ್ತೇನೆ. ಬಸವಣ್ಣನವರದು ಒಂದು ರೀತಿಯಲ್ಲಿ ಸುಖಮಯ ಗೃಹಸ್ಥ ಜೀವನವೇ. ಆದರೆ ಅವರ ಗಮನವು ಹೆಚ್ಚಾಗಿ ಆತ್ಮ ಸಾಧನೆ, ಲೋಕ ಹಿತಚಿಂತನೆ ಕಡೆ ಇದ್ದುದರಿಂದ ಸಂಸಾರದ ಒಳ ಕಷ್ಟಗಳನ್ನು ಅವನ ಪತ್ನಿಯರೇ ವಹಿಸಬೇಕಾಗಿತ್ತು. ಆ ಕಷ್ಟ ಆರ್ಥಿಕವಲ್ಲ, ಮಾನಸಿಕ. ದಿನವಿಡೀ ರಾಜಾಸ್ಥಾನದಲ್ಲಿ ತಿರುಗಾಟದಲ್ಲಿ ಜನರ ಕಷ್ಟ ಸುಖಗಳನ್ನು

ವಿಚಾರಿಸುವುದರಲ್ಲಿ ಮಗ್ನನಾಗಿರುತ್ತಿದ್ದ ಬಸವಣ್ಣ ರಾತ್ರಿ ಎಷ್ಟು ತಡವಾಗಿ ಬರುತ್ತಿದ್ದನೋ ತಿಳಿಯದು. ಎಷ್ಟೋ ವಾರ ಕಲ್ಯಾಣದಿಂದ ಹೊರಗಿರುತ್ತಿದ್ದ. ಮನೆಗೆ ಬಂದರೂ ಅವನಿಗೆ ಲೋಕದ ಚಿಂತೆಯೇ ಹೆಚ್ಚಾಗಿರುತ್ತಿತ್ತು. ಅದೆಲ್ಲವನ್ನೂ ಬಹುತೇಕ ನಗುಮೊಗದಿಂದ ಎದುರಿಸಿದ ಅವನ ಪತ್ನಿಯರ ಮಾನಸಿಕ ಸ್ಥಿತಿಯನ್ನು 'ವಿರೂಪಾಕ್ಷ ಸಂಗ' ಬಹು ಅರ್ಥಪೂರ್ಣವಾಗಿ ಧ್ವನಿಸುತ್ತದೆ. ಅವರ ಪತ್ನಿಯರ ಮಾನಸಿಕ ದುಗುಡ ಕ್ಷಣಿಕವಾದ್ದು; ಆದರೆ ಒಂದು ಬಗೆಯ ತೃಪ್ತಿ, ಆನಂದ ಮಾತ್ರ ನಿರಂತರವಾದ್ದು. ಆನಂದ ಅವರ ಬದುಕೆಂಬ ಸಾಗರದ ಹರಹು; ದುಗುಡ ವೇದನೆ ಕಾತರ ಆತಂಕ ಇವು ಆ ಸಾಗರದ ಕ್ಷಣಿಕ ಅಲೆಗಳು.



# 14

# "ಯುಗದ ಉತ್ಸಾಹ" – ಬಸವಣ್ಣ*

ಯಾವ ಮಹನೀಯನನ್ನು, ಅವನ ಬಹುಮುಖ ವ್ಯಕ್ತಿತ್ವವನ್ನು ನಾನು ಅರ್ಥ ಮಾಡಿಕೊಳ್ಳಲು ಈ ಹಲವು ವರ್ಷ ನಿರಂತರವಾಗಿ ಯತ್ನಿಸಿರುವೆನೋ, ಈಗಲೂ ಯಾರನ್ನು ಸ್ವಲ್ಪ ಸ್ವಲ್ಪ ಅರ್ಥಮಾಡಿಕೊಳ್ಳುತ್ತಿರುವೆನೋ ಅಂತಹ ಶ್ರೇಷ್ಠನೊಬ್ಬನನ್ನು, ಅವನು ನಾಯಕತ್ವ ವಹಿಸಿದ ಸಮಾಜೋ ಧಾರ್ಮಿಕ ಚಳವಳಿಯನ್ನು ಕುರಿತಂತೆ ವ್ಯವಸ್ಥೆಯಾಗಿರುವ ಈ ವಿಚಾರಗೋಷ್ಠಿಯಲ್ಲಿ ಪ್ರಮುಖ ಆಶಯಭಾಷಣವನ್ನು ಮಾಡಲು ಆಹ್ವಾನಿಸಿದ್ದಕ್ಕಾಗಿ ನಾನು ದೆಹಲಿ ವಿಶ್ವವಿದ್ಯಾಲಯದ ಆಧುನಿಕ ಭಾರತೀಯ ಭಾಷಾ ವಿಭಾಗದ ಅಧ್ಯಕ್ಷರಿಗೂ ವಿಶೇಷವಾಗಿ ಆ ವಿಭಾಗದಲ್ಲಿ ಕನ್ನಡ ಅಧ್ಯಾಪಕರಾಗಿರುವ ಪ್ರೊ. ಟಿ.ಎಸ್. ಸತ್ಯನಾಥ್ ಅವರಿಗೂ ಬಹುವಾಗಿ ಋಣಿ ಯಾಗಿದ್ದೇನೆ. ವಿದ್ವಾಂಸರಿಗೆ, ಆಧುನಿಕ ನಾಗರಿಕರಿಗೆ ಅವನ ಹೆಸರು "ಬಸವೇಶ್ವರ"; ಆದರೆ ಕರ್ನಾಟಕದ ಹಿಂದಿನ ಹಲವು ಶತಮಾನಗಳ ಕೋಟ್ಯಂತರ ಜನರಿಗೆ ಅವನು ಬರಿಯ "ಬಸವ", ಅಥವಾ ಹೆಚ್ಚೆಂದರೆ ಬಸವಣ್ಣ – "ಅಣ್ಣ" ಎಂಬುದು ಜನತೆ ಈ ಹಿಂದಿನ ಎಂಟು ಶತಮಾನಗಳಿಂದ ಉದ್ದಕ್ಕೂ ಅವನನ್ನು ಪ್ರೀತಿಯಿಂದ ಕಂಡು ಅವನ ಹೆಸರಿಗೆ ಸೇರಿಸಿರುವ ನಂಟುತನ ಸೂಚಕ ಪದ; ಆತ್ಮೀಯತೆಯ ಸಂಕೇತ. ಈಗಲೂ ಹಳ್ಳಿಯ ಅನೇಕ ಅನಕ್ಷರಸ್ಥ ಜನರು ಅವನು ನಿಜವಾಗಿಯೂ ಯಾರು ಎಂಬುದು ತಿಳಿಯದೆ, ಅಪಾಯದ ಭಯದ ದುಃಖದ ಸಂದರ್ಭಗಳಲ್ಲಿ ತಮಗೆ ಅರಿವಿಲ್ಲದೆಯೇ "ಬಸವ ಬಸವ" ಎಂದು ಶ್ರದ್ಧೆಯಿಂದ ಸ್ಮರಿಸುತ್ತಾರೆ – ಅದು ಅವರ 'ತಾರಕ ಮಂತ್ರ.' ನನಗೆ ತಿಳಿದಮಟ್ಟಿಗೆ ಕರ್ನಾಟಕದ ಯಾವ ಐತಿಹಾಸಿಕ ವ್ಯಕ್ತಿಯೂ ಇಷ್ಟರಮಟ್ಟಿಗೆ ಜನತೆಯ ಬದುಕಿನ, ಜಾನಪದದ ಭಾಗವಾಗಿಲ್ಲ (ಆ ವಿಷಯದಲ್ಲಿ ಅವನಿಗೆ ಸ್ವಲ್ಪಮಟ್ಟಿಗೆ ದ್ವಿತೀಯ ಸ್ಥಾನದಲ್ಲಿ ನಿಲ್ಲುವವನು ಬಹುಶಃ ಹದಿಮೂರನೇ ಶತಮಾನದ ಉತ್ತರಾರ್ಧದ ಕುಮಾರ ರಾಮ). ಲಿಂಗಾಯತರಿರಲಿ, ಒಕ್ಕಲಿಗ ಕುರುಬ ಬೇಡ ದಲಿತ ಎಂಬ ಭೇದವಿಲ್ಲದೆ – ಬ್ರಾಹ್ಮಣರನ್ನು ಹೊರತುಪಡಿಸಿ

---

* ದೆಹಲಿ ವಿಶ್ವವಿದ್ಯಾಲಯದ ಆಧುನಿಕ ಭಾರತೀಯ ಭಾಷಾ ವಿಭಾಗವು ವ್ಯವಸ್ಥೆ ಮಾಡಿದ ರಾಷ್ಟ್ರೀಯ ವಿಚಾರಗೋಷ್ಠಿಯ ಪ್ರಮುಖ ಆಶಯ ಭಾಷಣ.

ಕರ್ನಾಟಕದ ಎಲ್ಲ ಜಾತಿಗಳ ಎಲ್ಲ ವರ್ಗಗಳ ಕುಟ್ಟುವ, ಬೀಸುವ, ಕಳೆಕೀಳುವ ಇತ್ಯಾದಿ ಜಾನಪದ ಸಾಹಿತ್ಯದಲ್ಲಿ ಬಸವನ, ಅವನ ಸಮಕಾಲೀನರ ಗೌರವಾರ್ಹ ಉಲ್ಲೇಖಗಳಿವೆ, ಅವರಿಗೆ ಸಂಬಂಧಿಸಿದ ಹಳ್ಳಿ ಕತೆಗಳಿವೆ, ಹಾಡುಗಳಿವೆ, ನಾಟಕಗಳಿವೆ. ಕರ್ನಾಟಕದ ಬಹುತೇಕ ಎಲ್ಲ ಬ್ರಾಹ್ಮಣೇತರ ಜಾತಿಗಳಿಗೆ ಬಸವನ ನಾಯಕತ್ವದ ಆಂದೋಲನದಲ್ಲಿ 'ಸಾಂಸ್ಕೃತಿಕ ನಾಯಕರು' (Culture Heroes) ಕಾಣಿಸಿದ್ದಾರೆ – ಕುಂಬಾರರಿಗೆ ಗುಂಡಯ್ಯ, ಡೋಹರರಿಗೆ ಕಕ್ಕಯ್ಯ, ದಲಿತರಿಗೆ ಮಾದರ ಚನ್ನಯ್ಯ, ಮಡಿವಾಳರಿಗೆ ಮಾಚಯ್ಯ, ಒಕ್ಕಲಿಗರಿಗೆ ಮುದ್ದಯ್ಯ, ನೇಕಾರರಿಗೆ ದಾಸಿಮಯ್ಯ, ಮೀನುಗಾರರಿಗೆ ಅಂಬಿಗರ ಚೌಡಯ್ಯ ಇತ್ಯಾದಿ.

ಬಸವನನ್ನು ಮೆಚ್ಚುವುದು ಸುಲಭ; ಹೊಗಳುವುದು ಇನ್ನೂ ಸುಲಭ; ಅರ್ಥೈಸಿಕೊಳ್ಳುವುದು ಮಾತ್ರ ಅಷ್ಟು ಸುಲಭವಲ್ಲ. ಐತಿಹಾಸಿಕ ಮಾಹಿತಿಯ ಕೊರತೆ ಅದಕ್ಕೆ ಕಾರಣ ಅಲ್ಲ. ಹಾಗೆ ನೋಡಿದರೆ, ಭಾರತೀಯ ಶಾಸ್ತ್ರ (Indology) ಬಲ್ಲವರು ಹಿಂದಿನ ಯಾವುದೇ ವ್ಯಕ್ತಿ ಅಥವಾ ಘಟನೆಗಳ ಬಗ್ಗೆ ದೊರಕುವ ಮಾಹಿತಿ ತೀರ ಬಡಕಲಾಗಿರುವಾಗ, ಬಸವನ ಬಗ್ಗೆ ದೊರಕುವ ಮಾಹಿತಿ ಅಷ್ಟೇನೂ ನಿರಾಶಾದಾಯಕವಲ್ಲವೆಂಬುದನ್ನು ಒಪ್ಪುತ್ತಾರೆ. ಬಸವನ ಬಗ್ಗೆ, ಅವನ ಕಾಲದ ಆಂದೋಲನದ ಸಮಗ್ರ ಚಿತ್ರದ ಬಗ್ಗೆ ದೊರಕಬೇಕಾದ ಇತಿಹಾಸದ ವಿವರಗಳು ಇನ್ನೂ ಸಾಕಷ್ಟಿವೆ – ಅದು ಬೇರೆ. ನಮಗೆ ಸ್ಥೂಲವಾಗಿ ದೊರಕುವ ಅಂತಹ ಬಸವನ ಸಮಗ್ರವ್ಯಕ್ತಿತ್ವವನ್ನು ಅದರ ಸಮಸ್ತ ಸಂಕೀರ್ಣತೆಯಲ್ಲಿ ಗ್ರಹಿಸುವುದು ನನಗೆ ಕಷ್ಟವಾಗುತ್ತಿದೆ. ಅವನು ಮಧ್ಯಕಾಲೀನ ಯುಗಕ್ಕೆ ಸೇರಿದವನಾದರೂ ಆಧುನಿಕನಾಗಿ ಕಾಣುತ್ತಾನೆ. ಅವನ ಬಗ್ಗೆ ಯಾವುದೇ ಸಮಾಜವಾದಿ ಎಡಪಂಥೀಯ ರಾಷ್ಟ್ರದಲ್ಲೂ ಮಾತನಾಡಬಹುದು. ಅವನೊಬ್ಬ ದೈವಕ್ಕೆ ಶರಣಾಗಿದ್ದ ಭಕ್ತ; ಆದರೆ ಆ ಭಕ್ತಿ ಅವನನ್ನು ಅವನು ಬದುಕಿದ್ದ ಜಗತ್ತಿನ ಬಗ್ಗೆ ಕುರುಡಾಗಿಸಲಿಲ್ಲ. ಅಪ್ಪಟ ನಿರೀಶ್ವರವಾದಿಗಳೂ ಅವನನ್ನು ಓದದೆ ಇರಲಾರರು. ಹನ್ನೆರಡನೆಯ ಶತಮಾನದ ದಕ್ಷಿಣ ಭಾರತದ ಅತ್ಯಂತ ಪ್ರಬಲ ಚಾಲುಕ್ಯ ಚಕ್ರವರ್ತಿಗಳ ಬಳಿ ಅವನು ಪ್ರಮುಖ ಕೋಶಾಧ್ಯಕ್ಷನಾಗಿದ್ದನು; ಆದರೆ ಆ ಐಶ್ವರ್ಯ, ಸ್ಥಾನಗಳು ಅವನನ್ನು ಕೆಡಿಸಲು ಅಸಮರ್ಥವಾದುವು. ಅವನೊಬ್ಬ ಸರಳ 'ಭಕ್ತ'ನಾಗಿದ್ದ; ಇಡೀ ಪ್ರಪಂಚದಲ್ಲಿ ತಾನೊಬ್ಬನೇ 'ಭಕ್ತ'ನೆಂದೂ ಉಳಿದ ಶರಣರೆಲ್ಲ ತನಗೆ ಭಗವಂತನ ಸ್ವರೂಪಿಗಳೆಂದೂ ವಿನಯದಿಂದ ಸಾರಿದನು. ಅವನು ವಿನಯದ ಸಾಕಾರ ಮೂರ್ತಿಯಾಗಿದ್ದ ("ಬಾಗಿದ ತಲೆಯ, ಮುಗಿದ ಕೈಯ ಬಸವ"). ಅವನು ಹುಟ್ಟಿನಿಂದ ಬ್ರಾಹ್ಮಣ; ಆದರೆ ತಾನು ಬ್ರಾಹ್ಮಣ ತಂದೆ ತಾಯಿಗಳಿಗೆ ಹುಟ್ಟಿದವನಲ್ಲವೆಂದೂ ತಾನು ಡೋಹರ ಕಕ್ಕಯ್ಯ ಮಾದಾರ ಚೆನ್ನಯ್ಯರ ದಾಸ ದಾಸಿಯರ ಅಕ್ರಮ ಸಂಬಂಧದಿಂದ ಜನಿಸಿದವನೆಂದೂ ಹೇಳಿಕೊಂಡು ಸಮಾಜದ ತೀರ ಕೆಳಸ್ತರದ ಜೊತೆ ತನ್ನನ್ನು ತಾನು ಸಮೀಕರಿಸಿಕೊಂಡ. ಆ ಮೂಲಕ ತನ್ನನ್ನು ಅಬ್ರಾಹ್ಮಣೀಕರಿಸಿಕೊಳ್ಳಲು ಯತ್ನಿಸಿದ. (ಇಂತಹುದೊಂದು ಉದಾಹರಣೆ, ಆಧುನಿಕ

ಕಾಲವೂ ಸೇರಿದಂತೆ ಭಾರತದ ಚರಿತ್ರೆಯಲ್ಲಿ ದೊರಕುವುದು ಅಸಂಭವ.) ಅವನು ದಿನವೂ ತನ್ನ ಮನೆಯಲ್ಲಿ ಲಕ್ಷದ ತೊಂಬತ್ತಾರು ಸಾವಿರ ಜಂಗಮರಿಗೆ ದಾಸೋಹ ನಡೆಸುತ್ತಿದ್ದನೆಂದು ಕತೆ ಇದೆ. ನಿಶ್ಚಿತವಾಗಿ ಅದೊಂದು ಉತ್ಪ್ರೇಕ್ಷಿತ ಸಂಖ್ಯೆಯಾದರೂ ಅವನ ಮನೆ ಸದಾ ಜನರಿಂದ ತುಂಬಿ ತುಳುಕುತ್ತಿತ್ತೆಂಬುದು ಒಂದು ವಾಸ್ತವ; ಆ ಜನಗಳ ಮಧ್ಯೆಯೂ ಅವನು ಏಕಾಂಗಿಯಾಗಿಯೂ ಇರಬಲ್ಲವನಾಗಿದ್ದ. ಅಷ್ಟೇ ಅಲ್ಲ, ಎಲ್ಲ ಮಹಾತ್ಮರಂತೆ ಅವನು ಒಂಟಿತನವನ್ನು ಅನುಭವಿಸಿದ. ಅವನು ಮತೀಯ ಆಚರಣೆಯ ಸಂಪ್ರದಾಯಸ್ಥನಾಗಿ, ಅಂತೆಯೇ ಒಬ್ಬ ಸಂಪ್ರದಾಯ ಭೇದಕನಾಗಿ ಏಕಕಾಲಕ್ಕೆ ಕಾಣಿಸುತ್ತಾನೆ. ಎಲ್ಲ ಜಾತಿಗಳ ಸಮಾನತೆಯನ್ನು ಒಪ್ಪುತ್ತಾನೆ; 'ಜಂಗಮ' ಸಮುದಾಯದ ಮೇಲ್ಮೆಯನ್ನು ಕೊಂಡಾಡುತ್ತಾನೆ (ಆ 'ಜಂಗಮ'ರು ಇಂದಿನ ಹುಟ್ಟು ಜಂಗಮರಿಂದ ಭಿನ್ನ). ಅವನೊಬ್ಬ ದಯಾಪರ; ಅದೇ ಕಾಲಕ್ಕೆ ಅಷ್ಟೇ ಕಠಿಣವಾಗಿಯೂ ಇರಬಲ್ಲ. ಅವನಲ್ಲಿನ ಈ ಸ್ವಭಾವವೈರುಧ್ಯವೇ, ಅವನ ವ್ಯಕ್ತಿತ್ವದ ಸಂಕೀರ್ಣತೆಯೇ ಅವನನ್ನು ನಮಗೆ ಹತ್ತಿರ ತರುವ, ನಮಗೆ ಆತ್ಮೀಯನನ್ನಾಗಿ ಮಾಡುವ ಗುಣ. ಅಂದಿನ ಕಾಲದಲ್ಲಿ ಬಹುವಾದ ಪ್ರೀತಿಗೆ, ಅಷ್ಟೇ ಅಸಹನೆಗೂ ಗುರಿಯಾಗಿದ್ದ ವ್ಯಕ್ತಿ ಅವನು. ಆ ಕಾಲದ ಸಂಪ್ರದಾಯವಾದಿಗಳ ಪ್ರಕಾರ ಅವನೊಬ್ಬ ಸನಾತನ ಧರ್ಮ ಧ್ವಂಸಕ; ಆದರೆ ಆ ಧರ್ಮವನ್ನು ಅದರ ಸರಿಯಾದ ವೇದಿಕೆಯ ಮೇಲೆ ನಿಲ್ಲಿಸಿ ಗೌರವಿಸಿದ ವ್ಯಕ್ತಿ ಆತ ಎಂದು ವಿವೇಕಿಗಳು ಗುರುತಿಸಿದ್ದರು.

ಅವನು ನಾಯಕತ್ವ ವಹಿಸಿದ ಸಾಮಾಜಿಕ ಆಂದೋಲನ ಹನ್ನೆರಡನೆಯ ಶತಮಾನದ ಪೂರ್ವಾರ್ಧದಲ್ಲಿ ಆರಂಭವಾಗಿ ತೀವ್ರಗೊಳ್ಳಲು ಯಾವ ಸಾಮಾಜಿಕ ಶಕ್ತಿಗಳು ಪ್ರೇರಕವಾದುವು ಎಂಬ ಬಗ್ಗೆ ನಮಗಿರುವ ಅರಿವು ಇನ್ನೂ ಸಾಲದು. ಯಾವುದೇ ಆಂದೋಲನ ಇದ್ದಕ್ಕಿದ್ದಂತೆ ಆರಂಭವಾಗುವುದಿಲ್ಲ, ಒಂದು ಆಕಸ್ಮಿಕ ಘಟನೆಯೆಂಬಂತೆ ಇದ್ದಕ್ಕಿದ್ದಂತೆ ಸ್ಫೋಟಿಸುವುದಿಲ್ಲ. ಒಂದು ಆಂದೋಲನವು ಇದ್ದಕ್ಕಿದ್ದಂತೆ ಒಂದು ಸಮಾಜದ ದಿಗಂತದಲ್ಲಿ ಗೋಚರವಾಗಬಹುದು; ಆದರೆ ಅದರ ಉಗಮಕ್ಕೆ ಒಂದು ಕಾರಣ, ಒಂದು ಗುಪ್ತ ಬೆಳವಣಿಗೆಯ ಚರಿತ್ರೆ ಇರುತ್ತದೆ. ಸಾಮಾನ್ಯವಾಗಿ ಒಂದು ಜನತೆಯ ಅನೇಕ ವರ್ಷಗಳ ಅದುಮಿಟ್ಟ ತೀವ್ರ ಅತೃಪ್ತಿ ಹಾಗೇ ಒಳಗೇ ಬೆಳೆದು ಎಂದೋ ಒಂದು ದಿನ ಆ ಅತೃಪ್ತಿಯು ಪ್ರತಿಭಟನೆಯ ರೂಪದಲ್ಲಿ ವ್ಯವಸ್ಥಿತವಾಗಿ ವ್ಯಕ್ತವಾದಾಗ ಅದು ಒಂದು ಆಂದೋಲನದ ಆರಂಭ ಎನ್ನಬಹುದು. ಎಂದರೆ ಯಾವುದೇ ಆಂದೋಲನದ ಬೀಜಗಳು ಬಹು ಹಿಂದೆಯೇ ಬಿತ್ತಲ್ಪಟ್ಟಿರುತ್ತವೆ. ಹದಿಮೂರನೇ ಶತಮಾನದಲ್ಲಿ ದಾಖಲಾದ ಬಸವಪೂರ್ವಯುಗದ ಒಂದು ಘಟನೆಯು ಇಲ್ಲಿ ಉಲ್ಲೇಖಾರ್ಹ. ಆರನೆಯ ವಿಕ್ರಮಾದಿತ್ಯನು (1077–1127) ಕಲ್ಯಾಣ ಚಾಲುಕ್ಯರಲ್ಲಿ ಅತ್ಯಂತ ಪ್ರಖ್ಯಾತ ಮತ್ತು ಪ್ರಬಲ ಚಕ್ರವರ್ತಿ ಎನ್ನಿಸಿ ಕೊಂಡಿದ್ದ. ಯಾಜ್ಞವಲ್ಕ್ಯ ಸ್ಮೃತಿಯ ವ್ಯಾಖ್ಯಾತೃ ವಿಜ್ಞಾನೇಶ್ವರನು ತನ್ನ "ಮಿತಾಕ್ಷರಾ"ದಲ್ಲಿ ಈ ಹಿಂದೆ ವಿಶ್ವವು ವಿಕ್ರಮಾದಿತ್ಯನಂತಹ ಚಕ್ರವರ್ತಿಯನ್ನು,

ಕಲ್ಯಾಣದಂತಹ ನಗರವನ್ನು ಕಂಡಿರಲಿಲ್ಲವೆಂದು ಉದ್ಗರಿಸಿದ್ದಾನೆ. ಅವನು ಬಿಲ್ಹಣನಂತಹ ಬ್ರಾಹ್ಮಣ ವಿದ್ವಾಂಸರನ್ನು ಕಾಶ್ಮೀರದಿಂದ ಆಹ್ವಾನಿಸಿ ತನ್ನ ಆಸ್ಥಾನದಲ್ಲಿ ಆಶ್ರಯವನ್ನು ನೀಡಿದ್ದ. ವಿಕ್ರಮಾದಿತ್ಯನ ಕಾಲದ ಒಂದು ಘಟನೆ ಹೀಗಿದೆ : ಅವನ ಮಂತ್ರಿ ಕೊಂಡಗುಳಿ ಕೇಶಿರಾಜನು ಒಬ್ಬ ನಿಷ್ಠಾವಂತ ಶಿವಭಕ್ತನಾಗಿದ್ದು ಅವನು ಶಿವನಿಗಲ್ಲದೆ ಬೇರೆ ಯಾರಿಗೂ, ಚಕ್ರವರ್ತಿಗೂ ಬಾಗಿ ನಮಸ್ಕರಿಸುತ್ತಿರಲಿಲ್ಲ. ಅವನು ಆಸ್ಥಾನದಲ್ಲಿ ಬಾಗಿ ನಮಸ್ಕರಿಸುತ್ತಿದ್ದುದು ಚಕ್ರವರ್ತಿಗೆಂಬಂತೆ ಕಂಡರೂ ಅವನು ಹಾಗೆ ಬಾಗುತ್ತಿದ್ದುದು ತನ್ನ ಬೆರಳುಂಗುರದ ನಂದಿಗೆ, ಶಿವನ ವಾಹನಕ್ಕೆ. ಅದು ತಿಳಿದ ಚಕ್ರವರ್ತಿಯು ಆ ಬೆರಳುಂಗುರವನ್ನು ಅವನ ಕೈಯಿಂದ ತೆಗೆಯಿಸಿ ತನಗೆ ಬಾಗಲು ಒತ್ತಾಯಿಸಿದಾಗ ಕೇಶಿರಾಜನು ತನ್ನ ಮಂತ್ರಿ ಪದವಿಗೇ ರಾಜಿನಾಮೆ ನೀಡಿ ರಾಜಧಾನಿಯ ಹೊರಗೆ ಒಬ್ಬ ಶಿವಭಕ್ತ ದಲಿತನ ಜೊತೆ ('ಮಹಾ ಮಾಹೇಶ್ವರ', 'ಹಿರಿಯ ಭಕ್ತ') ವಾಸಿಸಲು ಮುಂದಾಗುತ್ತಾನೆ. ಎಂದರೆ ಹನ್ನೆರಡನೆಯ ಶತಮಾನದ ಆರಂಭದ ಹೊತ್ತಿಗೆ ಮನುಷ್ಯನ ಭೋಗ ಅಧಿಕಾರಗಳ ಬಗ್ಗೆ ತಿರಸ್ಕಾರವೂ ದಲಿತರಾಗಿದ್ದರೂ ಶಿವಭಕ್ತರ ವಿಷಯದಲ್ಲಿ ಗೌರವ ಭಾವನೆಯೂ ಸಮಯ ಬಂದರೆ ರಾಜನನ್ನೂ ಧಿಕ್ಕರಿಸುವ ಮನೋಭಾವವೂ ಸಮಾಜದಲ್ಲಿ ಕಾಣಿಸಿಕೊಂಡಿದ್ದುವು. ಅದೇ ಕಾಲದ ತೆಲುಗು ಜೊಮ್ಮಣ್ಣ ಎಂಬಾತ ಕೇಶಿರಾಜನಂತೆಯೇ ಚಕ್ರವರ್ತಿಗೆ ಬಾಗಲು ನಿರಾಕರಿಸಿದ. ಅದೇ ಕಾಲದ ಕೆಂಭಾವಿ ಭೋಗಣ್ಣನು ಅಸ್ಪೃಶ್ಯ ಶಿವಭಕ್ತನೊಬ್ಬನ ಮನೆಯಲ್ಲಿ ಊಟ ಮಾಡಿ ಇಡೀ ಊರಿನ ಬ್ರಾಹ್ಮಣ ಸಮೂಹದ ವಿರೋಧವನ್ನು ಕಟ್ಟಿಕೊಂಡಿದ್ದ.

ಬಸವನಿಗಿಂತ ಪೂರ್ವದ ಕೆಲವು ಶಿವಭಕ್ತರ ಬಗೆಗಿನ ಸಂತ ವೃತ್ತಾಂತವು (Hagiology) ಬಸವನ ಕಾಲವನ್ನು, ಅವನ ಆಂದೋಲನವನ್ನು ಅರ್ಥಮಾಡಿಕೊಳ್ಳಲು ಸಹಾಯಮಾಡುತ್ತದೆ.

1. ಬಸವಪೂರ್ವ ಯುಗದ ವೀರಶೈವ ಸಂತರೆಲ್ಲ, ಇಬ್ಬರು ಮೂವರನ್ನು ಬಿಟ್ಟರೆ ಉಳಿದವರೆಲ್ಲ ಹುಟ್ಟಿನಿಂದ ಶೂದ್ರರು. ಅವರಲ್ಲಿ ಒಬ್ಬ ನೇಕಾರ, ಒಬ್ಬ ಬೇಟೆಗಾರ, ಒಬ್ಬ ಬುಟ್ಟಿ ಮಾಡುವಾತ, ಒಬ್ಬ ಹರಿಜನ. ಹುಟ್ಟಿನಿಂದ ಬ್ರಾಹ್ಮಣನಾಗಿದ್ದ ಶಂಕರದಾಸಿಮಯ್ಯನು 'ಭಕ್ತಿ'ಗಾಗಿ ಬ್ರಾಹ್ಮಣ್ಯವನ್ನು ನಿರಾಕರಿಸುತ್ತಾನೆ.

2. ಅವರೆಲ್ಲ ಶಿವನ ಬಗ್ಗೆ ಏಕಾಗ್ರ ನಿಷ್ಠೆಯುಳ್ಳ ಭಕ್ತರು.

3. ಅವರು 'ಶಿವಭಕ್ತಿ', 'ರಾಜನಿಷ್ಠೆ' ಇವುಗಳ ಮಧ್ಯೆ ಆಯ್ಕೆ ಮಾಡಿಕೊಳ್ಳಬೇಕಾಗಿ ಬಂದಾಗ ಎರಡನೆಯದನ್ನು ತಿರಸ್ಕರಿಸಲು ಸಿದ್ಧರಾಗಿದ್ದರು. ರಾಜನ ಬಗ್ಗೆ ಅವರಿಗೆ ನಿಷ್ಠೆ ಇದ್ದಿತೇ ಹೊರತು, ಅವನ ಬಗ್ಗೆ 'ಭಕ್ತಿ' ಇರಲಿಲ್ಲ. ಎಂದರೆ, 'ರಾಜನಿಷ್ಠೆ'ಯು ಬೇರೆ, 'ಶಿವಭಕ್ತಿ'ಯು ಬೇರೆ.

ಮೊದಲನೆಯದು ವೃತ್ತಿಗೆ ಸಂಬಂಧಿಸಿದ್ದು; ಎರಡನೆಯದು ಅವರ ಪ್ರವೃತ್ತಿಗೆ, ಆತ್ಮಕ್ಕೆ ಸಂಬಂಧಿಸಿದ್ದು.

4. ಎಲ್ಲ ಸಂತರೂ ಯಾವುದೇ ಜಾತಿಯಲ್ಲಿ ಹುಟ್ಟಿರಲಿ ಸಮಾನರಾಗಿದ್ದರು. ಕರ್ಮಪ್ರಧಾನವಾಗಿದ್ದ ಬ್ರಾಹ್ಮಣ್ಯದ ಬಗ್ಗೆ ಸೂಕ್ಷ್ಮ ಅಸಡ್ಡೆ ಆಗಲೇ ವ್ಯಕ್ತವಾಗಿತ್ತು. ಅಲ್ಲಿ ಎಲ್ಲ ಕಡೆಗೂ ಉಜ್ವಲಗೊಂಡಿದ್ದಾತ ಬಡವನೆ, ಬಡ ಶಿವಭಕ್ತನೇ. ಕೆಲವು ಶಿವಭಕ್ತರು ಮಾಂಸಾಹಾರಿಗಳಾಗಿದ್ದರೂ ಸಸ್ಯಾಹಾರಿ ಶಿವಭಕ್ತರಿಗೆ ಅವರು ಉಪಾದೇಯರಾಗಿದ್ದರು. ಅಸ್ಪೃಶ್ಯ ಜಾತಿಯ ಶಿವಭಕ್ತರನ್ನು ಮನೆಗೆ ಕರೆದು ಗೌರವಿಸಿ ಅವರ ಜೊತೆ ಸಹಭೋಜನವನ್ನೂ ಮಾಡುತ್ತಿದ್ದರು.

ಮೇಲಿನ ಸಂಗತಿಗಳು ಒಂದು ಅಂಶವನ್ನು ಸ್ಪಷ್ಟಪಡಿಸುತ್ತವೆ – ಬಸವನು ನಾಯಕತ್ವ ವಹಿಸಿದ ಆಂದೋಲನದ ಬೇರುಗಳು ಅವನ ಹಿಂದಿನ ಕಾಲದ ಸಮಾಜದಲ್ಲಿ ದುರ್ಬಲ ಪ್ರಮಾಣದಲ್ಲಿಯಾದರೂ ಕಾಣಿಸಿಕೊಂಡಿದ್ದುವು. ಬಸವಪೂರ್ವ ಯುಗದಲ್ಲಾಗಲೇ ಜಾತಿವ್ಯವಸ್ಥೆಯ ಅನ್ಯಾಯಗಳ ವಿರುದ್ಧ, ರಾಜಪ್ರಭುತ್ವದ ವಿರುದ್ಧ ಬಹಿರಂಗ ಪ್ರತಿಭಟನೆಗಳು ಅಲ್ಲಲ್ಲಿ ಕಾಣಿಸಿದ್ದುವು – ಆ ಪ್ರತಿಭಟನೆಗಳು ಅವ್ಯವಸ್ಥಿತವೂ ದುರ್ಬಲವೂ ಆಗಿದ್ದುವು, ಮತ್ತು ಅವು ವ್ಯಕ್ತಿಗತ ನೆಲೆಯಲ್ಲಿ ನಡೆದಿದ್ದುವು.

ಮೇಲೆ ಸೂಚಿಸಿದ ಸಂತರೆಲ್ಲ ಚಾಲುಕ್ಯ ರಾಜರ ಕಾಲದವರು, ಕ್ರಿ.ಶ. 1040–1140ರ ಅವಧಿಯವರು. ಆ ಕಾಲದ ಶಾಸನಗಳನ್ನು ಗಮನಿಸಿದರೆ, ಬ್ರಾಹ್ಮಣರಿಗೆ ಉದಾರವಾಗಿ ಭೂದಾನಗಳು ಪ್ರಾಪ್ತವಾದುದು ಎದ್ದು ಕಾಣುತ್ತದೆ. ಹಿಂದಿಗಿಂತ ಹೆಚ್ಚಾಗಿ ರಾಜರು ಬ್ರಾಹ್ಮಣರಿಗೆ ಭೂಮಿಯನ್ನೂ ಹಳ್ಳಿಗಳನ್ನೂ ದಾನವಾಗಿ ಕೊಟ್ಟುದಲ್ಲದೆ ಅವರಿಗೆ ಆಡಳಿತದಲ್ಲಿ ಸೇನಾಪತಿ ಸ್ಥಾನವೂ ಸೇರಿದಂತೆ ಪ್ರಮುಖ ಅಧಿಕಾರಗಳನ್ನೂ ನೀಡಿದರು. ಜ್ಞಾನದಲ್ಲಿ ಅಧಿಕರಾಗಿದ್ದ ಬ್ರಾಹ್ಮಣರು ಆರ್ಥಿಕವಾಗಿಯೂ ಆಧಿಕಾರಿಕವಾಗಿಯೂ ಬಲಿಷ್ಠರಾದರು; ಭೂಮಿ ಒಡೆಯರೂ ಆದರು. ಇದು ಭೂಮಿಗೆ ಸಹಜವಾಗಿ ಒಡೆಯರಾಗಿದ್ದ ಕೆಳವರ್ಗದ ಜನರಲ್ಲಿ ತೀವ್ರ ಅಸಮಾಧಾನವನ್ನುಂಟುಮಾಡಿ ಬ್ರಾಹ್ಮಣ ವಿರೋಧಿ ಭಾವನೆ ಅವರಲ್ಲಿ ಮೂಡಲು ಸ್ವಲ್ಪ ಮಟ್ಟಿಗೆ ಕಾರಣವಾಯಿತು ಎಂದು ಹೇಳಲವಕಾಶವಿದೆಯಾದರೂ ಅದನ್ನು ಹೆಚ್ಚು ದೂರ ಎಳೆಯುವಂತಿಲ್ಲ. ಆದರೂ ಕೆಳವರ್ಗದ ಆರ್ಥಿಕ ಮೂಲದ ಈ ಸಾಧ್ಯ ಅಸಮಾಧಾನವು ಬಸವನ ಚಳವಳಿಗೆ ಸ್ವಲ್ಪ ಮಟ್ಟಿಗೆ ಪ್ರೇರಣೆ ನೀಡಿರಬಹುದು ಎಂಬ ಮೇಲಿನ ಸೂಚನೆ ಈಗ ನಮಗೆ ದೊರಕಿರುವ ಇನ್ನೂರ ಹದಿನಾರು ವಚನಕಾರರು (ಅವರ ಒಟ್ಟು ವಚನಗಳು 15,533) ಎಲ್ಲ ವರ್ಗಗಳಿಗೆ, ವಿಶೇಷವಾಗಿ ಕೆಳ ಮತ್ತು ತೀರ ಕೆಳ ವರ್ಗಕ್ಕೆ ಸೇರಿದವರು ಎಂಬುದು ಸ್ಪಷ್ಟ. (ಅದರ ವಿಶ್ಲೇಷಣೆಗೆ

ನೋಡಿ – ಎಂ. ಚಿದಾನಂದಮೂರ್ತಿ : ವಚನ ಶೋಧ–1, ಪು. 53–4.) ಚಾಲುಕ್ಯ ಸಾಮ್ರಾಜ್ಯದ ವೈಭವದ ಪರಾಕಾಷ್ಠೆಗೂ ಸಾಮಾನ್ಯರ ಪರವಾಗಿ ನಡೆದ ಶರಣ ಚಳವಳಿಗೂ ಪರೋಕ್ಷ ಸಂಬಂಧವಿರುವಂತಿದೆ. ಬಸವನ ಆಂದೋಲನ ಮುಖ್ಯವಾಗಿ ಬ್ರಾಹ್ಮಣೇತರ ವರ್ಗದ್ದು, ಅದರಲ್ಲೂ ಶೂದ್ರ ಮತ್ತು ದಲಿತವರ್ಗದ್ದು ಎಂಬುದು ಎದ್ದು ಕಾಣುವ ಸಂಗತಿ. ಆ ಆಂದೋಲನ ವ್ಯಕ್ತಿ ಕೇಂದ್ರಿತವಾದುದಲ್ಲ, ಒಂದು ಸಮೂಹ ಕೇಂದ್ರಿತವಾದುದು – ಆ ಸಮೂಹದ ಬಹು ಮುಖ್ಯಭಾಗ ಸಾಮಾನ್ಯರು.

ಬಸವನ ಬಗ್ಗೆ ಮಾತನಾಡುವುದೆಂದರೆ ಒಂದು ಯುಗವನ್ನು, ಒಂದು ದೊಡ್ಡ ಆಂದೋಲನವನ್ನು ಕುರಿತು ಮಾತನಾಡಿದಂತೆ. ಅಲ್ಲಮ ತನ್ನ ಒಂದು ವಚನದಲ್ಲಿ ಅವನ ಬಗ್ಗೆ ಹೀಗೆ ಹೇಳುತ್ತಾನೆ. (ಸಂ. : ಎಲ್. ಬಸವರಾಜು : ಶಿವಗಣಪ್ರಸಾದಿ ಮಹಾದೇವಯ್ಯನ ಶೂನ್ಯಸಂಪಾದನೆ, ಪು. 219.)

> "**ಯುಗದ ಉತ್ಸಾಹವ ನೋಡಿರೇ.** ಪಂಚ ಶಕ್ತಿಗಳಿಗೆ ಪಂಚ ಪ್ರಧಾನರು. ಅವರಾಗು ಹೋಗನಾ ಶರಣನೇ ಬಲ್ಲ. ಆ ಶರಣನು ತಾನು ತಾನಾಗಿ, ಆರು ದರುಶನಕ್ಕೆ ಯಾಚಕನಲ್ಲ, ಮೂರು ದರುಶನಕ್ಕೆ ಮುಯ್ಯಾನುವನಲ್ಲ. ವೇದ ಶಾಸ್ತ್ರಾಗಮ ಪುರಾಣ ಛಂದಸ್ಸು ನಿಘಂಟು ಗಳೆಂಬವಕ್ಕೆ ಭೇದಕನಲ್ಲ. ಅದೇಕೆಂದಡೆ, ಅವರಂಗದ ಮೇಲೆ ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ, ಪಾದೋದಕವಿಲ್ಲದ ಭಾಷೆ. ಆ ಗುರು ಲಿಂಗ ಜಂಗಮ ಪ್ರಸಾದ ಪಾದೋದಕವೇಕಾರ್ಥವಾದ ಕಾರಣ, ಪ್ರಾಣಿಗಳೆಲ್ಲವೂ ಪ್ರಣಮಂಗೆಯ್ವುತಿದ್ದವು. ಜೀವಿಗಳೆಲ್ಲವೂ ಜಯ ಜೀಯ ಎನ್ನುತ್ತಿದ್ದವು. ಆತ್ಮಂಗಳೆಲ್ಲವೂ ಅನುವ ಬೇಡುತ್ತಿದ್ದವು. ಗೋಗೇಶ್ವರ, ಸಂಗನ ಬಸವಣ್ಣನ ಪಾದಕ್ಕೆ ಈರೇಳು ಭುವನವೆಲ್ಲವೂ ಜಯ ಜಯ ಎನ್ನುತ್ತಿದ್ದವು."

ಬಸವ ಆ ಯುಗದ 'ಉತ್ಸಾಹ'ವೆಂಬ ಅಲ್ಲಮನ ಮಾತು ಬಸವನ ಬಗ್ಗೆ ಎಲ್ಲವನ್ನೂ ಹೇಳಿದಂತೆ. ಬಸವನ ಸಮಕಾಲೀನರಲ್ಲಿ ಹಲವರು ಬಸವನ ಬಗ್ಗೆ ಸಾಕಷ್ಟು ಕೊಂಡಾಡಿದ್ದರೂ ಯಾರಿಂದಲೂ ಅವನ ವ್ಯಕ್ತಿತ್ವವನ್ನೂ ಅವನು ಮಾಡಿದ ಕೆಲಸವನ್ನೂ ಮೇಲಿನ ಮಾತಿಗಿಂತ ಹೆಚ್ಚು ಪರಿಣಾಮಕಾರಿಯಾಗಿ ಸಂಕ್ಷಿಪ್ತವಾಗಿ ಹೇಳಲು ಸಾಧ್ಯವಾಗಿಲ್ಲ. ಇದು ಆಧುನಿಕರಾದ ನಮಗೂ ಅನ್ವಯಿಸಬಹುದು; ಬಸವನ ಬಗ್ಗೆ ಅಧ್ಯಯನ ಮಾಡಿರುವ ಆಧುನಿಕರೂ ಕೂಡ ಅದಕ್ಕಿಂತ ಚನ್ನಾಗಿ ಹೇಳಲು ಸಾಧ್ಯವಿಲ್ಲ. ಸಂಪ್ರದಾಯ ಜಡತೆಯಿಂದ ನಿಶ್ಚೇಷ್ಟಿತವಾಗಿದ್ದ ಒಂದು ಇಡೀ ಯುಗಕ್ಕೆ ಉತ್ಸಾಹರೂಪವಾಗಿ ಬಸವ ಕಾಣಿಸಿಕೊಂಡನೆಂಬಲ್ಲಿ ಉತ್ಪ್ರೇಕ್ಷೆಯಿಲ್ಲ; ಮೇಲೆ ಸೂಚಿಸಿದ ವಚನಕಾರರ ಸಂಖ್ಯೆಯೇ ಎಲ್ಲವನ್ನೂ ಹೇಳುತ್ತದೆ. ವಚನಗಳನ್ನು ಬರೆಯದಿದ್ದರೂ ಶ್ರೇಷ್ಠ ಜೀವನವನ್ನು ಬದುಕಿದ ಬಹು ಸಂಖ್ಯೆಯ ಶರಣ ಶರಣೆಯರ ಹೆಸರುಗಳು ದೊರಕುತ್ತವೆ. ಅಲ್ಲಮನ ಮಾತನ್ನೇ ಪುನರುಚ್ಚರಿಸುವುದಾದರೆ ಬಸವ ಆ ಕಾಲದ, ಯುಗದ, ಯುಗದ ಉತ್ಸಾಹದ ಸಂಕೇತ.

ಅವನ ಜೀವನ ಚರಿತ್ರೆಯ ಪುನಾರಚನೆಗೆ ಅನೇಕ ಐತಿಹಾಸಿಕ ವ್ಯಕ್ತಿಗಳ ವಿಷಯದಲ್ಲಿ ನಿಜವಾಗಿರುವಂತೆ, ಹೆಚ್ಚಿನ ಸಾಮಗ್ರಿ ದೊರಕುವುದಿಲ್ಲ. ಅವನ ಬಗ್ಗೆ ಅರೆ ಐತಿಹಾಸಿಕ, ಅರೆ ಪೌರಾಣಿಕ ನಿರೂಪಣೆಗಳು, ಕೆಲವೊಮ್ಮೆ ಪರಸ್ಪರ ವಿರೋಧ ಚಿತ್ರವನ್ನು ಮೂಡಿಸುವಂತಹ ಸಂಗತಿಗಳು ದೊರಕುತ್ತವೆ. ವೀರಶೈವ ಆಕರಗಳು ಅವನೊಬ್ಬ ಮಹಾಪುರುಷನೆಂಬಂತಹ ಚಿತ್ರವನ್ನು ಮೂಡಿಸಿದರೆ, ಜೈನ ಆಕರಗಳು ಚಕ್ರವರ್ತಿಯ ಖಜಾನೆಯನ್ನು ತನ್ನವರಿಗೆ ತೆರೆದಿಟ್ಟ ಒಬ್ಬ ಖಳನೆಂಬಂತಹ ಚಿತ್ರವನ್ನು ಕೊಡುತ್ತವೆ. ಇನ್ನು ಅವನ ಕಾಲದ ಹದಿನೈದು ಸಾವಿರಕ್ಕೆ ಮೇಲ್ಪಟ್ಟು ವಚನಗಳು ನಮಗೆ ದೊರಕುತ್ತವೆ. ಆ ಎಲ್ಲ ಆಕರಗಳನ್ನು ಮತ್ತು ಅವನ ಕಾಲದ ಶಾಸನಗಳನ್ನು ಎಚ್ಚರಿಕೆಯಿಂದ ಅಧ್ಯಯನ ಮಾಡಿದರೆ ಅವನ ಜೀವನ ಚರಿತ್ರೆಯ ಒಂದು ಸ್ಥೂಲ ರೇಖಾಚಿತ್ರವನ್ನು ಮೂಡಿಸಲು ಸಾಧ್ಯವಾಗುತ್ತದೆ. ಬಸವಣ್ಣನ ಜನ್ಮದಿನಾಂಕ ಮತ್ತು ಲಿಂಗೈಕ್ಯ ದಿನಾಂಕಗಳು ನಮಗೆ ತಿಳಿಯದು. ಅವನು ಕ್ರಿ.ಶ. 1167–8ರಲ್ಲಿ ಲಿಂಗೈಕ್ಯನಾದನೆಂದು ಹಿಂದೆ ನಂಬಿದ್ದು, ಈಗ ಆ ತೇದಿಯನ್ನು ಸುಮಾರು ಕ್ರಿ.ಶ. 1183–4ರ ವರೆಗೆ ತರಬೇಕೆಂದು ಭಾವಿಸುತ್ತಿದ್ದಾರೆ. ಸಾಂಪ್ರದಾಯಕ ವೈದಿಕ ಶಿಕ್ಷಣದ ಕೇಂದ್ರವಾಗಿದ್ದ ಅಗ್ರಹಾರವೊಂದರ ಬ್ರಾಹ್ಮಣ ಪ್ರಮುಖನೊಬ್ಬನ ಮಗನಾಗಿ ಜನಿಸಿದ ಅವನು ಬ್ರಾಹ್ಮಣ್ಯವು 'ಭಕ್ತಿ'ಗಿಂತ 'ಕರ್ಮ'ಕ್ಕೆ ಪ್ರಾಮುಖ್ಯ ನೀಡುವುದೆಂದು, ಕೆಲವರ ಪ್ರಕಾರ ಎಂಟನೆಯ ವರ್ಷದಲ್ಲಿಯೇ ಉಪನಯನವನ್ನು ತಿರಸ್ಕರಿಸಿದ; ಇನ್ನು ಕೆಲವರ ಪ್ರಕಾರ ಹದಿನಾರನೆಯ ವರ್ಷದಲ್ಲಿ ಒಲ್ಲದ ಮನಸ್ಸಿನಿಂದ ಉಪನಯನವನ್ನು ಸ್ವೀಕರಿಸಿ, ತಂದೆ ತಾಯಿಗಳು ಆ ಬಳಿಕ ತನ್ನನ್ನು ಸಾಕುತ್ತಿದ್ದ ಅಜ್ಜಿ ಇವರೆಲ್ಲ ಕಣ್ಮುಚ್ಚಿದ ಮೇಲೆ ಮೈಮೇಲೆ ಧರಿಸಿದ್ದ ಜನ್ನಿವಾರವನ್ನು ಕಿತ್ತೆಸೆದು ಅಗ್ರಹಾರದಿಂದ ಹೊರಬಂದ. ಮುಂದೆ ಏನಾಯ್ತು ಎಂಬುದರ ಚಿತ್ರವನ್ನು ಸ್ಥೂಲವಾಗಿ ಹೀಗೆ ಕೊಡಬಹುದು. ಬಾಗೇವಾಡಿ ಅಗ್ರಹಾರದಿಂದ ಹೊರ ಬಂದ ಅವನು ಕೂಡಲಸಂಗಮ ಕ್ಷೇತ್ರಕ್ಕೆ ಹೋಗಿ ಅಲ್ಲಿನ ಸಂಗಮೇಶ್ವರ ದೇವರ ಭಕ್ತನಾದ. ಅಲ್ಲೇ ಅವನು ಕಪ್ಪಡಿ ಸಂಗಯ್ಯನಿಂದ ಭಕ್ತಿ ಪ್ರಾಧಾನ್ಯದ ಶೈವ ದೀಕ್ಷೆಯನ್ನು ಪಡೆದು ಇಷ್ಟಲಿಂಗವನ್ನು ಧರಿಸಿದನು. ಅವನು ಸ್ವೀಕರಿಸಿದ ಶೈವಧರ್ಮವು ಬಹುಶಃ ವೀರಶೈವದಿಂದ ತೀರ ಭಿನ್ನವಾಗಿರಲಿಲ್ಲ. ಕೂಡಲ ಸಂಗಮದಿಂದ ಮಂಗಳವೇಡೆಗೆ ಹೋದ ಬಸವನು ಅಲ್ಲಿ ಮಹಾಮಂಡಳೇಶ್ವರನಾಗಿದ್ದ ಬಿಜ್ಜಳನ ಬಳಿ ಭಂಡಾರಿಯಾಗಿ ಸೇರಿಕೊಂಡ. ಕ್ರಿ.ಶ. 1162ರಲ್ಲಿ ಅದೇ ಬಿಜ್ಜಳನು ಚಾಳುಕ್ಯ ಚಕ್ರವರ್ತಿ ಮೂರನೆಯ ತೈಲನನ್ನು ಕೊಂದು ತನ್ನನ್ನು ತಾನು ಚಕ್ರವರ್ತಿಯೆಂದು ಘೋಷಿಸಿಕೊಂಡು ತನ್ನ ರಾಜಧಾನಿಯನ್ನು ಕಲ್ಯಾಣಕ್ಕೆ ಸ್ಥಳಾಂತರಿಸಿದಾಗ ಬಸವನೂ ಕಲ್ಯಾಣಕ್ಕೆ ಚಕ್ರವರ್ತಿಯ ಭಂಡಾರಿಯಾಗಿ ಹೋದ. ಸಾಮಂತನ ಭಂಡಾರಿಯಾಗಿದ್ದವನು ಚಕ್ರವರ್ತಿಯ ಭಂಡಾರಿಯಾದ. ಅಲ್ಲಿ ಅವನ ತಂಗಿಯ ಮಗ ಚನ್ನಬಸವನಿಂದ ವೀರಶೈವಧರ್ಮದ ಪರಿಚಯ ಆಯ್ತು. ಅವನು ತನ್ನ ಇಷ್ಟಲಿಂಗಕ್ಕೆ ಮಾಡುತ್ತಿದ್ದ ಸ್ವಲ್ಪ ಶಾಸ್ತ್ರೋಕ್ತವೆನ್ನಬಹುದಾದ ಶೈವ

ಪೂಜಾವಿಧಿಗಳನ್ನು ಕೈಬಿಟ್ಟು ವೀರಶೈವ ಪೂಜಾವಿಧಾನಗಳನ್ನು ಸ್ವೀಕರಿಸಿದ. ಆ ವೀರಶೈವ ಪೂಜಾವಿಧಾನವು ತೀರ ಸರಳವೂ ಭಕ್ತಿ ಪ್ರಧಾನವೂ ಆಗಿತ್ತು. ವೀರಶೈವವು ಅವನು ಕೈಗೊಂಡಿದ್ದ ಧಾಮಿಕ ಆಂದೋಲನದ ಎಲ್ಲ ಪ್ರಗತಿಪರ ಬೀಜಗಳನ್ನೂ ತನ್ನಲ್ಲಿ ಹುದುಗಿಸಿಕೊಂಡಿತ್ತು. ವೀರಶೈವ ಧರ್ಮದ ಪ್ರಕಾರ, ಭಕ್ತಿಯೇ ನಿಜವಾದ ಲಿಂಗಪೂಜೆಯಾಗಿತ್ತು; ಮತ್ತು ಅದು ಜಾತಿ ಭೇದವನ್ನು ಸಂಪೂರ್ಣವಾಗಿ ನಿರಾಕರಿಸಿತ್ತು. ಶಿವಭಕ್ತರಲ್ಲಿ ಜಾತಿಭೇದವನ್ನು ಎಣಿಸಬಾರದೆಂಬುದು ವೀರಶೈವ ಧರ್ಮದ ಪ್ರಮುಖ ತತ್ವವಾಗಿತ್ತು.

ಆ ಕಾಲಕ್ಕೆ ಕಲ್ಯಾಣವು ರಾಜಕೀಯ ಆರ್ಥಿಕ ಸಾಂಸ್ಕೃತಿಕ ಚಟುವಟಿಕೆಗಳ ಬಹು ದೊಡ್ಡ ಕೇಂದ್ರವಾಗಿದ್ದುದು ಬಸವನ ಸಾಮಾಜಿಕ ಚಟುವಟಿಕೆಗಳಿಗೆ ಸಹಜ ವಾಗಿಯೇ ಅನುಕೂಲಕರವಾಗಿ ಪರಿಣಮಿಸಿತು. ಅಕ್ರಮ ರಾಜನಾಗಿದ್ದ ಬಿಜ್ಜಳನು ತನ್ನ ಕ್ರೂರ ಕೃತ್ಯದಿಂದಾಗಿ ಪ್ರಜೆಗಳ ಕೋಪಕ್ಕೆ ಈಡಾಗಿದ್ದುದು ಬಸವನ ಆಂದೋಲನಕ್ಕೆ ಒಂದು ರೀತಿ ಸಹಾಯಕವೂ ಆಯಿತು. ಸನಾತನ ಧರ್ಮವಿರೋಧಿ ಎಂದು ಕೆಲವರು ಭಾವಿಸಿದ್ದ ಬಸವನ ಕೆಲವು ಚಟುವಟಿಕೆಗಳು ಬ್ರಾಹ್ಮಣರನ್ನು ತೀವ್ರ ರೊಚ್ಚಿಗೇಳಿಸಿದರೂ ಬಸವನ ವಿರುದ್ಧ ಮೊದಲೇ ರಾಜಕೀಯವಾಗಿ ದುರ್ಬಲನಾಗಿದ್ದ ಬಿಜ್ಜಳ ಯಾವುದೇ ತೀವ್ರ ಕ್ರಮ ಕೈಗೊಳ್ಳಲು ಹಿಂಜರಿಯಬೇಕಾಯ್ತು. (ರಾಜಕೀಯ ದೃಢತೆಯಿದ್ದು ಆಡಳಿತದ ಮೇಲೆ ಸಂಪೂರ್ಣ ಹತೋಟಿಯಿದ್ದ ಆರನೆಯ ವಿಕ್ರಮಾದಿತ್ಯನು ಕೊಂಡಗುಳಿ ಕೇಶಿರಾಜನನ್ನು ಕೆಲಸದಿಂದ ತೆಗೆದುಹಾಕಿದ್ದನ್ನು ಇಲ್ಲಿ ಸ್ಮರಿಸಬಹುದು.)

ಬಸವನ ಆಂದೋಲನಕ್ಕೆ ನೇತ್ಯಾತ್ಮಕವಾಗಿ ಸಹಾಯಕವಾದುದು ಮೇಲಿನ ಅಂಶ : ಅದಕ್ಕೆ ಸಹಾಯಕವಾದ ಸಕಾರಾತ್ಮಕ ಅಂಶವೆಂದರೆ ಸಂಪೂರ್ಣವಾಗಿ ಬಸವ ಮತ್ತು ಅವನ ವ್ಯಕ್ತಿತ್ವವೇ. ಆಲಿವರ್ ಸಿ. ಕಾಕ್ಸ್ ಎಂಬ ಅಮೆರಿಕದ ಸಮಾಜ ಶಾಸ್ತ್ರಜ್ಞ ಸರಿಯಾಗಿ ಗಮನಿಸಿರುವಂತೆ, ಅಮೆರಿಕದ ಕಪ್ಪು ಜನರಾದ ನೀಗ್ರೋಗಳನ್ನು ಬಿಳಿಯರ ಶೋಷಣೆಯಿಂದ ಪಾರುಮಾಡಲು ಏಬ್ರಹಾಂ ಲಿಂಕನ್ನನಂತಹ ಬಿಳಿಯನೇ ಬರುವುದು ಐತಿಹಾಸಿಕ ಅನಿವಾರ್ಯ. ಅದೇ ರೀತಿ, ರಾಜರ ಕ್ರೌರ್ಯದಿಂದ ಬ್ರಾಹ್ಮಣವರ್ಗದ ಶೋಷಣೆಯಿಂದ ಕೆಳವರ್ಗದ ಜನರನ್ನು ಮುಕ್ತರನ್ನಾಗಿ ಮಾಡು ವಂತಹ ಆಂದೋಲನದ ನಾಯಕನೊಬ್ಬ ಬಸವನಂತೆ ಶ್ರೀಮಂತ ಬ್ರಾಹ್ಮಣ ಸಮಾಜ ದಿಂದಲೇ ಮೂಡಿ ಬಂದಿರುವುದು ಸ್ವಾಭಾವಿಕವಾಗಿರುವಂತೆ ಬಹುಶಃ ಅನಿವಾರ್ಯವೂ ಹೌದು. ತನ್ನ ಬದುಕಿನುದ್ದಕ್ಕೂ ಬಡವರ ಜೊತೆ ಅಬ್ರಾಹ್ಮಣರ ಜೊತೆ ತನ್ನನ್ನು ತಾನು ಸಮೀಕರಿಸಿಕೊಳ್ಳಲು ಯತ್ನಿಸಿದ ಬಸವಣ್ಣ ಅಂದಿನ ಆಂದೋಲನದ ನಾಯಕ ನಾಗಲು ಕೇಂದ್ರ ವ್ಯಕ್ತಿಯಾಗಲು ಅವನು ಎಷ್ಟು ಕಾರಣವೋ ಅಷ್ಟೇ ಅವನ (ಭಂಡಾರಿ) ಸ್ಥಾನವೂ, ಅವನ (ಬ್ರಾಹ್ಮಣ) ಜಾತಿಯೂ ಕಾರಣವೆಂಬುದು ಸತ್ಯಕ್ಕೆ

ದೂರವಲ್ಲದ ಸಂಗತಿ. ಅವನು ಬಹುದೊಡ್ಡ ಮಾನವತಾವಾದಿ. ಜನರನ್ನು ಅವನು ಪ್ರೀತಿಸಿದ. ಅವರು ತನ್ನ ಸುತ್ತ ಸದಾ ಮುತ್ತಿಗೊಂಡಿರುವಲ್ಲಿ ಅವನಿಗೆ ಸಂತೋಷ ವಿತ್ತು. ಅವನು ಒಬ್ಬ ಒಳಜಾಗೃತ ವ್ಯಕ್ತಿಯಾಗಿದ್ದು ತನ್ನನ್ನು ತಾನು ಅಂತರಂಗ ವೀಕ್ಷಣೆ ಮಾಡಿಕೊಳ್ಳುತ್ತ ಆತ್ಮಶುದ್ಧನಾಗಿದ್ದ ವಿರಳ ಚೇತನ. ತನ್ನ ಸಹಚರರೊಂದಿಗೆ ಮುಚ್ಚಿಟ್ಟುಕೊಳ್ಳುವುದು ಅವನ ಬಳಿ ಏನೂ ಇರಲಿಲ್ಲ. ಅವನು ಅಸ್ಪೃಶ್ಯರ ಮನೆಗಳಿಗೆ ನಿರಾತಂಕವಾಗಿ ಹೋಗಿ ಅವರ ಜೊತೆ ಬೆರೆತ. ಬಸವ ಮತ್ತು ಅವನ ಅನುಯಾಯಿ ಗಳು ಎಂತಹ ಸಾಮಾಜಿಕ ಬದಲಾವಣೆಗೆ ಯತ್ನಿಸಿದರು, ಅದರ ಸಾಫಲ್ಯ ವೈಫಲ್ಯಗಳೇನು ಎಂಬ ಚರ್ಚೆಯು ಈ ಗೋಷ್ಠಿಯಲ್ಲಿ ನಡೆಯಲಿದೆಯಾದರೂ ಆ ಆಂದೋಲನವು ಅಸ್ಪೃಶ್ಯ ವರ್ಗದ ಮೇಲೆ ಬೀರಿದ ಪರಿಣಾಮವನ್ನು ಸೂಕ್ಷ್ಮವಾಗಿ ನಿಮ್ಮ ಗಮನಕ್ಕೆ ತರಲು ಬಯಸುತ್ತೇನೆ. ಅಸ್ಪೃಶ್ಯರು ಸಾಮಾನ್ಯವಾಗಿ ನಗರದೊಳಕ್ಕೆ ಬರುವಂತಿರಲಿಲ್ಲ; ಬೀದಿಗಳನ್ನು ಗುಡಿಸುವಂತಹ ಕೆಲಸಗಳಿಗೆ ಅವರು ಪ್ರವೇಶ ಮಾಡಬೇಕಾಗಿ ಬಂದಾಗ ಜನರು ತಮ್ಮಿಂದ ದೂರವಿರಲಿ ಎಂದು "ಸಂಬೋಳಿ ಸಂಬೋಳಿ" ಎಂದು ಕೂಗಬೇಕಾಗಿತ್ತು. ಕಲ್ಯಾಣದಲ್ಲಿ ಸಂಬೋಳಿ ನಾಗಿದೇವನೆಂದೇ ಕರೆಯಿಸಿಕೊಳ್ಳುತ್ತಿದ್ದ ಶಿವನಾಗಿಮಯ್ಯನೆಂಬ ವ್ಯಕ್ತಿ ಇದ್ದ. ಊರ ಹೊರಗಿದ್ದ ಅವನ ಮನೆಗೆ ಬಸವ ಹೋಗಿ ಅವನ ಮನೆಯಲ್ಲಿ ತನ್ನ ಪೂಜೆ ಭೋಜನಗಳನ್ನು ನೆರವೇರಿಸಿದನೆಂದು ಕಲ್ಯಾಣದ ಬ್ರಾಹ್ಮಣರು ಚಕ್ರವರ್ತಿಗೆ ದೂರು ಸಲ್ಲಿಸಿ, ಅಂತಹ ಬಸವನು ಪ್ರವೇಶಿಸುವ ರಾಜಾಸ್ಥಾನವು ಅಪವಿತ್ರಗೊಳ್ಳುತ್ತದೆಯೆಂದೂ ಬೆದರಿಸಿದ್ದರು. ಬಸವನಿಂದಾಗಿ ನಾಗಿದೇವನು "ಸಂಬೋಳಿ" ಎಂದು ಕೂಗುವುದನ್ನೇ ನಿಲ್ಲಿಸಿರುವ ನೆಂದು ಅವರ ಇನ್ನೊಂದು ಆರೋಪ. ನಮಗೆ ಈ ಎರಡನೆಯ ಆರೋಪ ಬಹು ಮುಖ್ಯ ಸಂಗತಿಯೊಂದನ್ನು ಧ್ವನಿಸುತ್ತದೆ. ಬಸವನ ಸಂಪರ್ಕದಿಂದಾಗಿ, ಅವನು ಕೊಟ್ಟ ಬೆಂಬಲದಿಂದಾಗಿ, ಅಂದಿನ ಆಂದೋಲನದ ಪರಿಣಾಮದಿಂದಾಗಿ ದಲಿತರು ಪೇಟೆ ಬೀದಿಗಳಲ್ಲಿ ತಮ್ಮ ಬರವನ್ನು ಸೂಚಿಸುವ ಕೂಗನ್ನು ನಿಲ್ಲಿಸಿದ್ದರು. ಅದು ಅವರಲ್ಲಿ ಹೊಸದಾಗಿ ಮೂಡಿದ್ದ ಆತ್ಮಾಭಿಮಾನದ ಸಂಕೇತವಾಗಿತ್ತು; ಅನೇಕ ಶತಮಾನಗಳಿಂದ ಬೆಳೆದುಕೊಂಡು ಬಂದಿದ್ದ ಅಪಮಾನಕರ ಪದ್ಧತಿಯೊಂದನ್ನು ದಲಿತ ವರ್ಗವು ಧೈರ್ಯದಿಂದ ತಿರಸ್ಕರಿಸಿತ್ತು.

ಅಸ್ಪೃಶ್ಯ ಜಾತಿಯಿಂದ ಬಂದಿದ್ದ ದಲಿತರನ್ನು ಬಸವಣ್ಣನ ಆಂದೋಲನವು 'ಹಿರಿಯ ಮಾಹೇಶ್ವರ'ರೆಂದು, 'ಹಿರಿಯ ಕುಲ'ದವರೆಂದು ಕರೆಯುತ್ತಿದ್ದುದು ಅತ್ಯಂತ ಗಮನಾರ್ಹ ಸಂಗತಿ. 'ಮಾಹೇಶ್ವರ' ಎಂದರೆ ಶಿವನ ಅನುಯಾಯಿ, ಶಿವಭಕ್ತ, ವೀರಶೈವ. ಮೇಲ್ವರ್ಗದ ವೀರಶೈವರು 'ಮಾಹೇಶ್ವರ'ರಾದರೆ, ದಲಿತವರ್ಗದಿಂದ ಬಂದ ವೀರಶೈವರು 'ಹಿರಿಯ ಮಾಹೇಶ್ವರ'ರು. ಇದರ ಹಿಂದಿನ ಮನೋವಿಜ್ಞಾನ ಸ್ಪಷ್ಟವಿದೆ. ಕೆಳವರ್ಗದ ವೀರಶೈವರನ್ನು ಉಳಿದವರಿಗಿಂತ ಕಡಮೆಯಾಗಿ ಕಾಣುವ ಕೆಲವು ವೀರಶೈವರೂ ಆ ಕಾಲದಲ್ಲಿದ್ದಿರಬೇಕು. ಅಂತಹ ಮನೋಭಾವವನ್ನು

ತೊಲಗಿಸಬೇಕಾದರೆ, ಕೆಳವರ್ಗದ ವೀರಶೈವರು ಉಳಿದವರ ಸಮಾನರು ಮಾತ್ರವಲ್ಲ, ಉಳಿದವರಿಗಿಂತ ಶ್ರೇಷ್ಠರು ಎಂದು ಹೇಳುವುದು ಅಗತ್ಯವಾಗಿತ್ತು. ಶ್ರೀ ರಾಮಾನುಜರು ದಲಿತವರ್ಗದವರನ್ನು "ತಿರುಕುಲತ್ತಾರ್" (=ಶ್ರೀ ಕುಲದವರು) ಎಂದು, ಗಾಂಧೀಜಿಯವರು "ಹರಿಜನ"ರೆಂದು ಕರೆದಿರುವುದನ್ನು ಮೇಲಿನ ಮಾತು ನೆನಪಿಗೆ ತರುತ್ತದೆ. ಅಕ್ಕನಾಗಮ್ಮನ ಒಂದು ವಚನ ಹೀಗಿದೆ –

**ಚಾಂಡಾಲನಾದಡೆಯೂ ಶಿವಭಕ್ತನೇ ಕುಲಜನು**
ಆತನೊಡನೆ ನುಡಿಗಡಣವ ಮಾಡಬೇಕೆಂದುದು ವೇದ
ಕುಲವ ನೋಡಲು ಬೇಡ, ಛಲವ ನೋಡಲು ಬೇಡ
**ಆತನೆಲ್ಲರಿಗೂ ಹಿರಿಯನು.**
ಆತನಿರುವಲ್ಲಿ ಶಿವನಿರುತ್ತಿಹನೆಂದು ವೇದ ನುಡಿಯುತ್ತಿದೆ
"ಅಪಿ ವಾ ಯಶ್ಚ ಚಾಂಡಾಲಃ ಶಿವೇತಿ ವಾಕ್ಯಮವದತ್ತೇನ
ಸಹ ಸಂವಸತ್ತೇನ ಸಹ ಸಂವಸತ್ತೇನ ಸಹ ಭುಂಜೀತ"
ಹೀಗೆಂದು ಉಪನಿಷತ್ತು ನುಡಿಯುತ್ತಿದೆ
ಶಿವನೇ, ನಿಮ್ಮ ಸದ್ಭಕ್ತರನು ಅವರಿವರೆಂದು ಕುಲವನೆತ್ತಿ ನುಡಿವಂಗೆ
ಇಪ್ಪತ್ತೆಂಟು ಕೋಟಿ ನರಕ ತಪ್ಪದು ನೋಡಯ್ಯ
ಬಸವಪ್ರಿಯ ಕೂಡಲ ಚನ್ನಸಂಗಮದೇವ.

ದಲಿತವರ್ಗದಿಂದ ಮೂಡಿ ಬಂದ ಶಿವಭಕ್ತರ ಬಗ್ಗೆ ಅಂದಿನ ಸಮಾಜ ತೋರಿದ ಧೋರಣೆಗೆ ಮೇಲಿನ ವಚನ ಸಾಕ್ಷಿಯಾಗಿದೆ.

ಜಾತಿ ವ್ಯವಸ್ಥೆಯಲ್ಲಿನ ಮೇಲು ಕೀಳು ಭಾವನೆಯನ್ನು ನಿವಾರಿಸಲು ಕೆಳಗಿನ ಅಂಶಗಳಿಗೆ ವಿಶೇಷ ಗಮನ ಕೊಡಲಾಯ್ತು.

1. ಅನೇಕ ರೀತಿಯ ತರ್ಕಗಳನ್ನು ಮುಂದಿಟ್ಟು ವರ್ಣ ವ್ಯವಸ್ಥೆಯಲ್ಲಿ ಬ್ರಾಹ್ಮಣನೇ ಎಲ್ಲರಿಗಿಂತ ಉತ್ಕೃಷ್ಟನೆಂಬ ವಾದವನ್ನು ನಿರಾಕರಿಸಲಾಯ್ತು. ಕೆಲವರಂತೂ ಬ್ರಾಹ್ಮಣನನ್ನು ಅಮೌಲ್ಯಗೊಳಿಸಿದ್ದಾರೆ. ಡ್ಯುಮಾಂಟನ ಮಾತು ಇಲ್ಲಿ ನೆನಪಿಗೆ ಬರುತ್ತದೆ – "ವಿಶೇಷವಾಗಿ ಬ್ರಾಹ್ಮಣ್ಯದ ಪಾವಿತ್ರ್ಯವನ್ನು ಮೂಲಭೂತವಾಗಿ ಅಮೌಲ್ಯೀಕರಿಸದೆ ಅಸ್ಪೃಶ್ಯತೆಯು ನಿಜವಾಗಿ ಮರೆಯಾಗದು" ("Homo Hierarchicus" ಗ್ರಂಥದಲ್ಲಿ).

2. ಎಲ್ಲ ಮನುಷ್ಯರೂ ಸಮಾನರು : ಯಾರೂ ತಮ್ಮ ತಾಯಿಯ ಕಿವಿಗಳಿಂದ ಮೂಡಿಬಂದವರಲ್ಲ. ಒಂದು ಕಲ್ಪನೆಯ ಪ್ರಕಾರ, ಜಮದಗ್ನಿಯ ಅಂಶದಿಂದ ರೇಣುಕೆ ಮತ್ತು ಮಾತಂಗಿಯರ

ಮೂಲಕ ಹುಟ್ಟಿ ಬಂದವರೇ ಬ್ರಾಹ್ಮಣರು ಮತ್ತು ಅಸ್ಪೃಶ್ಯರು. ಅರ್ಥಾತ್, ಬ್ರಾಹ್ಮಣರು ಮತ್ತು ಅಸ್ಪೃಶ್ಯರು ಹುಟ್ಟಿನಿಂದ ಸೋದರರು.

3. ಚೋಳ ಚಕ್ರವರ್ತಿಯ ಮನೆಯಲ್ಲಿ ಮೃಷ್ಟಾನ್ನ ಭೋಜನವನ್ನು ಸವಿಯುತ್ತಿದ್ದ ಶಿವನಿಗೆ ದಲಿತ ಶಿವಭಕ್ತ ಮಾದಾರ ಚನ್ನಯ್ಯನ ಮನೆಯ ಎಂಜಲು ಮಜ್ಜಿಗೆ ಹೆಚ್ಚು ಪ್ರಿಯವಾಯ್ತು. ಇಂತಹ ಕತೆಗಳು ಸಾಮಾನ್ಯ ಮನುಷ್ಯನ ಮೇಲೆ ತೀವ್ರ ಪ್ರಭಾವವುಂಟುಮಾಡಿದುವು.

4. ಒಬ್ಬ ಬ್ರಾಹ್ಮಣ ಮತ್ತು ಒಬ್ಬ ಅಸ್ಪೃಶ್ಯನನ್ನು ಅವರ ಹುಟ್ಟಿನಿಂದ ಗುರುತಿಸಬಾರದು. ಯಾವನೇ ಸದ್ವ್ಯಕ್ತಿಯನ್ನು ಬ್ರಾಹ್ಮಣನೆಂದು, ಯಾವನೇ ಕೆಟ್ಟ ವ್ಯಕ್ತಿಯನ್ನು ಅಸ್ಪೃಶ್ಯನೆಂದು ಕರೆಯಬಹುದು. ಎಲ್ಲರಿಗೂ ಒಳಿತನ್ನು ಬಯಸುವವನೇ ಶ್ರೇಷ್ಠ ಕುಲಜ ("ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಕೂಡಲಸಂಗನ ಶರಣರೇ ಕುಲಜರು").

ದಲಿತವರ್ಗದ ಅಸ್ಪೃಶ್ಯರು ವೀರಶೈವರಾಗಲು ಪ್ರೋತ್ಸಾಹಿಸಲಾಯ್ತು ಮಾತ್ರ ವಲ್ಲದೆ ಅವರಿಗೆ ಶಿಕ್ಷಣವನ್ನು ಕೊಡಲಾಯ್ತು. ನಮಗೆ ತಿಳಿದು ಬಂದಿರುವ ಇನ್ನೂರ ಹದಿನಾರು ವಚನಕಾರರಲ್ಲಿ ಒಬ್ಬ ಮಹಿಳೆಯೂ ಸೇರಿದಂತೆ ಕನಿಷ್ಠ ಹತ್ತು ಜನರು ದಲಿತವರ್ಗಕ್ಕೆ ಸೇರಿದವರು. ಉರಿಲಿಂಗಪೆದ್ದಿಯಂತಹ ಹುಟ್ಟಿನಿಂದ ಅಸ್ಪೃಶ್ಯ, ವೃತ್ತಿಯಿಂದ ಕಟ್ಟಿಗೆ ಮಾರುವಾತ, ಪ್ರವೃತ್ತಿಯಿಂದ ಕಳ್ಳನಾಗಿದ್ದ ಸಾಮಾನ್ಯನೊಬ್ಬನನ್ನು ಉರಿಲಿಂಗದೇವನು ಶಿಷ್ಯನನ್ನಾಗಿ ಸ್ವೀಕರಿಸಿ, ಶಿಕ್ಷಣವನ್ನು ಕೊಟ್ಟು ವಿದ್ವಾಂಸನನ್ನಾಗಿ ಮಾಡಿ ವಚನಕಾರನನ್ನಾಗಿ ಮಾಡಿ, ಕೊನೆಗೆ ತನ್ನ ಮಠದ ಉತ್ತರಾಧಿಕಾರಿತ್ವವನ್ನೂ ಬಿಟ್ಟುಕೊಟ್ಟಿದ್ದು ಭಾರತೀಯ ಸಾಮಾಜಿಕ ಧಾರ್ಮಿಕ ಚರಿತ್ರೆಯಲ್ಲೇ ಅಪೂರ್ವ ವಾದುದು. ಆ ಉರಿಲಿಂಗಪೆದ್ದಿಯ ಮಠಗಳು ಈಗಲೂ ಮೈಸೂರು ಬೀದರ್ ಜಿಲ್ಲೆಗಳಲ್ಲಿ ಜೀವಂತವಾಗಿವೆ. ಉರಿಲಿಂಗಪೆದ್ದಿಯು ಭಾರತದ ಮೊತ್ತಮೊದಲ ದಲಿತವರ್ಗದ ಮಠಾಧ್ಯಕ್ಷ ಹಾಗೂ ಅತಿಶ್ರೇಷ್ಠ ಸಂಸ್ಕೃತ ವಿದ್ವಾಂಸನಾಗಿದ್ದರೆ, ಅವನ ಪತ್ನಿ ಕಾಳವ್ವೆಯು ಭಾರತದ ಮೊತ್ತಮೊದಲ ದಲಿತವರ್ಗದ ಲೇಖಕಿಯಾಗುತ್ತಾಳೆ. ಅವರಿಬ್ಬರೂ ಬರೆದಿರುವ ಕನ್ನಡ ವಚನಗಳಲ್ಲಿ ಹತ್ತಾರು ಕೃತಿಗಳಿಂದ ನೂರಾರು ಸಂಸ್ಕೃತ ಉದ್ಧೃತಗಳು ಉಲ್ಲೇಖಗೊಂಡಿವೆ. ತಾವು ದಲಿತರಾಗಿ ಹುಟ್ಟಿ ಅನುಭವಿಸಿದ ಯಾತನೆಗಳನ್ನು ಅವರಿಬ್ಬರೂ ಮನಮುಟ್ಟುವಂತೆ ತಮ್ಮ ಕೃತಿಗಳಲ್ಲಿ ನಿವೇದಿಸಿ ಕೊಂಡಿದ್ದಾರೆ. ಅವರ ಕೃತಿಗಳಲ್ಲಿ ಕಾಣಬರುವ ಆತ್ಮವಿಶ್ವಾಸವು ಸಾಮಾನ್ಯವಾದುದಲ್ಲ.

ದಲಿತರ, ಅಸ್ಪೃಶ್ಯರ ವಿಷಯಗಳಲ್ಲಿ ಶರಣರು ಕೇವಲ ಉಪಚಾರದ ಮಾತುಗಳನ್ನು ಆಡಿ ಸುಮ್ಮನಾಗದೆ ಇನ್ನೂ ಒಂದು ಹೆಜ್ಜೆ ಮುಂದೆ ಹೋದರು.

ಅವರಿಗೂ ಮೇಲ್ಜಾತಿಯವರಿಗೂ ಅನಿರ್ಬಂಧಿತವಾಗಿ ಮದುವೆಗಳು ನಡೆಯ ಬೇಕೆಂದು ಪ್ರತಿಪಾದಿಸಿದರು. ಚನ್ನಬಸವಣ್ಣ ಹೇಳುತ್ತಾನೆ – "ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರ ಒಂದೆ ಎಂದು ಕೊಟ್ಟು ಕೊಂಬುದು ಸದಾಚಾರ, ಉಳಿದುದೆಲ್ಲ ಅನಾಚಾರ." ಮೇಲಿನ ಮಾತು ಈ ಕಾಲಕ್ಕೂ ದಿಟ್ಟತನದ್ದು ಎಂಬು ದನ್ನು ಭಾರತೀಯ ಸಮಾಜವನ್ನು ಬಲ್ಲವರು ಸುಲಭವಾಗಿ ಅರ್ಥಮಾಡಿಕೊಳ್ಳುತ್ತಾರೆ.

ಮೇಲಿನ ಮಾತು ಬರಿಯ ಮಾತಾಗಿ ಉಳಿಯಲಿಲ್ಲ, ಕೃತಿಗೂ ಇಳಿಯಿತು. ಕಲ್ಯಾಣದಲ್ಲಿದ್ದ ಮಧುವರಸ ಮತ್ತು ಹರಳಯ್ಯರು ಹುಟ್ಟಿನಿಂದ ಬ್ರಾಹ್ಮಣ ಮತ್ತು ಅಸ್ಪೃಶ್ಯರಾಗಿದ್ದರೂ ಆತ್ಮೀಯ ಗೆಳೆಯರೂ ಆಗಿದ್ದಂತೆ ಕೆಲವು ವಚನಕಾರರಿಂದ ತಿಳಿದುಬರುತ್ತದೆ. ಅವರ ಸ್ನೇಹ ಆ ಕಾಲಕ್ಕೆ ಒಂದು ದೊಡ್ಡ ಸುದ್ದಿಯೇ ಆಗಿತ್ತೆಂದರೂ ತಪ್ಪಾಗಲಾರದು. ಮಧುವರಸ ಒಬ್ಬ ವಚನಕಾರನೂ ಆಗಿದ್ದಾನೆ. ಅವನ ವಚನಗಳಲ್ಲಿ ಹೆಚ್ಚಾಗಿ ಮಾಂಸಾಹಾರ ಪ್ರಪಂಚದ ಶಬ್ದಚಿತ್ರಗಳು (Images) ಕಾಣಿಸಿಕೊಳ್ಳುವುದು ಅವನ ವಚನಗಳ ಒಂದು ವೈಲಕ್ಷಣ್ಯ. ಅವನು ಅಸ್ಪೃಶ್ಯ ವರ್ಗದ ಹರಳಯ್ಯನ ಜೊತೆ ಹೊಂದಿದ್ದ ಸ್ನೇಹದ ಬಗ್ಗೆ ಜನರಿಂದ ಬಂದ ಪ್ರತಿರೋಧದ ಮಾತುಗಳಿಗೆ ಒಂದು ಬಗೆಯ ಭಾಷಿಕ ಪ್ರತಿಭಟನೆ ಅವನ ಆ ಬಗೆಯ ರೂಪಕಗಳು ಎಂದು ಹೇಳಿದರೂ ತಪ್ಪಾಗಲಾರದು. ಹರಳಯ್ಯನು ಒಬ್ಬ ಲೇಖಕನಲ್ಲದಿದ್ದರೂ ಅವನೂ ಅವನ ಪತ್ನಿಯೂ ಬಸವನ ಅಭಿಮಾನಿಗಳಾಗಿದ್ದು ಚಪ್ಪಲಿ ಹೊಲೆಯುವ ವೃತ್ತಿಯವರಾಗಿದ್ದರು. ಅವರು ತಮ್ಮ ತೊಡೆ ಮೇಲಿನ ಚರ್ಮ ತೆಗೆದು ಬಸವನಿಗಾಗಿ ಪಾದರಕ್ಷೆ ತಯಾರು ಮಾಡಿಕೊಟ್ಟರು ಎಂಬಂತಹ ಕತೆಗಳೂ ಉಂಟು. ಅವರ ಮಗನಿಗೂ ಮಧುವರಸನ ಮಗಳಿಗೂ ಮದುವೆ ಗೊತ್ತಾದಾಗ ಇಡೀ ಶರಣ ಸಮೂಹ ಸಂಭ್ರಮಿಸಿತಾದರೂ ಸಂಪ್ರದಾಯವಾದಿಗಳಿಗೆ ಅದು ಸಹ್ಯವಾಗದೆ, ಅವರು ಬಿಜ್ಜಳನಿಗೆ ಹೇಳಿ ಹರಳಯ್ಯ ಮಧುವಯ್ಯಗಳ ಕಣ್ಣು ಕೀಳಿಸುವಂತೆ ಮಾಡುತ್ತಾರೆ. ಕಲ್ಯಾಣದಲ್ಲಿ ಆ ಘಟನೆ ಬಹು ದೊಡ್ಡ ಕ್ಷೋಭೆಯನ್ನುಂಟುಮಾಡಿದ್ದರಿಂದ ಬಸವಣ್ಣ ಅದನ್ನು ತ್ಯಜಿಸಿ ಕೂಡಲಸಂಗಮಕ್ಕೆ ಬಂದು ಕ್ರಿ.ಶ. 1183–84ರ ಸುಮಾರಿನಲ್ಲಿ ಅಲ್ಲೇ ಕೊನೆಯುಸಿರೆಳೆಯುತ್ತಾನೆ. ಹಿಂದೂ ಧರ್ಮದ ಹಿಂದಿನ ಸಾಮಾಜಿಕ ಚರಿತ್ರೆಯಲ್ಲಿ ಮೇಲಿನಂತಹ ಅಂತರಜಾತೀಯ ವಿವಾಹದ ಘಟನೆ ಖಂಡಿತ ಮತ್ತೊಂದು ಇಲ್ಲ.

ಬಸವನ ವಚನಗಳನ್ನು ನೋಡಿದರೆ ಅವನೊಬ್ಬ ತೀವ್ರ ಭಾವುಕನಾಗಿ ದ್ದಂತೆಯೇ ತೀರ ವಾಸ್ತವವಾದಿಯೂ ಆಗಿದ್ದ. ಜಾತಿಗಳ ಮಧ್ಯದ ಮೇಲು ಕೀಳು ಭಾವನೆಯು ನಶಿಸಲು ಅವುಗಳ ಮಧ್ಯೆ ನಿರಾಬಾಧಿತವಾಗಿ ವಿವಾಹಗಳು ನಡೆಯುವುದೊಂದೇ ಮಾರ್ಗವೆಂಬುದನ್ನು ಅವನೂ ಅವನ ಕಾಲದ ಶರಣರೂ ಮನಗಂಡಿದ್ದರು ಮಾತ್ರವಲ್ಲದೆ ಅಂತಹುದೊಂದನ್ನು ವಾಸ್ತವವಾಗಿ ನಡೆಯಲು ಮುಂದಾದರು. ಆ ಮದುವೆ ನಡೆಯಲು ಬಿಜ್ಜಳ ಅವಕಾಶ ಕೊಡಲಿಲ್ಲವೆಂಬುದು

ಬೇರೆ ಮಾತು. ಆದರೆ ಆ ಪ್ರಯತ್ನದ ಹಿಂದಿನ ಮನೋಭಾವ ತೀರ ಪ್ರಗತಿಪರ ಮಾತ್ರವಲ್ಲ, ಕ್ರಾಂತಿಕಾರಕವೂ ಹೌದು.

ಬಸವನ ಆಂದೋಲನವು ಹಿಂದೂ ಧರ್ಮದಲ್ಲಿ ಒಂದು ಮೂಲಭೂತ ರಾಚನಿಕ ಬದಲಾವಣೆಯನ್ನು ತಂದಿತೇ, ಆ ಆಂದೋಲನದಿಂದಾಗಿ ಬಡವರ, ಕೆಳವರ್ಗದ ಜನರ ಆರ್ಥಿಕ ಸುಧಾರಣೆಯಾಯಿತೇ ಎಂಬಂತಹ ಪ್ರಶ್ನೆಗಳನ್ನು ಕೇಳಲು ಯಾರಿಗಾದರೂ ಮನಸ್ಸಾಗುತ್ತದೆ. "ಹೌದು" ಎಂಬ ದೃಢ ಉತ್ತರವನ್ನು ಕೊಡಲು ಸಾಧ್ಯವಿಲ್ಲದಿದ್ದರೂ, "ಖಂಡಿತ ಇಲ್ಲ" ಎಂಬ ಉತ್ತರವಂತೂ ಸಾಧ್ಯವಿಲ್ಲ. ಭಿನ್ನ ಜಾತಿಗಳ ಮಧ್ಯೆ, ಅದರಲ್ಲೂ ಬ್ರಾಹ್ಮಣ–ದಲಿತ ಜಾತಿಗಳ ಮಧ್ಯೆ ವಿವಾಹಗಳು ನಡೆಯಲು ಪ್ರೋತ್ಸಾಹಿಸಿದುದಲ್ಲದೆ ಅಂತಹುದೊಂದು ನಡೆಯಲು ವ್ಯವಸ್ಥೆಯೂ ಆಯಿತೆಂಬುದನ್ನು ನೋಡಿದರೆ ಆ ಆಂದೋಲನವು ಉನ್ಮುಖೀ ಸಾಮಾಜಿಕ ಚಲನೆಯ ಪರವಾಗಿತ್ತು ಎಂಬುದು ಸ್ವಯಂವೇದ್ಯ. ಬಸವನ ಕಾಲದಲ್ಲಿ "ಜಂಗಮ" ನಿಗಿದ್ದ ಸ್ಥಾನವನ್ನು ಇಲ್ಲಿ ಪ್ರಸ್ತಾಪಿಸುವುದು ಅಪ್ರಸ್ತುತವಲ್ಲ. ಹಿಂದೂ ಧರ್ಮವು "ಗುರು"ವಿಗೆ ಅತಿ ಹೆಚ್ಚಿನ ಸ್ಥಾನವನ್ನು ನೀಡುತ್ತದೆ ("ನ ಗುರೋರಧಿಕಂ"). ವೀರಶೈವದಲ್ಲಿ "ಗುರು"ವಿನ ಸ್ಥಾನವು ದೊಡ್ಡದೇ. ಆದರೆ ಯಾರು ಬೇಕಾದರೂ "ಗುರು"ವಾಗಬಹುದಿತ್ತೇ, ತಿಳಿಯದು. ಆದರೆ ಯಾರು ಬೇಕಾದರೂ, ದಲಿತವರ್ಗದ ವ್ಯಕ್ತಿಯೂ ಕೂಡ "ಜಂಗಮ"ನಾಗಬಹುದಿತ್ತು, ಮತ್ತು ಗುರುವಿಗಿಂತ ಮೇಲಿನ ಸ್ಥಾನವನ್ನು ಪಡೆಯಬಹುದಿತ್ತು. ಅಂದಿನ ಜಂಗಮತ್ವವು ಇಂದಿನ ಕಾಲದಲ್ಲಿರುವಂತೆ ಹುಟ್ಟಿನಿಂದಲ್ಲ, ವ್ಯಕ್ತಿಯ ಅರ್ಹತೆಯಿಂದ ಸಾಧನೆಯಿಂದ ಪ್ರಾಪ್ತವಾಗುವಂತಹುದಾಗಿತ್ತು. ಅಂದಿನ ಜಂಗಮನು ಸದಾ ಸಂಚಾರಿಯಾಗಿದ್ದು ಸ್ವಯಮಿಚ್ಛೆಯಿಂದ ಬಡತನವನ್ನು ಆರಿಸಿಕೊಂಡು ಅಂತರ್ಮುಖಿಯಾಗಿ ತನ್ನನ್ನು ತಾನು ಉತ್ತಮಗೊಳಿಸಿಕೊಳ್ಳುತ್ತ ಜನರನ್ನು ಎಚ್ಚರಿಸುವವನೂ ಆಗಿದ್ದ ವ್ಯಕ್ತಿ. ಜಂಗಮನನ್ನು "ಗುರುವಿನ ಗುರು" ಎಂದು ವರ್ಣಿಸಲಾಗಿದೆ. ಗುರುವಿನ ಉಪದೇಶವು "ಮಂತ್ರ ವೈದ್ಯ"ವಾದರೆ ಜಂಗಮನ ಉಪದೇಶವು "ಶಸ್ತ್ರ ವೈದ್ಯ"ವೆಂದೂ ಉದ್ಗರಿಸಲಾಗಿದೆ. "ಮಂತ್ರ ವೈದ್ಯ"ವು ಸಣ್ಣ ಪುಟ್ಟ ಕಾಯಿಲೆಗಳ ಉಪಶಮನಕ್ಕೆ ನಡೆಯುವಂತಹುದಾದರೆ, "ಶಸ್ತ್ರ ವೈದ್ಯ"ವು ರೋಗಿಗೆ ತೀವ್ರ ನೋವನ್ನುಂಟುಮಾಡುವುದಾದರೂ ಆ ರೋಗಿಯ ರೋಗಗ್ರಸ್ತ ಭಾಗವನ್ನು ತೆಗೆದುಹಾಕಿ ಅವನನ್ನು ಶಾಶ್ವತವಾಗಿ ಆರೋಗ್ಯಶಾಲಿಯಾಗಿ ಮಾಡುವಂತಹುದು. "ಗುರು"ವು ತನ್ನ ಬಳಿ ಬಂದ ಶಿಷ್ಯನಿಗೆ ಇಷ್ಟಲಿಂಗ ಪ್ರದಾನವನ್ನು ಮಾಡಿ ಅವನನ್ನು ಷಟ್ಸ್ಥಲ ಮಾರ್ಗಕ್ಕೆ ಹಚ್ಚುತ್ತಾನೆ. ಜಂಗಮ ಆ ಷಟ್ಸ್ಥಲ ಮಾರ್ಗವನ್ನು ಕ್ರಮಿಸಿದವನು; ತಿರುಗಾಟದಲ್ಲಿ ತನ್ನನ್ನು ತಾನು ಅರಿತುಕೊಳ್ಳಲು ಪ್ರಯತ್ನಿಸಿದವನು. ಗುರು ಮುಖ್ಯವಾಗಿ ವಿದ್ವಾಂಸ; ಜಂಗಮ ಮುಖ್ಯವಾಗಿ ಅನುಭಾವಿ. ಪಾರಂಪರಿಕವಾಗಿ ಬಂದುದನ್ನು ವಿದ್ಯೆ, ಸಂಸ್ಕಾರಗಳ ಮೂಲಕ ಶಿಷ್ಯನಿಗೆ ತಲುಪಿಸುವವನು ಗುರು; ಅದನ್ನು ಸ್ವಯಂಪ್ರಯತ್ನದಿಂದ ಅಂತರ್ಗತ ಮಾಡಿ

ಕೊಂಡವನು ಜಂಗಮ. ಜನಗಳ ಜೊತೆ ಒಂದಾಗಿ ಅವರ ಕಷ್ಟ ಸುಖಗಳಲ್ಲಿ ಭಾಗಿಯಾಗಿ ತಾನೂ ಬೆಳೆದು ಅವರನ್ನೂ ಬೆಳಸುವವನು ಜಂಗಮ. ಗುರು ಬಹುಶಃ ಒಂದು ನಿರ್ದಿಷ್ಟ ಜಾತಿಯಲ್ಲಿ, ಉಳಿದವರಿಗಿಂತ ಮೇಲಿನ ಜಾತಿಯಲ್ಲಿ ಹುಟ್ಟಿದವನಾಗಿರುತ್ತಿದ್ದ. ಆದರೆ ಯಾವುದೇ ಜಾತಿಯಲ್ಲಿ, ದಲಿತ ವರ್ಗದಲ್ಲಿ ಬೇಕಾದರೂ ಹುಟ್ಟಿರುವ ಯಾವನೇ ವ್ಯಕ್ತಿ ಜಂಗಮನಾಗಲು ಅವಕಾಶವಿತ್ತು. ಶೂದ್ರ ವರ್ಗದ ಅಲ್ಲಮನೇ ಇದಕ್ಕೆ ಅತ್ಯುತ್ತಮ ಉದಾಹರಣೆ. ಗುರುವಿಗಿಂತ ಜಂಗಮ ಶ್ರೇಷ್ಠ ಎನ್ನುವಾಗ ಪಾಂಡಿತ್ಯಕ್ಕಿಂತ ಅನುಭಾವ ಮುಖ್ಯ ಎಂಬುದು ಸೂಚಿತವಾಗುವುದಲ್ಲದೆ, ಅಂದಿನ ಆಂದೋಲನವು ಸಾಮಾಜಿಕ ಮೇಲೇರಿಕೆಯ ಪರವಾಗಿತ್ತು ಎಂಬುದೂ ಸೂಚಿತವಾಗುತ್ತದೆ. ಜಂಗಮರು ಅಂದಿನ ಸಾಮಾಜಿಕ ಆಂದೋಲನದಲ್ಲಿ ಈ ಕಾಲದ ಸಮೂಹ ಮಾಧ್ಯಮಗಳು ವಹಿಸಿದ ಪಾತ್ರವನ್ನು ವಹಿಸಿದಂತೆ ತೋರುತ್ತದೆ.

ಎರಡನೆಯ ಪ್ರಶ್ನೆಗೆ ಹೀಗೆ ಉತ್ತರಿಸಬಹುದು. ವಚನಕಾರರು ಹಸಿವಿನ ಬಗ್ಗೆ, ಬಡತನದ ಬಗ್ಗೆ ಸ್ಪಷ್ಟವಾಗಿ ಮಾತನಾಡಿದ್ದಾರೆ, ಜಾತಿ ಭೇದದ ಅನಿಷ್ಟದ ಬಗ್ಗೆ ಮಾತನಾಡಿದಷ್ಟೇ ತೀವ್ರವಾಗಿ ಮಾತನಾಡಿದ್ದಾರೆ. ಹಾಗೆ ನೋಡಿದರೆ, ಇಡೀ ಕನ್ನಡ ಸಾಹಿತ್ಯದಲ್ಲಿ ಮೊತ್ತ ಮೊದಲು ಹಸಿವಿನ ಬಗ್ಗೆ ಪ್ರಸ್ತಾಪ ಬಂದಿರುವುದು ಮೊದಲ ವಚನಕಾರ ಜೇಡರ ದಾಸಿಮಯ್ಯನಲ್ಲಿ (ಕ್ರಿ.ಶ. 1120–40) ಎಂಬುದು ಕೇವಲ ಆಕಸ್ಮಿಕವಲ್ಲ ("ಒಡಲುಗೊಂಡವ ಹಸಿವ, ಒಡಲುಗೊಂಡವ ಹುಸಿವ"). ಅದೇ ಲೇಖಕನು ಹಸಿದ ಮನುಷ್ಯನನ್ನು ಹಾವಿನಿಂದ ಕಚ್ಚಿಸಿಕೊಂಡು ವಿಷವೇರಿ ನರಳುತ್ತಿರುವವನೊಂದಿಗೆ ಹೋಲಿಸುತ್ತಾನೆ. ಆ ವಿಷವನ್ನು ಇಳಿಸತಕ್ಕ ಮದ್ದು ಆಹಾರ ವೊಂದೇ ("ಹಸಿವಿನಗನ್ನವನಿಕ್ಕಿ ವಿಷವನಿಳುಹಬಲ್ಲಡೆ ವಸುಧೆಯೊಳಗಾತನೇ ಗಾರುಡಿಗ"). ಹಾಗೆಯೇ ಎಲ್ಲ ವಚನಕಾರರೂ ಮನುಷ್ಯರು ತಮ್ಮ ಗಳಿಕೆಯನ್ನು ಇಲ್ಲದವರ ಜೊತೆ ಹಂಚಿಕೊಳ್ಳಬೇಕೆಂದು ಪ್ರತಿಪಾದಿಸಿದ್ದಾರೆ. ಶ್ರೀಮಂತವರ್ಗವು ಸಮಾಜದ ಸಾಮಾನ್ಯರನ್ನೂ ಬಡಜನರನ್ನೂ ಶೋಷಿಸಿ ಎಲ್ಲ ಅನುಕೂಲಗಳನ್ನು ತಮ್ಮದನ್ನಾಗಿ ಮಾಡಿಕೊಳ್ಳುವ ಸಾಮಾಜಿಕ ದುರಂತವು ಆ ಆಂದೋಲನಕಾರರಿಗೆ ತಿಳಿದಿದ್ದರೂ, ಆಡಳಿತವರ್ಗದ ಬೆಂಬಲವಿಲ್ಲದೆ ಯಾವುದೇ ಆರ್ಥಿಕ ಸುಧಾರಣೆ ಯನ್ನೂ ತರುವುದು ಅವರಿಗೆ ಸಾಧ್ಯವಾಗಿರಲಿಲ್ಲ. ಹೌದು, ಹಿಂದೂ ಧರ್ಮದಲ್ಲಿ ಮೂಲಭೂತ ರಾಚನಿಕ ಬದಲಾವಣೆಗೆ ಅವರು ಯತ್ನಿಸಿದರು, ಅದರಲ್ಲಿ ತಕ್ಕಮಟ್ಟಿಗೆ ಯಶಸ್ವಿಗಳೂ ಆದರು. ಆದರೆ ಆರ್ಥಿಕ ಕ್ಷೇತ್ರ ಅವರಿಗೆ ಮೀರಿದ ಸೀಮೆಯಾಗಿತ್ತು. ಬಡವರು ತಮ್ಮ ಇತಿಮಿತಿಗಳಲ್ಲೇ ತೃಪ್ತಿಯಿಂದ, ಬಹು ಮುಖ್ಯ ವಿಷಯವೆಂದರೆ ಸ್ವಾಭಿಮಾನದಿಂದ ಆಸೆಗಳಿಗೆ ಮಿತಿ ಹಾಕಿಕೊಂಡು ಬದುಕಬೇಕೆಂದು ಸಾರಿದರು. (ನೋಡಿ "ಆಸೆಯೆಂಬುದು ಅರಸಿಗಲ್ಲದೆ ಶಿವಭಕ್ತರಿಗುಂಟೆ"; "ಮನೆ ನೋಡಾ ಬಡವರು, ಮನ ನೋಡಾ ಘನ"). ಇಂತಹ ವಾತಾವರಣದಲ್ಲಿ ಬದುಕಿದ ಬಡವರಾಗಿದ್ದ ಸಾಮಾನ್ಯ ಶರಣರು ಹೆಚ್ಚಿನ ಉತ್ಸಾಹದಿಂದ ದುಡಿದು ತಮ್ಮ ಆರ್ಥಿಕ

ಪರಿಸ್ಥಿಯ ಉತ್ತಮಿಕೆಗೆ ಕಾರಣಕರ್ತರಾಗಿರಬಹುದೆಂಬುದು ಊಹೆಯ ಮಾತಾದರೂ ಸತ್ಯಕ್ಕೆ ಅದು ದೂರವಲ್ಲದ ಮಾತೂ ಆಗಿರುವ ಸಾಧ್ಯತೆ ಇದೆ. ಮಾಂಸಾಹಾರ, ಕುಡಿತಗಳನ್ನು ಬಿಟ್ಟ ಕೆಳವರ್ಗದ ಶಿವಭಕ್ತರ ಆರ್ಥಿಕ ಪರಿಸ್ಥಿತಿ ಖಂಡಿತವಾಗಿಯೂ ಹಿಂದಿನಂತೆಯೇ ಇರಲಿಲ್ಲವೆಂಬುದು ಸ್ವಯಂವೇದ್ಯ.

ಆಧುನಿಕ ಕನ್ನಡ ಸಾಹಿತ್ಯದ ಬಹುತೇಕ ಎಲ್ಲರೂ ವಚನ ಚಳವಳಿಯಿಂದ ಪ್ರೇರೇಪಿತರೂ ಪ್ರಭಾವಿತರೂ ಆಗಿದ್ದಾರೆ. ಕರ್ನಾಟಕದ ದಲಿತ ಚಳವಳಿಯು ಬುದ್ಧ, ಬಸವ, ಅಂಬೇಡ್ಕರ್ ಅವರನ್ನು ತನ್ನ ಸ್ಫೂರ್ತಿಯೆಂದು ಭಾವಿಸಿದೆ. ಅಂದಿನ ಚಳವಳಿಯಿಂದ ಪ್ರೇರಣೆಗೊಂಡ ಹಲವು ಆಧುನಿಕ ಮಠಾಧೀಶರು ದಲಿತರನ್ನು ತಮ್ಮ ಮನಸ್ಸಿನ ಒಳಕ್ಕೆ ಹಾಗೇ ತಮ್ಮ ಮಠದೊಳಕ್ಕೂ ಸಂತೋಷದಿಂದ ಪ್ರೀತಿಯಿಂದ ಬರಮಾಡಿಕೊಂಡಿರುವಂತೆ ಕೆಲವರು ಅವರಿಗೆ ಲಿಂಗದೀಕ್ಷೆ ಕೊಟ್ಟು ಮಠಾಧೀಶರನ್ನಾಗಿಯೂ ಮಾಡಿದ್ದಾರೆ. ಗಾಂಧೀಜಿಯವರು 'ಕರ್ನಾಟಕ'ದ ಬೆಳಗಾವಿಯಲ್ಲಿ ನಡೆದ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷರಾಗಿ ಬಂದಾಗ, ತಾವು ಹರಿಜನೋದ್ಧಾರಕ್ಕಾಗಿ ಮಾಡುತ್ತಿರುವ ಕೆಲಸವು ಬಸವಣ್ಣನ ಕಾರ್ಯದ ಮುಂದು ವರಿಕೆಯೇ ಆಗಿದೆಯೆಂದು ಹೇಳಿರುವುದು ದಾಖಲಾಗಿದೆ. ಬಸವ ಮತ್ತು ಅವನ ನೇತೃತ್ವದ ಆಂದೋಲನ ಎಂದೋ ನಡೆದ ಬರೀ ಚಾರಿತ್ರಿಕ ದಾಖಲೆ ರೂಪದ ಮ್ಯೂಜಿಯಂ ಪ್ರದರ್ಶಕ ವಸ್ತುವಾಗಿರದೆ ಇಂದಿಗೂ ಜೀವಂತವಾಗಿರುವ, ಜೀವಂತವಾಗಿರಬೇಕಾದ ಒಂದು ಸಮಾಜದ ಅಥವಾ ಜನಾಂಗದ ಕ್ರಿಯೆಯೂ ಆಗಿದೆ.

[**ಕರ್ನಾಟಕ ಸರ್ಕಾರ**ವು ಪ್ರಕಟಿಸಿರುವ ಸಮಗ್ರ ವಚನ ಸಂಪುಟ ಮಾಲೆಯಲ್ಲಿ ತಂದಿರುವ ಶರಣರ ವಚನಗಳನ್ನು ನಾನು ಬಳಸಿಕೊಂಡಿದ್ದೇನೆ. ಆ ಮಾಲೆಯ ಸಂಪುಟಗಳು ಹೀಗಿವೆ : (1) ಸಂ. ಎಂ.ಎಂ. ಕಲಬುರ್ಗಿ : ಬಸವಣ್ಣನವರ ವಚನ ಸಂಪುಟ; (2) ಸಂ. ಬಿ.ವಿ. ಮಲ್ಲಾಪುರ : ಅಲ್ಲಮಪ್ರಭುದೇವರ ವಚನ ಸಂಪುಟ; (3) ಸಂ. ಬಿ.ವಿ. ಮಲ್ಲಾಪುರ : ಚೆನ್ನಬಸವಣ್ಣನವರ ವಚನ ಸಂಪುಟ; (4) ಸಂ. ಎಸ್. ವಿದ್ಯಾಶಂಕರ : ಸಿದ್ಧರಾಮೇಶ್ವರ ವಚನ ಸಂಪುಟ; (5) ಸಂ. ವೀರಣ್ಣ ರಾಜೂರ : ಶಿವಶರಣೆಯರ ವಚನಸಂಪುಟ; (6) ಸಂ. ಎಂ.ಎಂ. ಕಲಬುರ್ಗಿ : ಸಂಕೀರ್ಣ ವಚನ ಸಂಪುಟ–1; (7) ಸಂ. ಎಸ್. ವಿದ್ಯಾಶಂಕರ : ಸಂಕೀರ್ಣ ವಚನ ಸಂಪುಟ 2; (8), (9) ಸಂ. ಬಿ.ಆರ್. ಹಿರೇಮಠ : ಸಂಕೀರ್ಣ ವಚನ ಸಂಪುಟ 3, 4; (10) ಸಂ. ವೀರಣ್ಣ ರಾಜೂರ : ಸಂಕೀರ್ಣ ವಚನ ಸಂಪುಟ 5; (11) ಸಂ. ಎಸ್. ಶಿವಣ್ಣ : ಸಂಕೀರ್ಣ ವಚನ ಸಂಪುಟ 6; (12), (13), (14) ಸಂ. ವೀರಣ್ಣ ರಾಜೂರ : ಸಂಕೀರ್ಣ ವಚನ ಸಂಪುಟ 7, 8, 9.]



# 15

# ಬಸವಣ್ಣ : ಮೂರು ಮುಖ್ಯ ಲಕ್ಷಣಗಳ ಸಂಗಮ

ಉಪನಿಷತ್ತಿನ ಕಾಲದಿಂದ ಹನ್ನೆರಡನೆಯ ಶತಮಾನದವರೆಗೆ ಭಾರತದಲ್ಲಿ ಅನೇಕ ದಾರ್ಶನಿಕರು, ಧಾರ್ಮಿಕ ಮುಖಂಡರು ಉದಯಿಸಿದರು. ಆದರೆ ಭಾರತೀಯ ಸಮಾಜದ ಎಲ್ಲ ವರ್ಗಗಳ ಮೇಲೆ ತೀವ್ರ ಪ್ರಭಾವವನ್ನು ಬೀರಿ ಅವರಲ್ಲಿ ಒಂದು ಒಳ ಎಚ್ಚರವನ್ನು ಮೂಡಿಸಿದ ಮೊತ್ತ ಮೊದಲ ನಿಜವಾದ ಅರ್ಥದ ಸಾಮಾಜಿಕ ಚಳವಳಿ ನಡೆದದ್ದು ಬಸವ ಮತ್ತು ಅವನ ಸಹೋದ್ಯೋಗಿಗಳಿಂದ, ಕರ್ನಾಟಕದಲ್ಲಿ. ಅಲ್ಲಿಯವರೆಗೆ ಯಾವುದೇ ಮತ ಅಥವಾ ಯಾವುದೇ ಉದಾತ್ತ ಚಿಂತನೆ ಸಮಾಜದ ತೀರ ಕೆಳಗಿನ ಪದರಗಳನ್ನು ಮುಟ್ಟಲೂ ಇಲ್ಲ, ಮುಟ್ಟುವ ಸ್ಥಿತಿಯಲ್ಲೂ ಇರಲಿಲ್ಲ, ಮುಟ್ಟುವ ಗುರಿಯೂ ಇರಲಿಲ್ಲ. ಭಾರತದ ಸಾಮಾಜಿಕ ಚರಿತ್ರೆಯ ಪರಿಚಯ ಇರುವವರಿಗೆ ಇದು ಉತ್ಪ್ರೇಕ್ಷೆಯ ಅಥವಾ ಅಭಿಮಾನದ ಮಾತು ಎಂಬ ಸಂದೇಹ ಬರಲಾರದು. ರೈತ, ಬಡಗಿ, ನೇಕಾರ, ಹರಿಜನ, ದನಗಾಹಿ, ಅಂಬಿಗ ಇಂತಹ ಭಿನ್ನ ಭಿನ್ನ ಉದ್ಯೋಗದ ಅನೇಕ ನೂರು ಜನ ಪುರುಷರು, ಇಪ್ಪತ್ತೈದಕ್ಕೆ ಮೀರಿದ ಸ್ತ್ರೀಯರು ಒಂದು ನಿರ್ದಿಷ್ಟ ಕಾಲದ ಅವಧಿಯಲ್ಲಿ ಒಂದು ಭಾಷೆಯಲ್ಲಿ ಕೃತಿರಚನೆ ಮಾಡಿದ ಉದಾಹರಣೆ ಭಾರತೀಯ ಇತಿಹಾಸದಲ್ಲಿ ಮಾತ್ರವಲ್ಲ, ವಿಶ್ವದ ಇತಿಹಾಸದಲ್ಲಿಯೇ ಮತ್ತೊಂದು ದೊರಕುವ ಬಗ್ಗೆ ಸಂದೇಹ ಇದೆ.

ಅವರು ಮಾಡಿದ ಕೃತಿರಚನೆ ಅವರಲ್ಲಿ ಮೂಡಿದ ಸಾಮಾಜಿಕ ಅರಿವಿನ ಸಂಕೇತ ಎನ್ನುವ ಕಾರಣದಿಂದಲೇ ಮಹತ್ವವನ್ನು ಪಡೆಯುತ್ತದೆ. ಸಾಹಿತ್ಯಕ ಮಾನದಂಡಗಳಿಂದ ಅಳೆದರೆ ಅನೇಕ ವಚನಕಾರರ ಕೃತಿಗಳು ಇಂದು ತೀರ ಸಾಧಾರಣವಾಗಿ ತೋರುತ್ತವೆ. ಆದರೆ, ಸಮಾಜಶಾಸ್ತ್ರದ ದೃಷ್ಟಿಯಿಂದ ನೋಡಿದರೆ, ಅಷ್ಟು ಜನ ತಮ್ಮನ್ನು ತಾವು ಬಹಿರಂಗವಾಗಿ ವ್ಯಕ್ತಪಡಿಸಿಕೊಂಡು ತಮ್ಮ ಎಷ್ಟೇ ಸಾಮಾನ್ಯ ಚಿಂತನೆಗಳಾದರೂ ಅವನ್ನು ಹೇಳಿಕೊಳ್ಳುವ ಧೈರ್ಯ ಮಾಡಿದರು ಎನ್ನುವುದೇ ಮುಖ್ಯವಾಗುತ್ತದೆ. ಜೊತೆಗೆ ಅಂಬಿಗರ ಚೌಡಯ್ಯ, ಮಡಿವಾಳ ಮಾಚಯ್ಯನಂತಹ ಕೆಲವು ವಚನಕಾರರಂತೂ ತೀರ ಸ್ಪಷ್ಟೋಕ್ತಿಗಳಲ್ಲಿಯೇ ತಮ್ಮ ಸಾಮಾಜಿಕ ಚಿಂತನೆ

ವಿಮರ್ಶೆಗಳನ್ನು ಮುಂದಿಟ್ಟಿದ್ದಾರೆ ಎನ್ನುವುದು ಗಮನಾರ್ಹ ಸಂಗತಿ. ಹೀಗೆ ಸಾಮಾನ್ಯರೂ ಮಾತನಾಡುವ ಮನಸ್ಸು ಮಾಡಿದ್ದು ಒಂದು ಸಾಮೂಹಿಕ ಆವೇಶದ ಆಂದೋಲನದ ಫಲವೆಂಬಲ್ಲಿ ಅನುಮಾನವಿಲ್ಲ.

ಈ ಆಂದೋಲನದ ಕೇಂದ್ರವ್ಯಕ್ತಿ ಬಸವನನ್ನು 'ಭಕ್ತಿ ಭಂಡಾರಿ' ಎಂದು ಕರೆಯುವುದು ರೂಢಿಯಾಗಿದೆ. ಭಕ್ತಿ ಬಸವಣ್ಣನ, ಅವನ ಚಳವಳಿಯ ಮುಖ್ಯಭಾಗ ಎಂಬುದು ನಿಜವಾದರೂ, ಭಕ್ತಿಸಾಧನೆಯೊಂದೇ ಬಸವಣ್ಣನ ಜೀವಿತದ ಉದ್ದೇಶವಾಗಿದ್ದರೆ ಅವನು ತನ್ನ ಹುಟ್ಟೂರನ್ನಾಗಲಿ ಅಥವಾ ಮುಂದೆ ತನಗೆ ಆಶ್ರಯವಿತ್ತ ಕೂಡಲಸಂಗಮದ ದೇವಾಲಯವನ್ನಾಗಲಿ ತಿರಸ್ಕರಿಸಿ ಹೊರಬರುವ ಅಗತ್ಯ ಇರಲಿಲ್ಲ. 'ಭಕ್ತಿ ಭಂಡಾರಿ' ಎಂದು ಕರೆಯುವವರು ಅವನ ಬದುಕಿನ ಪರಮ ಆದರ್ಶ ಭಕ್ತಿ, ಅನುಷಂಗಿಕವಾಗಿ ಅಥವಾ ಆಕಸ್ಮಿಕವಾಗಿ ಅವನ ಗಮನ ಸಮಾಜದ ಕಡೆ ಹರಿಯಿತು ಎಂದು ನಂಬುವಂತೆ ತೋರುತ್ತದೆ. ಅವನ ಬದುಕಿನ ಘಟನೆಗಳನ್ನು ಸೂಕ್ಷ್ಮವಾಗಿ ವಿಶ್ಲೇಷಿಸಿ ನೋಡಿದರೆ ನಮಗೆ ಇದಕ್ಕೆ ಸಂಪೂರ್ಣ ವಿರುದ್ಧವಾದ ಚಿತ್ರ ಕಂಡುಬರುತ್ತದೆ. ಸಮಾಜದ ಹಿತಸಾಧನೆ ಮತ್ತು ವೈಯಕ್ತಿಕ ಭಕ್ತಿಸಾಧನೆ ಇವೆರಡರಲ್ಲಿ ಬಸವ ಯಾವುದಕ್ಕೆ ಹೆಚ್ಚು ಮಹತ್ವ ಕೊಟ್ಟಿದ್ದ ಎಂದು ಪ್ರಶ್ನೆಯನ್ನು ಸರಳಗೊಳಿಸಲು ನನಗೆ ಮನಸ್ಸಿಲ್ಲ. ಯಾವನೇ ಒಬ್ಬ ವ್ಯಕ್ತಿ ಎಲ್ಲ ವಿವರಗಳನ್ನೂ ಯೋಚಿಸಿ ನಿರ್ಧರಿಸಿ ಬಳಿಕ ತನ್ನ ಬದುಕನ್ನು ರೂಪಿಸಿಕೊಳ್ಳುವುದಿಲ್ಲ. ಎಲ್ಲ ಅಂಶಗಳೂ ಎಲ್ಲ ಪ್ರಚೋದನೆ ಗಳೂ ಮಿಳಿತಗೊಂಡು ಅವನ ಬದುಕಿಗೆ ಒಂದು ಆಕಾರವನ್ನು ಕೊಟ್ಟಿರುತ್ತವೆ. ಅವನಾದ ಮೇಲೆ ಅವನ ಬದುಕಿನ ವಿವಿಧ ಘಟ್ಟಗಳನ್ನು ಪರಿಶೀಲಿಸಿ ಅವನ ಅಂತರಂಗದ ಮಿಡಿತ, ದಿಕ್ಕುಗಳನ್ನು ಊಹಿಸುವ ಕೆಲಸ ನಮ್ಮದಾಗುತ್ತದೆ. ಈ ದೃಷ್ಟಿ ಯಿಂದ ನೋಡಿದರೆ ಅವನ ವ್ಯಕ್ತಿತ್ವದ ಗಣನೀಯ ಭಾಗ–ಬಹುಮುಖ್ಯವಾದ ಭಾಗ ವೆಂದರೂ ಸರಿಯೇ–ಸಾಮಾಜಿಕವಾದುದು ಎಂದು ಹೇಳುವಲ್ಲಿ ನನಗೆ ತಪ್ಪೇನೂ ಕಾಣುವುದಿಲ್ಲ.

ಬಸವಣ್ಣನ ಬದುಕಿನ ಉದ್ದಕ್ಕೂ ಕಾಣಬರುವ ಮುಖ್ಯ ಲಕ್ಷಣಗಳು: **ಅತೃಪ್ತಿ, ನಿರಾಕರಣೆ ಮತ್ತು ಅನ್ವೇಷಣೆ. ಅತೃಪ್ತಿ:** ಕನಸುಗಾರನಾದ ಅವನಿಗೆ ತನ್ನ ಸುತ್ತ ಇರುವ ವಾಸ್ತವತೆಯ ಬಗ್ಗೆ ಅತೃಪ್ತಿ; ತನ್ನ ಜಾತಿಯ ಬಗ್ಗೆ, ತನ್ನ ತಂದೆ ತಾಯಿ ಬಂಧುಗಳ ಬಗ್ಗೆ, ದೇವಸ್ಥಾನ ಸಂಸ್ಥೆಯ ಬಗ್ಗೆ, ರಾಜಕೀಯ ವ್ಯವಸ್ಥೆಯ ಬಗ್ಗೆ, ಸಾಮಾಜಿಕ ಅಸಮಾನತೆಯ ಬಗ್ಗೆ, ಕೊನೆಗೆ ತನ್ನ ಕೊರತೆಗಳ ಬಗ್ಗೆ ಅವನು ಸದಾ ಅತೃಪ್ತ. ಇಂತಹ ಅತೃಪ್ತಿ ಕಾಣುವುದು ಎಲ್ಲೋ ಕೆಲವರಲ್ಲಿ ಮಾತ್ರ. ಅವರಲ್ಲೂ ಬಹುಪಾಲು ಜನ ಬಹುಬೇಗ, ಇರುವ ವಾಸ್ತವತೆಯನ್ನು ನಿರಾಕರಿಸಲಾಗದೆ, ಅತೃಪ್ತಿಯನ್ನೂ ಕೈಬಿಡಲಾಗದೆ ವಾಸ್ತವ ಮತ್ತು ಆದರ್ಶಗಳ ಗೊಂದಲಕ್ಕೆ ಸಿಕ್ಕು ಒದ್ದಾಡುತ್ತಾರೆ. ಆದರೆ ಆ ಅತೃಪ್ತ ಕೆಲವರಲ್ಲೂ ಒಂದಿಬ್ಬರು ಬಸವಣ್ಣನಂತೆ ವಾಸ್ತವತೆಯನ್ನು ನಿರಾಕರಿಸುವ

ಧೈರ್ಯ ಮಾಡುತ್ತಾರೆ. ಅವರ ನಿರಾಕರಣೆ ವಾಸ್ತವತೆಯಿಂದ ದೂರ ಪಲಾಯನ ಮಾಡುವ ಪ್ರವೃತ್ತಿಯದಾಗಿರದೆ ವಾಸ್ತವತೆಯನ್ನು ಎದುರಿಸಿ ಅದನ್ನು ತಮ್ಮ ಕನಸಿಗೆ ಒಗ್ಗಿಸಿಕೊಳ್ಳುವ ಪ್ರಯತ್ನಕ್ಕೆ ಪ್ರೇರಣೆಯಾಗುತ್ತದೆ. **ನಿರಾಕರಣೆ** ಎಂಬುದು ಎಲ್ಲ ಸಾರಿಯೂ ಒಂದನ್ನು ಪೂರ್ತಿ ಬಿಟ್ಟು ಹೋಗುವುದೆಂದು ಆಗಬೇಕಾಗಿಲ್ಲ. ವಾಸ್ತವತೆಯ ಅಪಾಯಾಂಶಗಳನ್ನು ಅಥವಾ ಹಿತವಿರೋಧಿ ಲಕ್ಷಣಗಳನ್ನು ತೆಗೆದು ಹಾಕುವ ಸಂಕಲ್ಪದ ಪೂರ್ವಭಾವಿ ಸ್ಥಿತಿಯೂ ಆಗಬಹುದು. ನಿರಾಕರಣೆಯ ಜೊತೆ ಜೊತೆಗೇ, ನಿರಾಕರಿಸಿದ್ದರ ಸ್ಥಾನದಲ್ಲಿ ಪ್ರತಿಷ್ಠೆಗೊಳ್ಳಬೇಕಾದ ಮೌಲ್ಯದ ಹುಡುಕಾಟವೂ ಆರಂಭವಾಗುತ್ತದೆ. ಇದನ್ನೇ **ಅನ್ವೇಷಣೆ** ಎಂದು ಕರೆದಿರುವುದು. ಸಮಾಜಕ್ಕೆ ಇದು ಸರಿಯಲ್ಲವೆಂದು ಹೇಳಿದರೆ ಸಾಲದು, ಯಾವುದು ಸರಿ ಎಂದೂ ಹೇಳಬೇಕಾಗುತ್ತದೆ. ಈ ಅತೃಪ್ತಿ, ನಿರಾಕರಣೆ ಮತ್ತು ಅನ್ವೇಷಣೆಗಳು ಬಸವಣ್ಣನಲ್ಲಿ ಕಂಡುಬರುವ ರೀತಿಯನ್ನು ಗಮನಿಸೋಣ.

ಬಸವಣ್ಣ ತನ್ನ ಹದಿನಾರನೆಯ ವಯಸ್ಸಿನಲ್ಲಿ ಉಪನಯನವನ್ನು ನಿರಾಕರಿಸಿದ್ದು ಉಪೇಕ್ಷಿಸಬಹುದಾದ ಕ್ಷುದ್ರ ಘಟನೆಯಲ್ಲ. ಉತ್ತಮ ವರ್ಣದವನಾಗಿ ಅಗ್ರಹಾರದ ಮುಖ್ಯಸ್ಥನ ಮಗನಾಗಿ ಎಲ್ಲ ಬಗೆಯ ಸವಲತ್ತುಗಳನ್ನೂ ಅನಾಯಾಸ ವಾಗಿ ಪಡೆದಿದ್ದ ಬಸವನಿಗೆ ಉಪನಯನ ಸಂಸ್ಕಾರವನ್ನು ತಿರಸ್ಕರಿಸಲು ಅವನ ತೀವ್ರ ಮಾನಸಿಕ ಅತೃಪ್ತಿ ಕಾರಣ. ಬ್ರಾಹ್ಮಣ್ಯ ತನಗೆ ಮನುಷ್ಯತ್ವವನ್ನು ದೊರಕಿಸಲಾರದೆಂದು ಅವನಿಗೆ ಅನ್ನಿಸಿತು. ಶ್ರೇಷ್ಠವರ್ಣವೆಂಬ ಕಾರಣದಿಂದ ಅದು ಇತರ ವರ್ಣಗಳನ್ನು ಅದೇ ಹೀನಸ್ಥಿತಿಯಲ್ಲಿ ಮುಂದುವರಿಯಲು ಪ್ರಚೋದಿಸುತ್ತದೆ. ಅದು ಬೆಳಸಿ ಕೊಂಡಿರುವ ಕರ್ಮಾಚಾರಗಳ ಜಟಿಲತೆಯು ನಿರ್ಮಲ ಭಕ್ತಿಗೆ ಅಡ್ಡಿಯಾಗುತ್ತದೆ. ಬಸವ ಉಪನಯನವನ್ನು, ತನ್ಮೂಲಕ ಬ್ರಾಹ್ಮಣ್ಯವನ್ನು, ತನ್ಮೂಲಕ ಉತ್ತಮ ಜನ್ಮದಿಂದ ಸ್ವಾಭಾವಿಕವಾಗಿ ಲಭ್ಯವಾಗುವ ಎಲ್ಲ ಸವಲತ್ತುಗಳನ್ನು ನಿರಾಕರಿಸಿ ಹೊರಬಂದವನು. ಕೂಡಲಸಂಗಮದ ದೇವಾಲಯಕ್ಕೆ ಹೋದ. ಅಲ್ಲಿ ಅವನಿಗೆ ಆಶ್ರಯವೇನೋ ಸಿಕ್ಕಿತು. ಅಲ್ಲಿಯ ಸ್ಥಾನಪತಿಗಳು ಅವನ ಭಕ್ತಿಯನ್ನೂ ಉಜ್ವಲ ಆದರ್ಶಾಭಿಮಾನವನ್ನೂ ಕಂಡು ಮನಸೋತು ಅಲ್ಲೇ ಇದ್ದುಬಿಡುವಂತೆ ಕೇಳಿ ಕೊಂಡರು. ಬಸವಣ್ಣ ಕೇವಲ ಭಕ್ತನಾಗಿದ್ದರೆ, ಅವನ ಭಕ್ತಿಸಾಧನೆಗೆ ಕೂಡಲ ಸಂಗಮಕ್ಕಿಂತ ಒಳ್ಳೆಯ ಅವಕಾಶ ದೊರೆಯಲಾರದಿತ್ತು. ಶಿವನ ಸಾನ್ನಿಧ್ಯ, ನದಿಗಳ ಸಂಗಮಸ್ಥಾನ, ದಿನವೂ ಬರುವ ಭಕ್ತವರ್ಗ, ದೇವಾಲಯಕ್ಕೆ ಒಳ್ಳೆಯ ಆದಾಯ, ಭಕ್ತನೆಂಬ ಕೀರ್ತಿ, ಮೈಗೆ ಸ್ವಲ್ಪವೂ ನೋವು ಕೊಡದೆ ಜನರಿಂದ ಮಹಾ ಶಿವಭಕ್ತ ನೆಂಬ ಪ್ರಶಂಸೆಯನ್ನು ಪಡೆಯುವ, ತನ್ನ ಎಲ್ಲ ಕಾಲವನ್ನೂ ಶಿವಪೂಜೆ ಸಂಕೀರ್ತನ ಧ್ಯಾನಗಳಲ್ಲಿ ಕಳೆಯುವ ಸದವಕಾಶ ಅಲ್ಲಿತ್ತು. ಬ್ರಾಹ್ಮಣನಾಗಿ ಅಗ್ರಹಾರವನ್ನು ನಿರಾಕರಿಸಿದ ಬಸವ ಮತ್ತೆ ಕೂಡಲಸಂಗಮದ ದೇವಾಲಯವನ್ನೂ ನಿರಾಕರಿಸಿದ, ತನ್ಮೂಲಕ ಒಟ್ಟಾರೆ ದೇವಸ್ಥಾನ ವ್ಯವಸ್ಥೆಯನ್ನೇ ನಿರಾಕರಿಸಿದ. ಬ್ರಾಹ್ಮಣ್ಯ ಉತ್ತಮ

ಅಧಮ ಜಾತಿಗಳ ಅಂತರವನ್ನು ಪೋಷಿಸಿದರೆ ದೇವಾಲಯ ಆ ಅಂತರದ ಜೊತೆ ಶ್ರೀಮಂತ ದರಿದ್ರ ಅಂತರವನ್ನೂ ಪೋಷಿಸುವ ಸಂಸ್ಥೆಯಾಗುತ್ತದೆ. ಬ್ರಾಹ್ಮಣ್ಯದಲ್ಲಿ ಕರ್ಮಗಳು ದೈವಕ್ಕೆ ಅಡ್ಡಿಯಾದರೆ, ಇಲ್ಲಿ ಅರ್ಚಕ ಅಡ್ಡಿಯಾಗಬಹುದು. ದೇವಾಲಯದೊಳಕ್ಕೆ ಪ್ರವೇಶಿಸುವ ಹಕ್ಕು ಕೆಲವರಿಗೆ ಮಾತ್ರ ಮೀಸಲು. ಎಲ್ಲರಿಗೂ ಮುಕ್ತ ಪ್ರವೇಶವಿಲ್ಲದ ದೇವಾಲಯ ಅಸ್ಪೃಶ್ಯರನ್ನು ಬಹಿಷ್ಕರಿಸಿದರೆ ಬಸವನು ದೇವಾಲಯವನ್ನೇ ಬಹಿಷ್ಕರಿಸಿದ.

ಕೂಡಲಸಂಗಮದಿಂದ ಬಿಜ್ಜಳನ ರಾಜಧಾನಿಗೆ ಹೋಗುವ ಸಂದರ್ಭದಲ್ಲಿ ಅವನಿಗೂ ಶಿವನಿಗೂ ಕನಸಿನಲ್ಲಿ ವಾಗ್ವಾದ ನಡೆದಂತೆ ಕವಿ ಹರಿಹರ ಚಿತ್ರಿಸುತ್ತಾನೆ. ಬಸವನಿಗೆ ಹೋಗಲು ಇಷ್ಟವಿಲ್ಲ; ಶಿವ ಹೋಗಲು ಒತ್ತಾಯಪಡಿಸಿದ. ಇದು ಬಸವಣ್ಣನ ಹೋಳಾದ ಮನಸ್ಸಿನ ಹೋರಾಟದ ಸಾಂಕೇತಿಕ ರೂಪವೆಂದು ಹೇಳಬೇಕಾಗಿಲ್ಲ. ಅವನ ಮನಸ್ಸಿನ ಒಂದು ಭಾಗವು, ಇಲ್ಲೇ ಎಲ್ಲ ಇದೆ, ಸುಖವಾಗಿ ಇದ್ದು ಭಕ್ತಿ ಸಾಧನೆ ಮಾಡು ಎಂದು ಹೇಳಿದರೆ, ಅದೇ ಅವನ ಮನಸ್ಸಿನ ಶಿವರೂಪ ಆ ಕ್ಷೇತ್ರವನ್ನೂ ನಿರಾಕರಿಸಲು ಹೇಳುತ್ತದೆ. ಭಕ್ತಿ ಪ್ರಪಂಚ ಬಹುಸಾರಿ ಸ್ವಾರ್ಥದ ಅಥವಾ ಸ್ವಂತ ಉದ್ಧಾರದ ಕ್ಷೇತ್ರವಾಗಿ ಬಿಡುತ್ತದೆಯಾದ ಕಾರಣ ಅದು ಬಸವನಿಗೆ ಬೇಕಾಗಲಿಲ್ಲ. ಹೊರಗಿನ ಜಗತ್ತು ಬಸವನನ್ನು ಕೈಬೀಸಿ ಕರೆಯಿತು. ಸಮಾಜಹಿತ ಸ್ವಂತ ಹಿತಕ್ಕಿಂತ ದೊಡ್ಡದಾಗಿ ಕಾಣಿಸಿತು.

ಕೂಡಲ ಸಂಗಮದಿಂದ ಮಂಗಳವೇಡೆ ರಾಜಧಾನಿಗೆ ಭಂಡಾರಿಯಾಗಿ ಬಂದು ಸೇರಿಕೊಂಡ. ಹೇಳಿ ಕೇಳಿ ಅದು ರಾಜಕೀಯ ರಂಗ; ಅಧಿಕಾರ, ಐಶ್ವರ್ಯ, ರಾಜನ ಕೃಪೆ, ಕೆಳಗಿನ ಅಧಿಕಾರಿಗಳ ಓಲೈಕೆ ಎಲ್ಲವೂ ಬಸವನಿಗೆ ಯಥೇಷ್ಟವಾಗಿ ಪ್ರಾಪ್ತವಾಗಿದ್ದುವು. ಸಾಮಂತ ರಾಜನಾಗಿದ್ದ ಬಿಜ್ಜಳ ತನ್ನ ರಾಜಧಾನಿಯನ್ನು ಮಂಗಳವೇಡೆಯಿಂದ ಕಲ್ಯಾಣಕ್ಕೆ ವರ್ಗಾಯಿಸಿ ಚಾಲುಕ್ಯ ಚಕ್ರವರ್ತಿಯೆಂದು ಘೋಷಿಸಿಕೊಂಡ. ಸಾಮಂತನ ಭಂಡಾರಿಯಾಗಿದ್ದ ಬಸವನು ಚಕ್ರವರ್ತಿಯ ಭಂಡಾರಿಯಾದ. ಹೆಚ್ಚಿನ ಅಧಿಕಾರ, ಹೆಚ್ಚಿನ ಐಶ್ವರ್ಯ, ಚಕ್ರವರ್ತಿಯ ಕೃಪೆ, ಕೆಳಗಿನ ಅಧಿಕಾರಿಗಳ ಓಲೈಕೆ, ಸಾಮಂತ ದೊರೆಗಳ ಕಪ್ಪಕಾಣಿಕೆ ವಸೂಲು ಮಾಡುವ ದರ್ಪ ಎಲ್ಲವೂ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಪ್ರಾಪ್ತವಾದುವು. ಸದಾ ಎಚ್ಚರ ಸ್ಥಿತಿಯ ಬಸವನನ್ನು ಇವು ಯಾವುವೂ ಮರುಳುಗೊಳಿಸಲಿಲ್ಲ. ಸದಾ ಅತೃಪ್ತನಾಗಿದ್ದ ಬಸವ ಇಲ್ಲೂ ಅತೃಪ್ತನಾಗಿಯೇ ಉಳಿದ ಮತ್ತು ತನ್ನ ಜಾಯಮಾನದಂತೆ ಅವೆಲ್ಲವನ್ನೂ ನಿರಾಕರಿಸಿದ. ಆದರೆ, ಇಲ್ಲಿಯ ನಿರಾಕರಣೆ ಅಗ್ರಹಾರ, ದೇವಾಲಯಗಳನ್ನು ಬಿಟ್ಟು ಹೊರ ಬಂದಂತಿರದೆ ಬೇರೆ ರೂಪವನ್ನು ಪಡೆದುಕೊಂಡಿತು. ಸಮಾಜದ ಒಳಿತಿಗಾಗಿ ದುಡಿಯುತ್ತಿದ್ದ ಅವನು ರಾಜಕೀಯ ರಂಗದಿಂದ ಭೌತಿಕವಾಗಿ ದೂರ ಹೋಗುವುದು ಮೂರ್ಖತನವೆಂದು ಭಾವಿಸಿದ. ಅಧಿಕಾರ, ಹಣ, ಸ್ಥಾನಮಾನಗಳು ತನಗೆ

ತಂದುಕೊಟ್ಟ ಎಲ್ಲ ಸವಲತ್ತುಗಳನ್ನೂ ಸಮಾಜದ ಕಡೆ ತಿರುಗಿಸಿದ. ಇದು ಅವನ ವಚನಗಳಲ್ಲೇ ವ್ಯಕ್ತವಾಗಿದೆ. ಆದರೆ, ಅವನು ಎಂದೂ ಪ್ರಭುತ್ವದ ಹೆಜ್ಜೆಯ ಜೊತೆ ಹೆಜ್ಜೆ ಇಡಲಿಲ್ಲ. ಚಕ್ರವರ್ತಿ ಬಿಜ್ಜಳನಿಗೂ ಅವನಿಗೂ ಉದ್ದಕ್ಕೂ ಒಂದಲ್ಲ ಒಂದು ಬಗೆಯ ಘರ್ಷಣೆಗಳು ನಡೆದುವೆಂದೂ ಹರಳಯ್ಯ ಮಧುವಯ್ಯ ಪ್ರಸಂಗದಲ್ಲಿ ಇದು ಉತ್ಕಟಸ್ಥಿತಿಗೆ ಹೋಗಿ ಮುಟ್ಟಿತೆಂದೂ ಕತೆಗಳಿವೆ. ಅಧಿಕಾರದಲ್ಲಿದ್ದೂ ಅದಕ್ಕೆ ಅಂಟಿಕೊಳ್ಳದೆ, ಆದರೆ ಅದನ್ನು ಕೈಬಿಡದೆ ಆ ಅಧಿಕಾರವನ್ನು ನಿರಾಕರಿಸಿದ ರೀತಿ ಬಸವನಿಗೇ ವಿಶಿಷ್ಟವಾದುದು.

ಬ್ರಾಹ್ಮಣ್ಯವನ್ನು ನಿರಾಕರಿಸಿದ ಅವನಿಗೆ ಎಲ್ಲ ಜಾತಿಗಳನ್ನೂ ಸಮಾನವಾಗಿ ಕಾಣುವ ದೃಷ್ಟಿಯನ್ನು ಬೆಳಸಿಕೊಳ್ಳುವುದು ಸಾಧ್ಯವಾಯಿತು. ದೇವಸ್ಥಾನದ ನಿರಾಕರಣೆ ದೈವದ ನಿರಾಕರಣೆ ಆಗಲಿಲ್ಲ, ದೈವವನ್ನು ಇನ್ನೂ ಹತ್ತಿರಕ್ಕೆ ಬರಮಾಡಿಕೊಳ್ಳುವ ಸಾಧನವಾಯಿತು. ದೇವಾಲಯದಲ್ಲಿ ಅರ್ಚಕನು ದೈವ ಮತ್ತು ಭಕ್ತರ ಮಧ್ಯೆ ನಿಲ್ಲುತ್ತಾನೆ. ಮೈಮೇಲೆ ಇಷ್ಟಲಿಂಗವನ್ನು ಧರಿಸಿದಾತನಿಗೆ ದೈವದ ಜೊತೆ ಹೃದಯ ಸಂವಾದವನ್ನು ಬೆಳಸಲು ಮೂರನೆಯವನ ಮಾಧ್ಯಮ ಅನವಶ್ಯಕವಾಗುತ್ತದೆ. ಶಿವ ಮತ್ತು ಭಕ್ತರ ಮಿಲನ ಗಂಡು ಮತ್ತು ಹೆಣ್ಣಿನ ಮಿಲನವಿದ್ದಂತೆ. ಆ ಮಿಲನದಲ್ಲಿ ಮೂರನೆಯವರ ಪ್ರವೇಶ ಮೂಲೋದ್ದೇಶವನ್ನೇ ಹಾಳು ಮಾಡುವಂತಹುದು. ಈ ಮಾತು ನನ್ನ ಮಾತಲ್ಲ, ಬಸವಣ್ಣನೇ ಈ ಅರ್ಥದ ಮಾತು ಹೇಳುತ್ತಾನೆ. ಇಷ್ಟಲಿಂಗ ಧಾರಣೆಯಲ್ಲಿ ಭಕ್ತನಾದವನು ಶಿವನ ಸಾನ್ನಿಧ್ಯವನ್ನು ಸದಾ ಅನುಭವಿಸಬಹುದು. ಏಕಾಂತದಲ್ಲಿ ತನ್ನ ಇಷ್ಟಲಿಂಗವನ್ನು ಪೂಜಿಸುತ್ತ ಅದರಲ್ಲಿ ತಾದಾತ್ಮ್ಯವನ್ನು ಪಡೆಯ ಬಹುದು. ಈ ಪೂಜೆಯಲ್ಲಿ ವೈಭವ, ಆಡಂಬರವಿಲ್ಲ; ಪ್ರವೇಶದ ಹಕ್ಕು ನಿರ್ಬಂಧ ಇಲ್ಲ. ಇಷ್ಟಲಿಂಗದ ಪರಿಕಲ್ಪನೆ ಶ್ರೀಮಂತ–ಬಡವ, ಉತ್ತಮ–ಕನಿಷ್ಠ ಎಲ್ಲರನ್ನೂ ಒಂದು ಸಮದಲ್ಲಿ ನಿಲ್ಲಿಸುವ ಬಗೆ ಹೀಗೆ. ಇಂತಹ ಭಕ್ತಿಯ ವೈಯಕ್ತಿಕ ಸ್ಥಿತಿಯ ಮುಕ್ತ ವಾತಾವರಣದಲ್ಲಿ ಬಸವನಂತೆ ಹಲವಾರು ಜನ ತಮ್ಮ ಸ್ವಕೀಯ ಅನುಭವಗಳನ್ನು ಬಿಡಿ ಬಿಡಿ ವಚನಗಳಲ್ಲಿ ತಮಗೆ ತೋರಿದ್ದನ್ನು ತಮಗೆ ತೋರಿದ ರೀತಿ ಭಾಷೆಗಳಲ್ಲಿ ಹೇಳಿಕೊಳ್ಳಲು ಸಾಧ್ಯವಾಯಿತು. ಹನ್ನೆರಡನೆಯ ಶತಮಾನದಲ್ಲಿ ನಿರ್ಮಾಣವಾದ ಸಾಮಾಜಿಕ ವಾತಾವರಣಕ್ಕೂ ವಚನಗಳ ವಸ್ತು ಬಂಧಗಳಿಗೂ ತಾರ್ಕಿಕ ಸಂಬಂಧವಿದೆ. ವಚನಗಳು ವಸ್ತುವಿಗಾಗಿ ಹಿಂದಿನ ಕಾಲದತ್ತ ನೋಡುವು ದಿಲ್ಲ; ಸಮಕಾಲೀನದತ್ತ ನೋಡುತ್ತವೆ ಅಥವಾ ವಚನಕಾರನ ಅನುಭವದತ್ತ ಇಣುಕುತ್ತವೆ. ಕತೆ ಹೇಳಿ ರಂಜಿಸುವುದು ಅವುಗಳ ಉದ್ದೇಶವಲ್ಲ; ಅನುಭವಗಳನ್ನು ಹೇಳಿ ಜನರನ್ನು ಉದ್ದೀಪನಗೊಳಿಸುವುದು, ವಿಚಾರಗಳನ್ನು ಹೇಳಿ ಜನರನ್ನು ಎಚ್ಚರ ಗೊಳಿಸುವುದು ಅವುಗಳ ಗುರಿ. ಅನೇಕ ವಚನಕಾರರಲ್ಲಿ ಕಾಣುವ ಚಿಂತನೆಯ ಹೊಸತನ, ವಚನಗಳ ಮುಕ್ತ ಛಂದ ಇವು ಆಧುನಿಕರಿಗೂ ಹೊಸತು, ಮತ್ತು ಅಧ್ಯಯನ ಯೋಗ್ಯ ಎನ್ನಿಸುವಷ್ಟು ಉಜ್ವಲವಾಗಿವೆ.

ಬಸವನನ್ನು ಕುರಿತು ಮಾತನಾಡುವಾಗ ನಾನು ಉಳಿದ ವಚನಕಾರರ ಮಾತನ್ನೂ ಹೇಳುತ್ತಿರುವುದಕ್ಕೆ ಉದ್ದೇಶವಿದೆ. ಅಂದಿನ ಸಮಾಜೋ–ಧಾರ್ಮಿಕ ಚಳವಳಿಯ ಎಲ್ಲ ಯಶಸ್ಸಿಗೆ ಬಸವಣ್ಣನೊಬ್ಬನೇ ಕಾರಣವೆನ್ನುವಷ್ಟರಮಟ್ಟಿಗೆ ಕೆಲವರು ಘೋಷಿಸುವುದನ್ನು ನಾನು ವಿರೋಧಿಸುತ್ತ ಬಂದಿದ್ದೇನೆ. ಅಂದಿನ ಚಳವಳಿಯ ನಾಯಕ, ಕೇಂದ್ರಬಿಂದು ಬಸವ ಎಂಬಲ್ಲಿ ಅನುಮಾನ ಇಲ್ಲ. ಅಲ್ಲಮನಂತಹ ಅನುಭಾವಿ, ಸಿದ್ಧರಾಮನಂತಹ ಸಮಾಜಕಾರ್ಯಕರ್ತ, ಚನ್ನಬಸವನಂತಹ ಕುಶಾಗ್ರಮತಿ, ಚೌಡಯ್ಯನಂತಹ ಹರಿತ ನಾಲಗೆಯ ವ್ಯಕ್ತಿ, ಮಹಾದೇವಿಯಂತಹ ದಿಟ್ಟ ವಿರಾಗಿ, ಮುಕ್ತಾಯಕ್ಕನಂತಹ ಬುದ್ಧಿಜೀವಿ–ಇವರು ಯಾರಿಗೂ ಬಸವನಿಗೆ ನಾಯಕನಾಗಲು ಇದ್ದಂತಹ ಅನುಕೂಲಸ್ಥಿತಿಯಿರಲಿಲ್ಲ. ಆಯಾ ನಿಟ್ಟಿನಲ್ಲಿ ಅವರೆಲ್ಲ ಒಂದು ರೀತಿ ಬಸವನಿಗಿಂತ ಮಿಗಿಲು. ಆದರೆ ಹುಟ್ಟಿದ ಬ್ರಾಹ್ಮಣ ಜಾತಿ, ದೊರೆತ ಅಧಿಕಾರದ ಸ್ಥಾನಬಲ, ಇವುಗಳ ಜೊತೆ ಅಕೃತಕ ವಿನಯ, ಉದಾತ್ತ ಉದ್ದೇಶ, ಸಂಘಟನಾಚಾತುರ್ಯ ಇವುಗಳಿಂದ ಕೂಡಿದ ಬಸವನಿಗೆ ತನ್ನ ಸುತ್ತಮುತ್ತ ತನ್ನಂತೆ ಯೋಚಿಸುವ ಜನರನ್ನು ಒಂದುಗೂಡಿಸುವುದು ಸಾಧ್ಯವಾಯಿತು. ಅಂದಿನ ಚಳವಳಿಯ ಯಶಸ್ಸಿಗೆ ಬಸವನಂತೆ ಉಳಿದವರೂ ತಮ್ಮ ತಮ್ಮ ರೀತಿಯಲ್ಲಿ ಪಾತ್ರರು ಎಂಬುದನ್ನು ಮರೆಯಬಾರದು. ಬಸವ ಅಂದಿನ ಸಾಮಾಜಿಕ ಎಚ್ಚರ, ಅದರ ಫಲವಾದ ಚಳವಳಿಯ ಉತ್ಕೃಷ್ಟ ಸಂಕೇತ ಎಂದು ಭಾವಿಸುವುದು ಉಚಿತವಾದುದು. "ಗಾಂಧೀಜಿ ನಮಗೆ ಸ್ವಾತಂತ್ರ್ಯವನ್ನು ತಂದುಕೊಟ್ಟರು" ಎಂಬ ಮಾತನ್ನು ನಾವು ವೈಚಾರಿಕವಾಗಿ ಎಷ್ಟು ಎಚ್ಚರಿಕೆಯಿಂದ ಯಾವ ಅರ್ಥದಲ್ಲಿ ಸ್ವೀಕರಿಸುತ್ತೇವೆ ಹಾಗೆ "ಬಸವಣ್ಣನಿಂದ ಆಂದೋಲನ ನಡೆಯಿತು" ಎಂಬ ಮಾತನ್ನೂ ಹಾಗೆಯೇ ಸ್ವೀಕರಿಸಬೇಕು.

ಬಸವ ಅನ್ವೇಷಿಸಿ ಕಂಡುಕೊಂಡ ಪ್ರಪಂಚ ಸಾಮಾಜಿಕ ಸಮಾನತೆಯ ಭಕ್ತಿಯ ಪ್ರಪಂಚ. ಅಲ್ಲಿ ಸ್ವಾರ್ಥ, ವಂಚನೆಗಳಿಗೆ ಸ್ಥಾನವಿಲ್ಲ; ಎಲ್ಲರೂ ದುಡಿಯುತ್ತ ತಮ್ಮ ದುಡಿಮೆಯ ಫಲವನ್ನು ಹಂಚಿಕೊಂಡು ಬದುಕುತ್ತಾರೆ. ಅವನ ಕನಸಿನ ಆದರ್ಶ ಅವನ ಕಾಲದಲ್ಲೇ ನಿಜವಾಯಿತೇ ಎಂಬ ಪ್ರಶ್ನೆಗೆ ಉತ್ತರ ಕೊಡಬೇಕಿಲ್ಲ. ಆದರೆ ಅದರ ಒಂದು ಭಾಗವಾದರೂ ನಿಜವಾಯಿತೇ ಎಂಬ ಪ್ರಶ್ನೆಗೆ 'ಹೌದು' ಎಂದೇ ಸ್ಪಷ್ಟ ಉತ್ತರ. ಅವನ ಕನಸು ಮುಂದೆ ಏನಾಯಿತು? ಅವನ ಸಮಾಜೋ–ಧಾರ್ಮಿಕ ಚಳವಳಿ ಮುಂದೆ ಕೇವಲ ಮತವಾಯಿತೇ? ಅಥವಾ ಏನಾದರೂ ಸಾಮಾಜಿಕ ಚಳವಳಿಯ ಲಕ್ಷಣಗಳನ್ನು ಸ್ವಲ್ಪವಾದರೂ ಉಳಿಸಿಕೊಂಡಿತೇ? ಬಸವ ಜಯಂತಿಯಂದು ಬಸವನನ್ನು ಉದಾತ್ತೀಕರಿಸಿ, ದೈವವೆಂದು ಪ್ರವಾದಿ ಎಂದು ಪ್ರಶಂಸಿಸುವ ಜನ ಆ ಬಗ್ಗೆ ಚಿಂತಿಸುವ ಅಗತ್ಯವಿದೆ. ಏಕೆ ಹೀಗಾಯಿತು ಎಂಬ ವಿಷಾದವು ಎಲ್ಲ ಚಳವಳಿಗಳೂ ಕ್ರಮೇಣ ಹೀಗಾಗಬಹುದು ಎಂಬ ಸಮಾಧಾನದಿಂದ ಕಡಮೆಯಾಗಬೇಕಾಗಿಲ್ಲ.

ಆದರೆ, ಇಂದಿನ ಬಹುಸಂಖ್ಯೆಯ ಲಿಂಗಾಯತ ಬುದ್ಧಿಜೀವಿಗಳ ಒಂದು ಬಯಕೆಯನ್ನು ವ್ಯಕ್ತಪಡಿಸುವುದಕ್ಕೆ ಈ ಲೇಖನಕ್ಕಿಂತ ಒಳ್ಳೆ ಅವಕಾಶ ಬೇರೊಂದಿರಲಾರದು. ಬಸವ ಇತರ ಕೆಳವರ್ಗದವರ ಮನೆಗಳಿಗೆ ಮಾತ್ರವಲ್ಲ, ಅಸ್ಪೃಶ್ಯರ ಮನೆಗಳಿಗೂ ಹೋಗುತ್ತಿದ್ದನೆಂಬುದಕ್ಕೆ ಪುರಾವೆಗಳಿವೆ. ಆ ಮಹಾತ್ಮನಿಗೆ ಮನುಷ್ಯ ಮನುಷ್ಯನಲ್ಲಿ ಭೇದ ಇರಲಿಲ್ಲ; ಅವನ ಸಮಕಾಲೀನ ಅನುಯಾಯಿಗಳೂ ಅವನಂತೆ ಆ ಭೇದಭಾವದಿಂದ ವಿಮುಕ್ತರಾಗಿದ್ದಿರಬೇಕು. ಅಸ್ಪೃಶ್ಯತೆಯ ವಿರುದ್ಧ ಭಾರತದಲ್ಲಿಯೇ ಮೊತ್ತ ಮೊದಲ ದನಿ ಎತ್ತಿದ ಬಸವ ಪರಂಪರೆಯಲ್ಲಿಯೇ ಮುಂದೆ ಅಸ್ಪೃಶ್ಯತೆಯ ಭಾವನೆಗೆ ಮಾನ್ಯತೆ ಬಂದುದು ನಾಚಿಕೆಗೇಡಿನ ವಿಷಯ. ಇಂದಿನ ವೀರಶೈವ ಮಠಾಧೀಶರು ಸಮಾಜದ ಪ್ರತಿರೋಧವನ್ನೂ ಲೆಕ್ಕಿಸದೆ ತಮ್ಮ ಮಠಗಳನ್ನೂ ಪೂಜಾಮಂದಿರಗಳನ್ನೂ ಎಲ್ಲ ಬಣ್ಣ, ಜಾತಿಗಳವರಿಗೆ ಮುಕ್ತವಾಗಿ ತೆರೆದಿಡುವಂತಹ, ಯಾರು ಕರೆದರೂ ಅಲ್ಲಿಗೆ ಹೋಗುವಂತಹ ದಿಟ್ಟ ನಿರ್ಧಾರವನ್ನು ಕೈಗೊಂಡಾರೆಯೇ? 'ಅಸಾಧ್ಯ' ಎಂದು ಯಾರಾದರೂ ಹೇಳಿದರೆ, ಅಸಾಧ್ಯವಾದುದನ್ನು ಸಾಧಿಸಿ ತೋರಿದ ಬಸವನ ಅನುಯಾಯಿಗಳೆಂದು ಸಾರ್ಥಕವಾಗಿ ತೋರಿಸಿಕೊಡುವಲ್ಲಿ ವೀರಶೈವ ಮಠಾಧೀಶರು ಹಿಂದೆ ಬೀಳಬಾರದು. ಲೌಕಿಕರೂ ಅಂತರಜಾತೀಯ ವಿವಾಹಗಳನ್ನು ಆಚರಿಸಿ ಮಾರ್ಗದರ್ಶಕರಾಗಲಿ.

ಅವರು ಮನಸ್ಸು ಮಾಡಲಿ; ಜನ ಗೋಣಗುತ್ತ ಅವರನ್ನು ಅನುಸರಿಸುತ್ತಾರೆ.



# 16

# ದಕ್ಷಿಣ ಏಷಿಯದ ಭಕ್ತಿ ಚಳವಳಿಗಳ ಹಿನ್ನೆಲೆಯಲ್ಲಿ ಬಸವ ಚಳವಳಿ

ದಕ್ಷಿಣ ಏಷಿಯದ ಧಾರ್ಮಿಕ/ಆಧ್ಯಾತ್ಮಿಕ ಪರಂಪರೆಯನ್ನು ಶ್ರೀಮಂತಗೊಳಿಸಿ ಅದನ್ನು ರೂಪಿಸುವಲ್ಲಿ ಭಕ್ತಿ ಚಳವಳಿಯು ಬಹು ಪ್ರಮುಖ ಪಾತ್ರವನ್ನು ವಹಿಸಿದೆ; ಸಮಾಜದ ಭಿನ್ನ ವರ್ಗಗಳ ಸಾಮಾಜಿಕ ಮೌಲ್ಯವ್ಯವಸ್ಥೆಯ ಮೇಲೆ ಅದರ ಪ್ರಭಾವ ಅಪರಿಮಿತ. ವಿಶ್ವದ ಈ ಭೂಭಾಗದಲ್ಲಿ ಹಲವು ಭಿನ್ನ ಹೆಸರುಗಳಲ್ಲಿ ಬೇರೆ ಬೇರೆ ಕಾಲಗಳಲ್ಲಿ ಆ ಆಂದೋಲನವು ಕಾಣಿಸಿಕೊಂಡಿದ್ದರೂ ಅವುಗಳ ಕೆಲವು ಸಮಾನ ಲಕ್ಷಣಗಳನ್ನು ಗುರುತಿಸಬಹುದು; ಆ ಸಮಾನ ಲಕ್ಷಣಗಳು ಮುಖ್ಯವಾಗಿ ಸಾಮಾಜಿಕ ಸ್ಪಂದನಕ್ಕೆ ಸಂಬಂಧಿಸಿದುವೇ ಆಗಿವೆ.

ಅಂತಹ ಭಕ್ತಿ ಚಳವಳಿಗಳ ಸಾಮಾಜಿಕ ಆಶಯವನ್ನು ಲಕ್ಷ್ಯದಲ್ಲಿರಿಸಿಕೊಂಡು ಅವುಗಳ ಸಮಾನ ಲಕ್ಷಣಗಳನ್ನು ಗುರುತಿಸುವುದು ಈ ಸಂಪ್ರಬಂಧದ ಮುಖ್ಯ ಉದ್ದೇಶ. ಎಂಟನೇ ಶತಮಾನದಿಂದ ಮಧ್ಯಕಾಲೀನ ಯುಗದವರೆಗೆ ಅವು ದಕ್ಷಿಣ ಏಷಿಯದ ಭಿನ್ನ ಕಾಲ, ದೇಶಗಳಲ್ಲಿ ಅಭಿವ್ಯಕ್ತಗೊಂಡಿದ್ದರೂ ಅವುಗಳ ಧ್ಯೇಯ, ರಚನೆ, ಪರಿಣಾಮಗಳಲ್ಲಿ ಅವುಗಳಲ್ಲಿ ಸ್ಪಷ್ಟವಾಗಿ ಗುರುತಿಸಬಹುದಾದ ಸಮಾನಾಂಶ ಗಳು ಹಲವಿದೆ. ನನ್ನ ಈ ಅಧ್ಯಯನದ ಮಿತಿಗಳು ಸಹಜವಾಗಿಯೇ ಹಲವು : ನಾನು ಕರ್ನಾಟಕದ ಭಕ್ತಿ ಚಳವಳಿಗಳನ್ನು ಅವುಗಳ ಮೂಲಕ್ಕೆ ಹೋಗಿ ಸೂಕ್ಷ್ಮವಾಗಿ ಅಧ್ಯಯನ ಮಾಡಿರುವಂತೆ ಉಳಿದ ಚಳವಳಿಗಳ ಬಗ್ಗೆ ಮಾಡಿಲ್ಲ. ಕರ್ನಾಟಕವನ್ನು ಬಿಟ್ಟರೆ ಆ ಎಲ್ಲ ಚಳವಳಿಗಳ ಹಿನ್ನೆಲೆಯಾಗಿದ್ದ ರಾಜಕೀಯ, ಸಾಮಾಜಿಕ, ಧಾರ್ಮಿಕ ಹಿನ್ನೆಲೆಗಳ ಪ್ರತ್ಯಕ್ಷ ಪರಿಚಯ ನನಗೆ ಸಾಲದು; ಅದಕ್ಕೆ ಕಾರಣ, ಆಯಾ ಚಳವಳಿಗೆ ನಿಮಿತ್ತವಾದ ಆಯಾ ಪ್ರದೇಶದ ಸಮಗ್ರ ರಾಜಕೀಯೋಧಾರ್ಮಿಕ ಪರಿಸ್ಥಿತಿಯನ್ನು ಮೂಲಕ್ಕೇ ಹೋಗಿ ವಿಸ್ತೃತವಾಗಿ ತಿಳಿಯಲು ನನ್ನಿಂದ ಸಾಧ್ಯವಿಲ್ಲ ಮತ್ತು ನಾನು ಅವಲಂಬಿಸಿರುವುದು, ಮುಖ್ಯವಾಗಿ ಅವಲಂಬಿಸಬೇಕಾಗಿ ಬಂದುದು ದ್ವಿತೀಯ ಆಕರಗಳನ್ನು, ಈ ಸಂಪ್ರಬಂಧದಲ್ಲಿ ಭಕ್ತಿ ಚಳವಳಿಯ ಉದಾಹರಣೆಗಳನ್ನು ಸಿಲೋನ್, ಪಾಕಿಸ್ತಾನ್, ಬಾಂಗ್ಲಾದೇಶ, ನೇಪಾಲ, ಪರ್ಷಿಯ ಮತ್ತು ಭಾರತ

ದೇಶಗಳಿಂದ, ಭಾರತದಲ್ಲೂ ಅಸ್ಸಾಂ, ಬಂಗಾಳ, ಒರಿಸ್ಸ, ಪಂಜಾಬ್, ಗುಜರಾತ್, ಉತ್ತರ ಪ್ರದೇಶ, ರಾಜಾಸ್ಥಾನ್, ಮಹಾರಾಷ್ಟ್ರ, ತಮಿಳುನಾಡು, ಆಂಧ್ರಪ್ರದೇಶ ಮತ್ತು ಕರ್ನಾಟಕಗಳಿಂದ ತೆಗೆದುಕೊಳ್ಳಲಾಗಿದೆ. ಇವುಗಳಲ್ಲಿ ನಾನು ಕರ್ನಾಟಕದ ಚಳವಳಿಗಳನ್ನು ಹೆಚ್ಚು ಅವಲಂಬಿಸಲು ಕಾರಣ, ಅವುಗಳ ನೇರ ಪರಿಚಯವಿದೆ ಯೆಂಬುದು ಮಾತ್ರವಲ್ಲ, ಅವು ಚಳವಳಿಗಳ ಒಂದು ಮಾದರಿ (typical) ಕೂಡ ಆಗಿರುವುದು. ಆ ಎಲ್ಲ ಚಳವಳಿಗಳ ಅಂತಹ ತೌಲನಿಕ ಅಧ್ಯಯನವು ಮಾತ್ರ ಆ ಚಳವಳಿಗಳ "ವಿಶಿಷ್ಟಾಂಶ"ಗಳು ಇದ್ದರೆ (Distinctive features) ಅದನ್ನು ಗುರುತಿಸಲು ಸಹಾಯ ಮಾಡುತ್ತದೆ. 'ವಿಶಿಷ್ಟಾಂಶ'ವೆಂದರೆ ಆಯಾ ಚಳವಳಿಯು ಇತರ ಚಳವಳಿಗಿಂತ ಭಿನ್ನವಾಗಿರುವ ಲಕ್ಷಣವೆಂಬುದನ್ನು ಪ್ರತ್ಯೇಕ ಹೇಳಬೇಕಾಗಿಲ್ಲ.

ಭಕ್ತಿ ಚಳವಳಿಗಳು, ಡಾ. ಎಚ್. ಎಂ. ಮರುಳಸಿದ್ಧಯ್ಯನವರ ಪ್ರಕಾರ ಧರ್ಮಗಳ ಚಲನರೂಪಿಗಳು : ಜಡ ರಿಚುಯಲ್ಲುಗಳಿಂದ ಒಂದು ಪ್ರತಿಷ್ಠಿತ ವರ್ಗಕ್ಕೆ ಸೀಮಿತವಾಗಿದ್ದ ಧರ್ಮಕ್ಕೆ ಚೈತನ್ಯ, ಚಾಲನೆ ತಂದು ಕೊಟ್ಟಂಥವು. ಬರ್ಗ್‌ಸನ್ ಹೇಳುವಂತೆ "... ಧರ್ಮವೊಂದಿಲ್ಲದ ಯಾವುದೇ ಸಮಾಜವು ಎಂದೂ ಇರಲಿಲ್ಲ." ಧರ್ಮವೆನ್ನುವುದು ವ್ಯಕ್ತಿಗೆ ಸೀಮಿತವಲ್ಲ, ಒಂದು ಸಮೂಹಕ್ಕೆ ಅದು ಸೇರಿದ್ದು. "ಒಬ್ಬ ಕ್ರಿಶ್ಚಿಯನ್ ಕ್ರಿಶ್ಚಿಯನ್ನೇ ಅಲ್ಲ" ಎಂಬ ಪ್ರಸಿದ್ಧೋಕ್ತಿ ಅರ್ಥಪೂರ್ಣ. ಯಾವುದೇ ಧರ್ಮವು ಕೇವಲ ನೀತಿಬೋಧನೆ, ಅಮೂರ್ತ ಚಿಂತನೆಗಳಿಂದ ಕೂಡಿದ್ದರೆ ಅದು ಜನಸಾಮಾನ್ಯರಲ್ಲಿ ಹಬ್ಬಲಾರದು. ಅನಿವಾರ್ಯವಾಗಿ ಅದು ಕೆಲವು ನಂಬಿಕೆಗಳು, ರಿಚುಯಲ್ಲುಗಳು, ದೇವ ಮಂದಿರಗಳನ್ನು ಹೊಂದಿ ಜನತೆ ದಿನವೂ ಆ ರಿಚುಯಲ್ಲುಗಳ ಆಚರಣೆಗಳ ಮೂಲಕ ಅವರ ಆ ಧರ್ಮದ ನಿಷ್ಠೆ ಉಳಿದು ಬೆಳೆದು ಬರುವಂತಿರಬೇಕು. ಕ್ರಮೇಣ, ದೇವಮಂದಿರಗಳ ರಿಚುಯಲ್ಲುಗಳ ನಿಯಂತ್ರಣವು ಕೆಲವರ ಕೈಗೆ ಸಿಲುಕಿ ಅವರು ಪ್ರಬಲರಾಗುತ್ತಾರೆ; ಸಾಮಾನ್ಯರು ಕೇವಲ ಅನುಯಾಯಿಗಳಾಗುತ್ತಾರೆ. ಒಂದು ಧರ್ಮ ಜಡಗೊಳ್ಳುವ ರೀತಿ ಅದು; ಅದರ ಅನೇಕ ರಿಚುಯಲ್ಲುಗಳು ತಮ್ಮ ಅರ್ಥವನ್ನು ಕಳೆದುಕೊಳ್ಳುತ್ತವೆ. ಜಡಗೊಂಡ ಧರ್ಮಗಳನ್ನು ಭಕ್ತಿಚಳವಳಿಗಳು ಸಮಾಜೀಕರಿಸಿ ಅವುಗಳಿಗೆ ಚಲನಶೀಲತೆಯನ್ನು ತಂದುಕೊಟ್ಟುದರ ಫಲವಾಗಿ, ಆ ಚಳವಳಿಗಳು ಸಹಜವಾಗಿಯೇ ಸಾಮಾನ್ಯ ಜನತೆಗೆ ಪ್ರಿಯವಾದುವು; ಆ ಚಳವಳಿಗಳು ಅಂದು ಬೀರಿದ ಪ್ರಭಾವವನ್ನು ಇಂದೂ ಗುರುತಿಸಬಹುದು.

ಅದಕ್ಕೆ ಇವು ಕೆಲವು ಉದಾಹರಣೆಗಳು : ವಿದ್ಯಾಪತಿ, ಚಂಡಿದಾಸ (ಇವನಿಗೂ ಅಗಸರ ಹೆಣ್ಣಿಗೂ ಪ್ರಣಯ ಸಂಬಂಧವಿದ್ದಿತೆಂಬ ಕತೆಗಳಿವೆ!), ನೀಲಕಂಠ ಮುಖ್ಯೋಪಾಧ್ಯಾಯ, ರಾಮಪ್ರಸಾದ್ (ಜಮೀನುದಾರನೊಬ್ಬನ ಕೈಕೆಳಗೆ ಇವನು ಕರಣಿಕ), ಕಮಲಾಕಾಂತ ಇವರು ರಚಿಸಿರುವ ಗೀತಗಳು ಬಂಗಾಳ, ಬಿಹಾರ,

ನೇಪಾಳಗಳಲ್ಲಿ ಈಗಲೂ ಜನಪ್ರಿಯ ಮಾತ್ರವಲ್ಲ, ಅಲ್ಲಿಯ ಜಾನಪದರ ನಿತ್ಯಜೀವನದ ಭಾಗವಾಗಿವೆ; ಅಷ್ಟೇ ಅಲ್ಲ, ಹಿಂದೂಬಾವುಲ್ ಸಂಚಾರಿ ಗಾಯಕರು ಜಾನಪದ ಶೈಲಿಯ ಹಾಡುಗಳನ್ನು ಇಂದಿಗೂ ಹಳ್ಳಿ ಹಳ್ಳಿಗಳಲ್ಲಿ ಹಾಡುತ್ತಾರೆ. ರಾಮಕೃಷ್ಣ ಪರಮಹಂಸ ಮತ್ತು ರವೀಂದ್ರನಾಥ ಠಾಕೂರರಿಬ್ಬರೂ ಬಾವುಲ್ ಹಾಡುಗಳನ್ನು ಬಹುವಾಗಿ ಮೆಚ್ಚಿಕೊಂಡಿದ್ದರು; ಪರಮಹಂಸರು ತಮ್ಮ ಮಾತುಕತೆಗಳಲ್ಲಿ ಉಲ್ಲೇಖಿಸು ತ್ತಿದ್ದರು; ಠಾಕೂರರು ಆ ಹಾಡುಗಳನ್ನು ತಮ್ಮ ಬರಹಗಳಲ್ಲಿ ಬಳಸಿಕೊಂಡಿದ್ದಾರೆ. ಬಾಂಗ್ಲಾದೇಶದ ಮುಸ್ಲಿಮ್ ಬಾವುಲ್‌ಗಾಯಕರು ಹಳ್ಳಿ ಹಳ್ಳಿಗಳಿಗೆ ಹಾಡುಗಳನ್ನು ತಲುಪಿಸಿದ್ದಾರೆ. ಶಂಕರದೇವ ಮತ್ತು ಮಹಾದೇವರ 'ಬೀರ್‌ಗೀತ' ಗಳನ್ನು (ಶ್ರೇಷ್ಠ ಅಥವಾ ಪವಿತ್ರ ಹಾಡುಗಳು) ಇಂದಿಗೂ ಅಸ್ಸಾಮಿನ ಮೂಲೆ ಮೂಲೆಗಳಲ್ಲಿ ಹಾಡಲಾಗುತ್ತದೆ. ಸಂತರ 'ಅಭಂಗ'ಗಳನ್ನು ಮಹಾರಾಷ್ಟ್ರದ ಎಲ್ಲ ಹಳ್ಳಿಗಳಲ್ಲಿ ಜನ ಹಾಡುತ್ತಾರೆ. ತಮಿಳುನಾಡಿನ ಶೈವ ನಾಯನ್ಮಾರರ 'ತೇವಾರಂ'ಗಳನ್ನು ದೇವಾಲಯಗಳ ಪೂಜಾ ಸಮಯದಲ್ಲಿ ಶ್ರದ್ಧೆಯಿಂದ ಹಾಡುತ್ತಾರೆ. ಕರ್ನಾಟಕದಲ್ಲಿ ಬಸವಣ್ಣ ಯಾರು, ಯಾವ ಕಾಲದವನು, ಏನು ಬರೆದ ಎಂಬುದೂ ತಿಳಿಯದ ಹಳ್ಳಿಯ ಜನ ತಮಗೆ ಕಷ್ಟ ಬಂದಾಗ "ಬಸವ ಬಸವ" ಎನ್ನುತ್ತಾರೆ. ಕರ್ನಾಟಕದ ಎಲ್ಲ ಜಾತಿಯ ಜನರ ಜಾನಪದದಲ್ಲಿ ರೈತರು, ಮೀನುಗಾರರು, ಬೇಡರು, ದಲಿತರು ಇತ್ಯಾದಿ ಎಲ್ಲಾ ವರ್ಗಗಳ ಸಾಹಿತ್ಯದಲ್ಲಿ ಅವನನ್ನು ಕುರಿತಾದ ಹಾಡು, ಕತೆಗಳಿವೆ; ಅವನ ಹೆಸರ ಜೊತೆ ಅವನ ಸಮಕಾಲೀನರ ಉಲ್ಲೇಖಗಳೂ ಅಲ್ಲಿ ಬರುತ್ತವೆ. ಎಂದರೆ, ಭಕ್ತಿ ಚಳವಳಿಗಳು ಘಟಿಸಿದ ಕಾಲದಲ್ಲಿ ಅದು ಸಮಾಜದ ಎಲ್ಲ ವರ್ಗಗಳನ್ನು ತಲಪಿ ಅವರಲ್ಲಿ ಉತ್ಸಾಹ ಮೂಡಿಸಿದುವು; ಆ ಪ್ರಭಾವದ ಮುದ್ರೆಯಿಂದಾಗಿ ಇಂದಿಗೂ ಅವು ಸಾಮಾಜಿಕ ಜೀವನದ ಭಾಗವಾಗಿ ಪರಿಣಮಿಸಿವೆ. ಬರ್ಟ್‌ನ್‌ಸ್ಟೈನ್ ತನ್ನ Social Mobility and Medieval South Indian Hindu Sects ಕೃತಿಯಲ್ಲಿ ಸರಿಯಾಗಿ ಗಮನಿಸಿರುವಂತೆ, "ಭಕ್ತಿ ಚಳವಳಿಯ ವಾಙ್ಮಯ ಭಾಗವನ್ನು ಗಮನಿಸಿ ಹೇಳುವುದಾದರೆ ಅದರ ಕೇಂದ್ರ ಸ್ವರೂಪವೇ ಅದರ ಮುಕ್ತತೆ, ಜಾತಿ ಪರಿಗಣನೆಯಿಲ್ಲದ ಅದರ ಸರ್ವಜನ ಪ್ರಿಯತೆ" ("...the central character of the Bhakti movement, in textual terms is its openness, its universal appeal without regard to caste." ರಾನಡೆಯವರು ತಮ್ಮ Pathway to God in Marathi Literature ಗ್ರಂಥದಲ್ಲಿ ಗಮನಿಸಿರುವಂತೆ ಮಧ್ಯಯುಗಗಳ ಅನುಭಾವದ ಇಡೀ ಪ್ರವೃತ್ತಿಯ ಧ್ಯೇಯ ಮನುಷ್ಯವರ್ಗದ ಕ್ರಿಯಾತ್ಮಕ ಉದ್ಧಾರ ("...the entire tenor of the mysticism of the middle ages is for the practical upliftment of humanity").

ಇದಕ್ಕೆ ಕಾರಣಗಳನ್ನು ಹುಡುಕಲು ದೂರ ಹೋಗಬೇಕಾಗಿಲ್ಲ. ಭಕ್ತಿಯು ಭಗವಂತನ ಕಡೆ ಭಕ್ತನನ್ನು ಕೊಂಡೊಯ್ಯುವ ಭಾವನಾತ್ಮಕ ಪಥ ("ಪರಮ ಪ್ರೇಮ ರೂಪಾ" – ಭಗವಂತನ ಬಗ್ಗೆ ವ್ಯಕ್ತಿ ತೋರುವ ಪ್ರೇಮವೇ ಭಕ್ತಿಯೆನ್ನುತ್ತಾನೆ,

ನಾರದ). ಅಸೀಮ ಪ್ರೇಮ, ನಿಸ್ವಾರ್ಥ ಶ್ರದ್ಧೆ ಇವು ಭಕ್ತಿಮಾರ್ಗವನ್ನು ಕರ್ಮ, ಜ್ಞಾನ ಮಾರ್ಗಗಳಿಂದ ಭಿನ್ನವಾಗಿಸುತ್ತವೆ. ಆದಿಮಾನವನು ಕ್ಷಾಮ, ರೋಗ ಇತ್ಯಾದಿ ಉಪದ್ರವಗಳಿಂದ ತನ್ನನ್ನು ರಕ್ಷಿಸಲು ಪ್ರಾಕೃತಿಕ ಶಕ್ತಿಗಳನ್ನು ಪ್ರಾರ್ಥಿಸಿಕೊಳ್ಳುವುದರಲ್ಲಿ ಭಕ್ತಿಯ ಬೀಜ ಹುದುಗಿದೆ; ಅವನ ಭಕ್ತಿಯು ಭಯರೂಪವಾದುದು, ಆತ್ಮರಕ್ಷಣಾತ್ಮಕ ವಾದುದು. ಭಯರೂಪದ ಶರಣಾಗತಿಯು ಮನುಷ್ಯನಲ್ಲಿ ಹುದುಗಿರುವ ಗುಣ. ದೈವೀಶಕ್ತಿಯು ತನಗೆ ಸಂಪೂರ್ಣ ಒಪ್ಪಿಸಿಕೊಂಡ ಮನುಷ್ಯನನ್ನು ರಕ್ಷಿಸುತ್ತದೆ ಎಂಬ ಶ್ರದ್ಧೆಯೇ ಭಕ್ತಿಗೆ ಮೂಲ; ಹೀಗಿರುವಾಗ ಭಕ್ತಿ ಅಥವಾ ಸಂಪೂರ್ಣ ಒಪ್ಪಿಸಿಕೊಳ್ಳುವಿಕೆ ಮನುಷ್ಯನಲ್ಲೇ ನಿಕ್ಷಿಪ್ತವಾಗಿರುವ ಸ್ವಭಾವ. ಭಕ್ತಿ ಚಳವಳಿಗಳು ದೈವೀಶಕ್ತಿಯ ಪ್ರಾಧಾನ್ಯ ವನ್ನು ಎತ್ತಿ ಹಿಡಿದು, ಆ ಶಕ್ತಿಗೆ ಪ್ರೀತಿಯಿಂದ ತಮ್ಮನ್ನು ತಾವು ಒಪ್ಪಿಸಿಕೊಳ್ಳಲು ಸಾಮಾನ್ಯರಿಗೆ ಕರೆ ನೀಡಿದುವು. ಆ ಚಳವಳಿಗಳ ಕಾಳಜಿ ಮುಖ್ಯವಾಗಿ ದೈವ ಮತ್ತು ಸಾಮಾನ್ಯ ಮನುಷ್ಯ; ರಾಜ ಅಲ್ಲ, ಶ್ರೀಮಂತ ಅಲ್ಲ. ಕನ್ನಡ ಸಾಹಿತ್ಯದಲ್ಲಿ ಬಡವರ ಹಸಿವಿನ ತೀವ್ರತೆಯು ಮೊದಲ ಅಭಿವ್ಯಕ್ತಿ ಪಡೆದುದು ಮೊದಲ ಭಕ್ತಿ ಚಳವಳಿಯಾದ ಶರಣ ಚಳವಳಿಯ ಆರಂಭ ಕಾಲದ ಶಿವಭಕ್ತ ಜೇಡರ ದಾಸಿಮಯ್ಯನಲ್ಲಿ (ಕ್ರಿ.ಶ. 1140) ಎಂದರೆ ಆಶ್ಚರ್ಯ ಪಡಬೇಕಾಗಿಲ್ಲ ("ಒಡಲುಗೊಂಡವ ಹಸಿವ, ಒಡಲು ಗೊಂಡವ ಹುಸಿವ... ನೀನೆನ್ನಂತೆ ಒಡಲುಗೊಂಡು ನೋಡಾ...").

ದೇಹವನ್ನು ಶಾಶ್ವತಗೊಳಿಸಲು ಯೋಗ ಮಾರ್ಗವನ್ನು ಅನುಸರಿಸಿದ ತಾಂತ್ರಿಕ ಪಂಥವು ಭಕ್ತಿ ಪಂಥದಂತೆ ಜನಪ್ರಿಯತೆ ಗಳಿಸಿ, ಪರಂಪರೆಯ ವಿರುದ್ಧ ವಾಗಿ ನಿಂತು ಗಂಡು–ಹೆಣ್ಣು, ಬ್ರಾಹ್ಮಣ–ದಲಿತ ಎಂಬ ಭೇದವಿಲ್ಲದೆ ಎಲ್ಲರನ್ನೂ ಒಳಗೊಂಡಿತ್ತು. ಮಹಾರಾಷ್ಟ್ರದ ಜ್ಞಾನದೇವನ ಭಕ್ತಿ ಪಂಥದಂತೆ (13 ಶ.) ಹಲವು ಪಂಥಗಳು ನಾಥಪಂಥದಂತಹ ತಾಂತ್ರಿಕ ಮತಗಳ ಪ್ರಭಾವಕ್ಕೆ ಒಳಗಾಗಿದ್ದುವು. ನಾಥಪಂಥದ ಪ್ರವರ್ಧಕ ಗೋರಕ್ಷನು (11 ಶ.) ತಾನು "ಹುಟ್ಟಿನಿಂದ ಹಿಂದೂ, ನೋಡಲು ಜೋಗಿ, ಚಿಂತನೆಯಲ್ಲಿ ಇಸ್ಲಾಂನಿಂದ ಪ್ರಭಾವಿತ"ನೆಂದಿದ್ದಾನೆ ("ಉತ್ಪತಿ ಹಿಂದೂ, ಜರನಾ ಜೋಗೀ, ಅಕಲ್ ಫಡೀ ಮುಸಲ್‌ಮಾನೀ").

ಯಾವುದೇ ಚಳವಳಿ ಆರಂಭವಾಗುವ ರೀತಿ ಗಮನಿಸುವ ಮೊದಲು 'ಚಳವಳಿ' ಮಾತಿನ ಅರ್ಥವನ್ನು ತಿಳಿಯುವುದು ಅಗತ್ಯ. ಸಂಸ್ಕೃತದ 'ಚಲನವಲನ'ದ ತದ್ಭವವಾದ 'ಚಳವಳಿ'ಯು ಇಂಗ್ಲಿಷಿನ Movement ಪದಕ್ಕೆ ಸಂವಾದಿ (ಚಲಿಸು = to move). ಒಂದು ಜನಾಂಗ ಯಾವುದೋ ಪಾರಂಪರಿಕ ವ್ಯವಸ್ಥೆಯನ್ನು ಸುಮ್ಮನೆ ಒಪ್ಪಿಕೊಂಡು ಅದಕ್ಕೆ ತಲೆಬಾಗಿ ಅನುಸರಿಸುವುದೊಂದೇ ಮಾರ್ಗ ಎಂದು ತಿಳಿದಿರುವ ಸ್ಥಿತಿಯನ್ನು ಹೆಪ್ಪುಗಟ್ಟಿದ ಸರೋವರಕ್ಕೆ ಹೋಲಿಸಬಹುದು. ಶೀತ ಕಡಮೆ ಯಾಗಿ ಕಾವು ಏರಿದಂತೆ ಅದರ ಅಂಚಿನಲ್ಲಿ ಮಂಜುಗಡ್ಡೆ ಕರಗಲು ಆರಂಭವಾಗಿ ಕ್ರಮೇಣ ಅಲ್ಲಲ್ಲಿ ಸರೋವರದಲ್ಲಿ ಹೆಪ್ಪು ಭಾಗವು ಬಿರುಕಾಗಿ ಕ್ರಮೇಣ ಇಡೀ

ಸರೋವರವು ಹಿಂದಿನ ಲವಲವಿಕೆ, ಚಲನವಲನಗಳನ್ನು ಪಡೆಯುವಂತೆ,* ಹೆಪ್ಪು ಗಟ್ಟಿದ್ದ ಚಿಂತನೆಯ ಚಲನೆಯನ್ನು, ಸಂವೇದನೆಯನ್ನು ಕಳೆದುಕೊಂಡಿದ್ದ ಜನತೆಯ ಮನಸ್ಸಿನಲ್ಲಿ ಒಂದು ಎಚ್ಚರ ಮೂಡಿ ಅವರು ತಮ್ಮ ಸ್ಥಿತಿ ಬಗ್ಗೆ ಆಲೋಚಿಸಲು ಆರಂಭ ಮಾಡುತ್ತಾರೆ; ಆ ಸಂವೇದನೆಯು ಆ ಕಾಲಕ್ಕೆ ಕಾಣಿಸಿಕೊಂಡ ನಾಯಕನಿಂದ, ಅಥವಾ ನಾಯಕ ವರ್ಗದಿಂದ ಪುಷ್ಟಗೊಂಡು ಬೆಳೆಯುತ್ತ ಹೋಗುತ್ತದೆ; ಅವರ ಮನಸ್ಸು ಚಲನಶೀಲವಾಗುತ್ತದೆ. ಯಾವುದೇ ಚಳವಳಿಯ ಆರಂಭ – ಅದು ರಾಜಕೀಯ, ಧಾರ್ಮಿಕ, ಸಾಮಾಜಿಕ, ಕಾರ್ಮಿಕ ಆಗಿರಬಹುದು – ಸ್ಥೂಲವಾಗಿ ಅದು. ನಿಜವಾದ ಚಳವಳಿ ಆರಂಭವಾಗುವುದು ವ್ಯಕ್ತಿಗಳ ಒಳಗೆ; ಅದು ಮುಂದೆ ಬಹಿರಂಗ ರೂಪವನ್ನು ತಾಳಿ ವಿಶ್ವಕ್ಕೆ ಗೋಚರವಾಗುವುದು ಆ ಬಳಿಕ.

ಮೇಲಿನದು ತೀರ ಸರಳೀಕೃತ ಚಿತ್ರವಾದರೂ ಒಟ್ಟಾರೆ ಅದು ನಿಜ. ಅದಕ್ಕೆ ಒಂದು ಉದಾಹರಣೆ ಕರ್ನಾಟಕದ ಶರಣ ಚಳವಳಿ (ಕ್ರಿ.ಶ. 1160). ಪ್ರಸಿದ್ಧ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿ (11–12 ಶ.) ಬ್ರಾಹ್ಮಣರಿಗೆ ಬಹು ಸಂಖ್ಯೆಯ ಭೂಮಿ, ಹಳ್ಳಿಗಳನ್ನು ದಾನದತ್ತಿಗಳನ್ನು ನೀಡಿದುದಲ್ಲದೆ ಅವರಿಗೆ ಆಡಳಿತ ದಲ್ಲಿ ಪ್ರಧಾನ ಸ್ಥಾನಗಳನ್ನು ನೀಡಲಾಯಿತು. ಸಹಜವಾಗಿಯೇ ಭೂಮಾಲೀಕರಾಗಿದ್ದ ಸಾಮಾನ್ಯರಿಗೆ ಇದರಿಂದ ತೀವ್ರ ಅತೃಪ್ತಿ ಆಗಿದ್ದರೆ ಆಶ್ಚರ್ಯವಿಲ್ಲ. ಅದರ ಜೊತೆಗೆ, ಮೇಲ್ವರ್ಗದ ಜನರಿಂದ ಸಾಮಾಜಿಕವಾಗಿ ತಿರಸ್ಕೃತವಾಗುತ್ತಿರುವ ಅನುಭವವೂ ಅವರಿಗೆ ಆಗಿದ್ದರೆ ಆಶ್ಚರ್ಯವಿಲ್ಲ. ತಮಗಾದ ಒಂದು ಬಗೆಯ ಅನ್ಯಾಯದ ಬಗ್ಗೆ ಜಾಗೃತವಾದ ಸಮೂಹ ಉಳಿದ ಅನ್ಯಾಯಗಳ ಬಗ್ಗೆಯೂ ಜಾಗೃತವಾಗುವುದು ನಿರೀಕ್ಷಿತ. ಈ ಹಿನ್ನೆಲೆಯಲ್ಲಿ ಬ್ರಾಹ್ಮಣ ಮುಖ್ಯಸ್ಥನೊಬ್ಬನ ಮಗನಾಗಿ ಹುಟ್ಟಿದ ಬಸವಣ್ಣ ಬಾಲ್ಯದಲ್ಲಿ ಮೇಲ್‌ಜಾತಿ ಸೂಚಕವಾದ ಜನಿವಾರವನ್ನೂ ಬ್ರಾಹ್ಮಣರ ಶಕ್ತಿ ಕೇಂದ್ರವಾದ ಅಗ್ರಹಾರವನ್ನೂ ತ್ಯಜಿಸಿ 'ಕರ್ಮ'ಕ್ಕಿಂತ ಸರ್ವಸಮಾನತೆಯ 'ಭಕ್ತಿ'ಯ ಬದುಕಿಗೆ ಒಲಿದು ವೀರಶೈವನಾಗಿ ಒಂದು ಅತ್ಯಂತ ಮಹತ್ವದ ಚಳವಳಿಯ ಕೇಂದ್ರ ವ್ಯಕ್ತಿಯಾದನು. ಅವನು ಕೆಳವರ್ಗದವರ ಯಾತನೆಯನ್ನು ತೀವ್ರವಾಗಿ ಅನುಭವಿಸಿ ಆ ವರ್ಗದ ಜೊತೆ ಸಂಪೂರ್ಣವಾಗಿ ಗುರುತಿಸಿಕೊಂಡನು. ಬ್ರಾಹ್ಮಣ ಮೊದಲಾಗಿ ದಲಿತನವರೆಗೆ ಯಾವುದೇ ಭೇದವಿಲ್ಲದೆ ವಿವಾಹ ಸಂಪರ್ಕವನ್ನು ಪಡೆಯಲು ಅವಕಾಶ ಮಾಡಿಕೊಡುವಂತಹ ಭಕ್ತಿಪ್ರಧಾನ ವೀರಶೈವ ಧರ್ಮವನ್ನು ಅವಲಂಬಿಸಿ ದನು. ಬಡವ–ಬಲ್ಲಿದ, ಮಂತ್ರಿ–ಕೂಲಿಯಾಳು, ಬ್ರಾಹ್ಮಣ–ಅಸ್ಪೃಶ್ಯ ಎಂಬ ಭೇದವನ್ನು ತಿರಸ್ಕರಿಸಲು ಕರೆಕೊಡುವ ವೀರಶೈವ ಧರ್ಮವು ಅವನ ಮನೋಧರ್ಮಕ್ಕೆ ತೀರ ಸಮೀಪವಾಗಿತ್ತು. ಅವನಿಗಿಂತ ಮೊದಲೇ ಅದೇ ಚಾಲುಕ್ಯ ಸಾಮ್ರಾಜ್ಯದ ಕೊಂಡಗುಳಿ

---

* ಈ ಪ್ರಾಕೃತಿಕ ಪ್ರಕ್ರಿಯೆ ನಾನು ಚಳಿಗಾಲದ ಕೊನೆಯಲ್ಲಿ ಅಮೆರಿಕದ ಮಿಚಿಗನ್ ಸರೋವರದಲ್ಲಿ (1979) ಪ್ರತ್ಯಕ್ಷ ಕಂಡುದು.

ಕೇಶಿರಾಜನೆಂಬ ಮಂತ್ರಿ, ತೆಲುಗು ಜೊಮ್ಮಯ್ಯನಂತಹ ಸಾಮಾನ್ಯ ವ್ಯಕ್ತಿಗಳು ಪ್ರಭುತ್ವದ ವಿರುದ್ಧ ಪ್ರತಿಭಟಿಸಿದ್ದರೂ ಅವರಿಗೆ ಒಂದು ಚಳವಳಿಯನ್ನು ಸಂಘಟಿಸುವ, ಆ ಚಳವಳಿಯ ಕೇಂದ್ರ ಬಿಂದುವಾಗುವ ಶಕ್ತಿಯಿರಲಿಲ್ಲ. ಆ ಶಕ್ತಿ, ಸತ್ವ ಇದ್ದ ಬಸವನು ಕೇಂದ್ರ ವ್ಯಕ್ತಿಯಾದನು; ಜಡವಾಗಿದ್ದ ಅಂದಿನ ಸಮಾಜದಲ್ಲಿ ಚೈತನ್ಯವಾದನು; ಅವನ ಸಮಕಾಲೀನ ಶರಣ ಅಲ್ಲಮಪ್ರಭು ಹೇಳುವಂತೆ "ಯುಗದ ಉತ್ಸಾಹ"ವಾದನು.

ಅಮೆರಿಕದ ಸಮಾಜವಿಜ್ಞಾನಿ ಆಲಿಯರ್. ಸಿ. ಕಾಕ್ಸ್ ಗಮನಿಸಿರುವಂತೆ, ಬಿಳಿಯರ ಉಗ್ರ ಹಿಡಿತದಿಂದ ದಾಸ್ಯದಿಂದ ಕರಿಯರನ್ನು ತಪ್ಪಿಸುವ ಚಳವಳಿಯ ನೇತೃತ್ವವನ್ನು ಏಬ್ರಹಾಂ ಲಿಂಕನ್ನನಂತಹ ಬಿಳಿಯನೇ ವಹಿಸಬೇಕಾಗಿದ್ದುದು ಅನಿವಾರ್ಯವಾಗಿದ್ದಿತು. ಕರ್ನಾಟಕದಲ್ಲೂ ಬ್ರಾಹ್ಮಣ ವರ್ಗದ ಜಾತಿಮೇಲ್ಮೆಯ ಅರಿವಿನಿಂದ ಕೆಳವರ್ಗದವರ ಮೇಲೆ ಆಗುತ್ತಿದ್ದ ಅನಿಷ್ಟಗಳನ್ನು ತಪ್ಪಿಸಲು ನಡೆದ ಚಳವಳಿಯ ನೇತೃತ್ವವನ್ನು ಬಸವಣ್ಣನಂತಹ ಹುಟ್ಟು ಬ್ರಾಹ್ಮಣನೇ ವಹಿಸಿದ್ದು ಒಂದು ಐತಿಹಾಸಿಕ ಅನಿವಾರ್ಯ. "ಹಿಂದೂ ವೈಷ್ಣವ ಭಕ್ತಿಪಂಥದ ಐತಿಹಾಸಿಕ ಬೆಳವಣಿಗೆ" ಎಂದೇ ಕರೆಯಲಾಗಿರುವ ಸಿಖ್ ಧರ್ಮವು ಇಸ್ಲಾಮಿನ ಪ್ರಚಾರವನ್ನು ತಡೆದು ಹಿಂದೂ ಧರ್ಮದ ರಕ್ಷಣೆಗಾಗಿ ಉದ್ಭವಿಸಿ, ಮಾನವ ಸಮಾನತೆಯನ್ನು ಜಾತಿಗಳ ಸಮಾನತೆಯನ್ನು ಪ್ರತಿಪಾದಿಸುತ್ತದೆ. ಅರ್ಥಹೀನ ಕರ್ಮಾಚರಣೆಗಳನ್ನು ಖಂಡಿಸಿದ ಸಿಖ್ ಚಳವಳಿಯ ನೇತಾರನಾದ ಗುರುನಾನಕನು (ಕ್ರಿ.ಶ. 1469–1539) ಯಜ್ಞೋಪವೀತವನ್ನು ಧರಿಸಿ ವೇದಾಧ್ಯಯನದ ಹಕ್ಕುಳ್ಳವರಾಗಿದ್ದ ಕ್ಷತ್ರಿಯ ವರ್ಗದ ಬೇಡಿ ಉಪವರ್ಗಕ್ಕೆ, ಅರ್ಥಾತ್ ಸಮಾಜದ ಮೇಲುವರ್ಗಕ್ಕೆ ಸೇರಿದ್ದನು. ಪ್ರಪಂಚವು "ದುಃಖ"ದಿಂದ ಕೂಡಿದೆ ಎಂದು ಮರುಗಿ ಸಾಮಾನ್ಯರ ಮೇಲ್ಮೆಗಾಗಿ ಜಗತ್ತಿನ ಉದ್ಧಾರಕ್ಕಾಗಿ ಬದುಕನ್ನು ಮೀಸಲಾಗಿಟ್ಟ ಬುದ್ಧನು ಅರಸು ಕುಟುಂಬದಲ್ಲಿ ಜನಿಸಿದವನು. ಸಿಲೋನಿನಲ್ಲಿ ಐತಿಹಾಸಿಕ ಬುದ್ಧನಿಗಿಂತ ಪೌರಾಣಿಕ ಬೋಧಿಸತ್ವನು ಅಲ್ಲಿನ ಬೌದ್ಧಾನುಯಾಯಿಗಳ ಆರಾಧ್ಯವಸ್ತುನಾದನು. ಹೀನಯಾನದ 'ಬುದ್ಧ'ನು ತನ್ನ ಬದುಕಿನ ಅಂತ್ಯದಲ್ಲಿ 'ನಿರ್ವಾಣ' ಸ್ಥಿತಿಯನ್ನು ಪಡೆದು ಮುಕ್ತನಾದವನು. ಸಿಲೋನಿನ ಮಹಾಯಾನ ಪಂಥದ ಪ್ರಕಾರ, 'ನಿರ್ವಾಣ'ವು ತನಗೆ ಲಭ್ಯವಿದ್ದರೂ ಬುದ್ಧನು ಅದನ್ನು ನಿರಾಕರಿಸಿ, ಜಗತ್ತಿನಲ್ಲಿ ದುಃಖ ತೀರುವವರೆಗೆ ತನಗೆ 'ನಿರ್ವಾಣ'ವು ಬೇಡವೆಂದು ತಿರಸ್ಕರಿಸಿ, ಬೋಧಿಸತ್ವನಾಗಿ ಜನಿಸಿದ. 'ನಿರ್ವಾಣ'ವನ್ನು ಪಡೆದು ಮುಕ್ತನಾಗುವುದು ಸ್ವಾರ್ಥವೆಂದು ಅವನು ಭಾವಿಸಿದ. ಸಿಲೋನಿನಲ್ಲಿ ಕ್ರಿಸ್ತಶಕದ ಆರಂಭದ ಶತಮಾನಗಳಲ್ಲಿ ಈ ಬೋಧಿಸತ್ವನು ಜನರ ಭಕ್ತಿ ಭಾವನೆಗಳ ಆರಾಧ್ಯದೈವವಾಗಿ ಹಿಂದೂ ದೇವತೆಗಳ ರೀತಿಯಲ್ಲಿ ಎಲ್ಲ ಬಗೆಯ ಪೂಜೆ ಆರಾಧನೆಗಳಿಗೆ ಪಾತ್ರವಾದನು. ಲೌಕಿಕ ಸುಖಗಳನ್ನು, ಭೋಗವನ್ನು 'ಶಾಶ್ವತ ಸುಖ'ಕ್ಕಾಗಿ ಸಂಪೂರ್ಣವಾಗಿ ನಿರಾಕರಿಸಲು ಒತ್ತುಕೊಟ್ಟ ಜೈನಧರ್ಮದ ನೇತಾರರಾದ

ಇಪ್ಪತ್ತುನಾಲ್ಕು ತೀರ್ಥಂಕರರೂ ಹುಟ್ಟಿನಿಂದ ಕ್ಷತ್ರಿಯರೇ. ಉತ್ತರದಲ್ಲಿ ಮಹಾಕ್ಷಾಮ ತಲೆಮೋರಿದಾಗ ಭದ್ರಬಾಹು ಜೈನಮುನಿಯು ಚಂದ್ರಗುಪ್ತ ದೊರೆ ಸಮೇತ (ಕ್ರಿ.ಪೂ. 1ನೇ ಶ.) ದಕ್ಷಿಣಕ್ಕೆ, ಕರ್ನಾಟಕಕ್ಕೆ ಬಂದು ಶ್ರವಣ ಬೆಳ್ಗೊಳದಲ್ಲಿ ತನ್ನ ಕೊನೆಯ ದಿನಗಳನ್ನು ಕಳೆದನು.* ಬ್ರಿಟಿಷರಿಂದ ಸ್ವಾತಂತ್ರ್ಯವನ್ನು ಪಡೆಯಲು ನಡೆದ ಹೋರಾಟದಲ್ಲಿ ಮತ್ತು ವಸಾಹತುಶಾಹಿ ಭಾರತದಲ್ಲಿ ಸಮಾಜ ಸುಧಾರಣೆಗಾಗಿ ನಡೆದ ಚಳವಳಿಗಳಲ್ಲಿ ಪ್ರಮುಖ ಪಾತ್ರವಹಿಸಿದ ಬಹುತೇಕ ಎಲ್ಲರೂ ಹಿಂದೂ ಸಮಾಜದ ಮೇಲ್ವರ್ಗದವರು, ಮತ್ತು ಬ್ರಿಟಿಷ್ ಶಿಕ್ಷಣವನ್ನು ಪಡೆದವರು (ಉದಾ: ಸ್ವಾಮಿ ವಿವೇಕಾನಂದ, ರಾಜಾರಾಮ ದೋಹನರಾಯ್, ಕೇಶವ ಚಂದ್ರಸೇನ್, ಈಶ್ವರ ಚಂದ್ರ ವಿದ್ಯಾಸಾಗರ, ವೀರೇಶ ಲಿಂಗಂ ಪಂತಲು, ಮೋತಿಲಾಲ್ ನೆಹ್ರೂ, ಲಾಲಾ ಲಜಪತರಾಯ್, ಗಾಂಧೀಜಿ ಇತ್ಯಾದಿ). ಬಡವರ, ಕಾರ್ಮಿಕರ, ಭೂಮಿ ಹೀನ ರೈತರ, ಶೋಷಿತರ ಪರವಾಗಿ ಧ್ವನಿ ಎತ್ತಿದ ಭಾರತೀಯ ಕಮ್ಯುನಿಸ್ಟ್ ಪಕ್ಷದ ನಾಯಕರೂ ಅಷ್ಟೇ.

ಇದರ ಹಿಂದಿನ ಮನೋವಿಜ್ಞಾನ ನಿಚ್ಚಳವಿದೆ. ಬಡವರ ಪರವಾಗಿ ಬಡವನು ಧ್ವನಿ ಎತ್ತಿದರೂ ಅವನನ್ನು ಶ್ರೀಮಂತ ವರ್ಗ ಮಾತ್ರವಲ್ಲ, ಬಡವರ ವರ್ಗವೂ ನಾಯಕನನ್ನಾಗಿ ಸ್ವೀಕರಿಸುವುದಿಲ್ಲ. ಶ್ರೀಮಂತರ ಜಮೀನುದಾರರ ವಿರುದ್ಧ ಧ್ವನಿ ಎತ್ತಿದರೆ ಬಡವನಾದ ಅವನು ಕಳೆದುಕೊಳ್ಳಬೇಕಾದ್ದು ಏನಿದೆ? ಇಂತಹ ಪ್ರಶ್ನೆ ಸೂಕ್ಷ್ಮ ವಾಗಿ ತಲೆ ಹಾಕುತ್ತದೆ. ಆದರೆ, ಶ್ರೀಮಂತನು ಶ್ರೀಮಂತಿಕೆಯ ವಿರುದ್ಧ, ಮೇಲ್ಜಾತಿ ಯವನು ಮೇಲ್ಜಾತಿಯ ಮೇಲರಿಮೆ ವಿರುದ್ಧ ಧ್ವನಿಯೆತ್ತಿದರೆ ಜನಸಾಮಾನ್ಯರ ದೃಷ್ಟಿಯಲ್ಲಿ ಅದು ಅರ್ಥಪೂರ್ಣವಾಗುತ್ತದೆ; ಅವನೊಬ್ಬ ತ್ಯಾಗಿ ಎಂಬ ಕೀರ್ತಿಗೂ ಪಾತ್ರನಾಗುತ್ತಾನೆ. ಶೋಷಕರ ವಿರುದ್ಧ ಧ್ವನಿ ಎತ್ತಿ ಒಂದು ಚಳವಳಿಯ ನಾಯಕ ನೆನ್ನಿಸಿಕೊಳ್ಳುವವನು(ರು) ಆ ಶೋಷಕ ವರ್ಗದವನೇ(ರೇ) ಆಗಿರುತ್ತಾನೆ(ರೆ) ಎಂಬುದು ಒಟ್ಟಾರೆ ನಿಜ : ಕೆಲವು ವಿನಾಯ್ತಿಗಳಿದ್ದರೂ ಆ ವಿನಾಯ್ತಿಗಳು ಸಾಮಾನ್ಯ ನಿಯಮ ವನ್ನು ನಿರರ್ಥಕಗೊಳಿಸುವುದಿಲ್ಲ.

ಕರ್ನಾಟಕದ ಬಸವ ಅಥವಾ ಶರಣ ಚಳವಳಿಯ ಹಿಂದೆ ಮೂಲತಃ ಜನತೆಯ ತೀವ್ರ ಅತೃಪ್ತಿ, ಆರ್ಥಿಕ ಸಾಮಾಜಿಕ ರೂಪದ ಅತೃಪ್ತಿ ಇರುವ ಸೂಚನೆಯನ್ನು ಹಿಂದಾಗಲೇ ನಾವು ನೋಡಿದ್ದೇವೆ. ಆ ಚಳವಳಿಯು ಒಟ್ಟಾರೆ ಬ್ರಾಹ್ಮಣ ವಿರೋಧಿ ಎಂದು ಕರೆದರೆ ಅಷ್ಟು ತಪ್ಪಿಲ್ಲ. ಯಾವುದೇ ಕಾಲದ ಯಾವುದೇ ಸಮಾಜದಲ್ಲಿ ಪ್ರತಿಷ್ಠಿತ ವ್ಯಕ್ತಿ ಅಥವಾ ವ್ಯಕ್ತಿಗಳೇ ಪ್ರಶಂಸೆಗೆ ಎಂತೋ ಟೀಕೆಗೂ ಗುರಿಯಾಗುವವರು. ಸ್ವಾತಂತ್ರ್ಯ ಚಳವಳಿ ಬ್ರಿಟಿಷರ ವಿರುದ್ಧವೆಂದರೆ ಎಲ್ಲ ಬ್ರಿಟಿಷರೂ

---

* ಒಂದು ಕಥೆಯ ಪ್ರಕಾರ, ಅವನು ಕರ್ನಾಟಕದಿಂದ ಮರಳಿ ಉತ್ತರ ಭಾರತಕ್ಕೆ ಹೋಗಿ ನೇಪಾಳದಲ್ಲೂ ಕೆಲಕಾಲವಿದ್ದನು.

ಖಂಡನಾರ್ಹರೆಂದಲ್ಲ. ಬ್ರಾಹ್ಮಣ ವರ್ಗವೆಂಬುದು ಜಾತಿ ಮೇಲ್ಮೆಯ ಸಂಕೇತ ಮಾತ್ರ. ಭಾರತದಲ್ಲಿ ಬ್ರಾಹ್ಮಣರು ವೈದಿಕಾಚರಣೆಗಳ ಪ್ರವರ್ತಕರು, ಸಂರಕ್ಷಕರು, ಜ್ಞಾನ ಸಂಪಾದನೆಗೆ ಅರ್ಹರು ಎಂಬುದನ್ನು ಪರಂಪರೆ ಒಪ್ಪಿಕೊಂಡಿರುವುದನ್ನು ಶರಣ ಚಳವಳಿ ತೀವ್ರವಾಗಿ ಪ್ರಶ್ನಿಸಿತು. ಕೆಳವರ್ಗದವರು ಜ್ಞಾನಮಂದಿರಕ್ಕೆ ಪ್ರವೇಶಿಸಲು ಬ್ರಾಹ್ಮಣರು ಅವಕಾಶ ನೀಡಿರಲಿಲ್ಲ ಮಾತ್ರವಲ್ಲ, ವೇದಾಧ್ಯಯನ ವಿಷಯ ಬಂದಾಗ ಸ್ತ್ರೀಯರೂ ಶೂದ್ರರಂತೆಯೇ ಅನಧಿಕಾರಿಗಳಾಗಿದ್ದರು. ಭಕ್ತಿ ಚಳವಳಿಗಳು ಧರ್ಮಮಂದಿರವನ್ನು, ಅಂತೆಯೇ ಜ್ಞಾನಮಂದಿರವನ್ನು ಸಾಮಾನ್ಯರಿಗಾಗಿ ತೆರೆದಿಟ್ಟುವು. ತಮಿಳುನಾಡಿನ ರಾಮಾನುಜ (ಕ್ರಿ.ಶ. 1100) ಈ ಬಗ್ಗೆ ಒಳ್ಳೆಯ ನಿದರ್ಶನ ಒದಗಿಸುತ್ತಾರೆ. ಗುರುಗಳು ಎಚ್ಚರಿಸಿದರೂ ಅವರು ಬೋಧಿಸಿದ ಮಂತ್ರವನ್ನು ಬೀದಿಯಲ್ಲಿ ಎಲ್ಲರಿಗೂ ಕೇಳಿಸುವಂತೆ ಘೋಷಿಸುತ್ತಾರೆ; ಅದರಿಂದ ತಮಗೆ ಪಾಪ ಪ್ರಾಪ್ತವಾದರೂ ಸರಿಯೇ ತಾವು ನರಕಕ್ಕೆ ಹೋದರೂ ಸರಿಯೇ, ಜನಸಾಮಾನ್ಯರಿಗೆ ಮೋಕ್ಷ ದೊರಕಿದರೆ ಸಾಕು ಎಂದು ನಿಚ್ಚಳವಾಗಿ ತಿಳಿಸಿದರು. ಗುಜರಾತಿನ ಆದಿಕವಿ ನರಸಿಂಹ ಮೆಹ್ತನು (15 ಶ.) ಬ್ರಾಹ್ಮಣರು ಲೇವಡಿ ಮಾಡಿದರೂ ಲೆಕ್ಕಿಸದೆ ಅಸ್ಪೃಶ್ಯರ ಮಧ್ಯೆ ನಿಂತು ಭಜನೆಗಳನ್ನು ಹಾಡಿದನು. ಜಾತಿ ವೈಷ್ಣವರಿಗಿಂತ "ನಿಜವಾದ ವೈಷ್ಣವರು ಮಾತ್ರ ತಮಗೆ ಪ್ರಿಯ" ಎಂದರು; ಬಡ ಕೆಳವರ್ಗದವರೇ ಭಗವಂತನ ನಿಜವಾದ ಪ್ರೀತಿಗೆ ಪಾತ್ರರು ಎಂದು ಸೂಚಿಸಿದನು. ಬಸವ ಮತ್ತು ಅವನ ಅನುಯಾಯಿಗಳು ಪುರೋಹಿತ ವರ್ಗದ ಮೇಲ್ಮೆಯನ್ನು ಸ್ಪಷ್ಟವಾಗಿ ಪ್ರಶ್ನಿಸಿ ಅಸ್ಪೃಶ್ಯರೂ ಸೇರಿದಂತೆ ಎಲ್ಲರಿಗೂ ತಮ್ಮ ಧರ್ಮಮಂದಿರದ ಬಾಗಿಲುಗಳನ್ನು ತೆರೆದಿಟ್ಟರು. "ಕರ್ಮ"ದ ಅರ್ಥಾತ್ ಅಸಮಾನತೆಯ ಸಂಕೇತವಾದ ಯಜ್ಞೋಪವೀತವನ್ನು, ಅದು ಸಾಮಾನ್ಯರಿಗೆ ಪ್ರಿಯವಾದ 'ಭಕ್ತಿ'ಯನ್ನು ದೂರವಿಟ್ಟಿದೆಯೆಂಬ ಕಾರಣಕ್ಕಾಗಿ ಬಸವಣ್ಣ ತನ್ನ ಹದಿನಾರನೆಯ ವಯಸ್ಸಿನಲ್ಲಿ ಅದನ್ನು ನಿರಾಕರಿಸಿ ಸರ್ವ ಸಮಾನತೆಯ ಸಂಕೇತವಾದ 'ಇಷ್ಟಲಿಂಗ'ವನ್ನು ಧರಿಸಿದನು. ಒಂದು ಕತೆಯ ಪ್ರಕಾರ, ಜನಿವಾರವು ಹೋತನ ಗಂಟಲನ್ನು ಬಿಗಿದು ಕೊಲ್ಲಲು ಯೋಗ್ಯವಾದುದೆಂದು ಬಸವಣ್ಣ ಲೇವಡಿ ಕೂಡ ಮಾಡಿದನು. ಜಾತಿ ಜಾತಿಗಳ ಮಧ್ಯೆ ಭೇದವುಂಟುಮಾಡುವ ಯಜ್ಞೋಪವೀತವನ್ನು ಸಿಖ್ಖರ ಗುರುನಾನಕನು ತನ್ನ ಹನ್ನೊಂದನೆಯ ವಯಸ್ಸಿನಲ್ಲಿ ತೆಗೆದುಹಾಕಿದನು. ಅವನು ತನ್ನ ಗುರುವಾದ ಹರದಯಾಳುವಿಗೆ ದಯೆಯೆಂಬ ಹತ್ತಿಯಲ್ಲಿ ತೃಪ್ತಿಯೆಂಬ ನೂಲನ್ನು ತೆಗೆದು ಅದನ್ನು ಸತ್ಯದ ಸುರುಳಿಯಾಗಿ ಸುತ್ತಿ ಯಜ್ಞೋಪವೀತವನ್ನು ಸಿದ್ಧಪಡಿಸಿ ನೀಡಲು ಪ್ರಾರ್ಥಿಸಿದನು. ತನಗೆ ಹರಿಯುವ ಕಳೆದುಹೋಗುವ ಸುಟ್ಟು ಹೋಗುವ ಹತ್ತಿಯ ಯಜ್ಞೋಪವೀತವು ಬೇಡವೆಂದನು. (ಇದೊಂದು ಆಕಸ್ಮಿಕವಿರಬಹುದು – ಬಸವಣ್ಣ ಬಿಜ್ಜಳನ ಬಳಿ ಕರಣಿಕನಾಗಿದ್ದಂತೆ ನಾನಕನೂ ಕೂಡ ಸುಲ್ತಾನ್‌ಪುರಿಯ ಆಫ್ಘನ್ ಪಾಳೆಗಾರನ ಬಳಿ ಕರಣಿಕನಾಗಿದ್ದ.) ಎಲ್ಲ ಭಕ್ತಿ ಚಳವಳಿಗಳೂ ಭಗವಂತನಲ್ಲಿ

ಅವಿಚಲ ಶ್ರದ್ಧೆ ಮತ್ತು ನಿರ್ಮಲ ಜೀವನಕ್ಕೆ ಒತ್ತು ಕೊಟ್ಟುವು. ಧರ್ಮವೆಂದರೆ ವಾಸ್ತವವಾಗಿ ಇಷ್ಟೇ ಆಗಿರುವುದರಿಂದ ಅದನ್ನು ಜನಸಾಮಾನ್ಯರಿಂದ ದೂರವಿಡುವುದರಲ್ಲಿ ಅರ್ಥವಿಲ್ಲವೆಂದು ಎಲ್ಲ ಭಕ್ತಿ ಚಳವಳಿಗಳೂ ಸ್ಪಷ್ಟಪಡಿಸಿದವು.

ಯಾವುದೇ ಭಕ್ತಿ ಚಳವಳಿಯೂ ಹೊಸ ಧರ್ಮವನ್ನು ಸ್ಥಾಪಿಸಲಿಲ್ಲ. ಭಾರತದ ಭಕ್ತಿ ಚಳವಳಿಗಳ ಮುಖ್ಯ ಉದ್ದೇಶ ಹಿಂದೂ ಧರ್ಮಕ್ಕೆ ಕಳಂಕ ಪ್ರಾಯವಾಗಿದ್ದ ಕೆಲವು ಬೆಳವಣಿಗೆಗಳನ್ನು ಕಿತ್ತುಹಾಕಿ ಹಿಂದೂ ಸಮಾಜವನ್ನು ಚೇತನಗೊಳಿಸು ವುದಾಗಿತ್ತು. ದೇವರ ಸಾರ್ವಜನಿಕ ಮೆರವಣಿಗೆ ಉತ್ಸವಗಳು, ಪುಣ್ಯಕ್ಷೇತ್ರಗಳಿಗೆ ಭೇಟಿ ನೀಡುವುದು ಇಂತಹ ಸಾಮೂಹಿಕ ಧಾರ್ಮಿಕ ಕ್ರಿಯೆಗಳಿಗೆ ಕೆಲವು ಚಳವಳಿಗಳಿಂದ ಉತ್ತೇಜನ ದೊರಕಿತು. ಬಂಗಾಳದ ಚೈತನ್ಯನು (15 ಶ.) ಅರ್ಥಹೀನ ರಿಚುಯಲ್ಲು ಗಳನ್ನು ಖಂಡಿಸಿ, ಶಾಸ್ತ್ರಬದ್ಧವಲ್ಲದ ಸಂಗೀತಮಯ ಭಗವತ್ ಪ್ರಾರ್ಥನಾ ರೂಪವಾದ 'ಸಂಕೀರ್ತನ'ವನ್ನು ಆರಂಭಿಸಿದನು. ಸಂಗೀತ ವಾದ್ಯಗಳೊಡನೆ ಜನ ಹಾಡುತ್ತ ಕುಣಿಯುತ್ತ ಭಗವಂತನ ನಾಮ ಸಂಕೀರ್ತನವನ್ನು ಮಾಡುವುದು ಅದರ ಮುಖ್ಯ ಲಕ್ಷಣ. ಕಬೀರನು (15 ಶ.) ತೀರ್ಥಯಾತ್ರೆ, ವ್ರತಧಾರಣೆ, ಉಪವಾಸಗಳು ಇಂತಹ ಧರ್ಮದ ಬಾಹ್ಯ ಆಡಂಬರಗಳನ್ನು ವಿರೋಧಿಸಿದ. ಮಹಾರಾಷ್ಟ್ರದ ಜ್ಞಾನದೇವನೂ ಅಷ್ಟೇ. ಅಸ್ಸಾಮಿನ ಶಂಕರದೇವನು ಕರ್ಮದ ಹೆಸರಲ್ಲಿ ನಡೆಯುತ್ತಿದ್ದ ಯಜ್ಞ, ಪಶುಬಲಿಗಳನ್ನು ವಿರೋಧಿಸಿದ. ಕರ್ನಾಟಕದ ಶಿವಶರಣರು ಭಕ್ತಿಯನ್ನು ಎಷ್ಟರ ಮಟ್ಟಿಗೆ ಸರಳಗೊಳಿಸಿದರೆಂದರೆ ಅವರ ಪ್ರಕಾರ ಭಕ್ತನು ಶಿವಸ್ಮರಣೆಯನ್ನು ಯಾವ ದಿನ ಬೇಕಾದರೂ ಯಾವುದೇ ಹೊತ್ತಿನಲ್ಲೂ ಮಾಡಲು ಪ್ರಶಸ್ತವೇ. ಕಬೀರ ನಂತೆ ಅವರು ವಿಗ್ರಹಾರಾಧನೆಯನ್ನು ಖಡಾಖಂಡಿತವಾಗಿ ವಿರೋಧಿಸದಿದ್ದರೂ ದೇವಾಲಯ ನಿರ್ಮಾಣ, ದೇವಾಲಯ ಆರಾಧನೆಗಳಿಗೆ ಅವರು ಬೆಂಬಲ ನೀಡಲಿಲ್ಲ. ದೇವಾಲಯವೆಂದರೆ ಐಶ್ವರ್ಯ, ಆಡಂಬರ, ಅರ್ಚಕನ ಯಾಜಮಾನ್ಯ, ಪುರೋಹಿತವರ್ಗದ ಪ್ರಾಬಲ್ಯ. ದೇವಾಲಯಕ್ಕೆ ಅಸ್ಪೃಶ್ಯರ ಪ್ರವೇಶವನ್ನು ನಿರಾಕರಿಸಿದ್ದ ಹಿಂದೂ ಧರ್ಮದ ಅಕ್ಷಮ್ಯ ದೌರ್ಬಲ್ಯವೆನ್ನಬಹುದಾದ ಅಸ್ಪೃಶ್ಯತೆಯನ್ನು ವಿರೋಧಿಸಿತು. ದೇವರಿಗೂ ಭಕ್ತನಿಗೂ ಮಧ್ಯೆ ಅರ್ಚಕ ಒಂದು ರೀತಿಯ ದಲ್ಲಾಳಿ ಯಿದ್ದಂತೆ; ಧರ್ಮವು ವ್ಯಾಪಾರದ ಮಟ್ಟಕ್ಕಿಳಿದಿತ್ತು. ಇವೆಲ್ಲದಕ್ಕೂ ಶರಣ ಚಳವಳಿಯ ಏಕೈಕ ಉತ್ತರ : ದೇವಾಲಯಾರಾಧನೆಯ ಬಹಿಷ್ಕಾರ.

ಬಸವಣ್ಣನ ಪ್ರಸಿದ್ಧ ವಚನವೊಂದು ಹೀಗಿದೆ :

ಉಳ್ಳವರು ಶಿವಾಲಯವ ಮಾಡುವರು,
ನಾನೇನ ಮಾಡುವೆ ಬಡವನಯ್ಯಾ
ಎನ್ನ ಕಾಲೇ ಕಂಬ, ದೇಹವೇ ದೇಗುಲ,
ಶಿರವೇ ಹೊನ್ನ ಕಳಶವಯ್ಯಾ

ಕೂಡಲ ಸಂಗಮದೇವಾ,
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ.

ಬಿಜ್ಜಳನ ಭಂಡಾರಿಯಾಗಿ ಇಡೀ ರಾಜ್ಯದ ಐಶ್ವರ್ಯದ ಉಸ್ತುವಾರಿ ನೋಡಿಕೊಳ್ಳುತ್ತಿದ್ದ ಬಸವಣ್ಣ ತನ್ನನ್ನು ತಾನು ಸಂಪೂರ್ಣವಾಗಿ ಬಡವರ ಜೊತೆ ಸಮೀಕರಿಸಿಕೊಂಡಿರುವುದು ಮೇಲಿನ ವಚನದಿಂದ ಸ್ಪಷ್ಟವಾಗುತ್ತದೆ. ವ್ಯಕ್ತಿ ತನ್ನ ದೇಹವನ್ನೇ ಒಂದು ಚೈತನ್ಯಮಯ ದೇವಾಲಯವನ್ನಾಗಿ ಪರಿವರ್ತಿಸಿಕೊಳ್ಳಬೇಕು; ತಾನೇ ನಡೆದಾಡುವ ದೇವಾಲಯವಾಗಬೇಕು. ಶ್ರೀಮಂತರು ದೇವಾಲಯ ಕಟ್ಟಿಸಬಹುದು; ಅಲ್ಲಿ ವೈಭವವಿರಬಹುದು, ಭಗವಂತ ಇರುವುದಿಲ್ಲ, ಸಾಮಾನ್ಯರಿಗೆ ಪ್ರವೇಶವಿರುವುದಿಲ್ಲ. ದೇಹವೇ ದೇವಾಲಯವಾದರೆ ಆ ಪ್ರಶ್ನೆಗಳೇ ಇರವು. "ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ" ಎಂಬ ಮಾತಿನ ಬಸವಣ್ಣನವರ ಆಶಯವೇನೇ ಇರಲಿ, ಆ ಮಾತು ಚಳವಳಿಯ ಸ್ವರೂಪವನ್ನು–ಜನತೆಯ ಸಾಮೂಹಿಕ ಮನಸ್ಸು ಸ್ಥಗಿತಗೊಂಡಿದ್ದುದು ಕ್ರಮೇಣ ಚಲನೆಯನ್ನು ಪಡೆದು ಕ್ರಿಯಾಶೀಲವಾಗುವುದನ್ನು ಸಂಕ್ಷಿಪ್ತವಾಗಿ ಧ್ವನಿಪೂರ್ಣವಾಗಿ ಹೇಳುತ್ತದೆ.

ಸಹಜವಾಗಿಯೇ ಶರಣ ಚಳವಳಿಗೆ ಬಹು ಸಂಖ್ಯೆಯ ಕೆಳವರ್ಗದ ಜನ ಉತ್ಸಾಹದಿಂದ ಸೇರಿಕೊಂಡರು; ಇಷ್ಟಲಿಂಗವನ್ನು ಧರಿಸಿದವರೆಲ್ಲರೂ ಸಮಾನರು, ಎಲ್ಲ 'ಕಾಯಕ'ಗಳೂ ಸಮಾನ ಮಹತ್ವದವು, ದಯೆ ಪರೋಪಕಾರ ಸತ್ಯಸಂಧತೆ ಇವೇ ನಿಜವಾದ ಧರ್ಮ–ಇಂತಹ ಮಾತುಗಳು ಯಾರನ್ನು ತಾನೇ ಆಕರ್ಷಿಸಲಾರವು? ಆ ಮುಂಚೆ ಗೋರಕನಾಥನೂ ಕೂಡ ದೇಹವೇ ದೇವಾಲಯವೆಂದು ಸಾರಿದ್ದನು.

ಭಕ್ತರ ಆನುಭಾವಿಕ ಉದ್ಗಾರಗಳು ಕೆಲವೆಡೆ ಮುಂದೆ ವ್ಯವಸ್ಥಿತ ದರ್ಶನಗಳಾಗಿ ರೂಪುಗೊಂಡದ್ದುಂಟು. ಉದಾಹರಣೆಗೆ, ತಮಿಳುನಾಡಿನ ನಾಯನ್ಮಾರರ (8 ಶ.) 'ತೇವಾರಂ'ಗಳನ್ನು 'ಶೈವಸಿದ್ಧಾಂತ'ವಾಗಿ ಮೆಯ್ಕಂಡ ದೇವರ್ (12 ಶ.) ಹತ್ತನೇ ಶತಮಾನದ ತಮಿಳು ಪ್ರಬಂಧಗಳನ್ನು ವಿಶಿಷ್ಟಾದ್ವೈತ ಸಿದ್ಧಾಂತವಾಗಿ (12 ಶ.) ರಾಮಾನುಜರು, ಚೈತನ್ಯನ ಬೋಧನೆಗಳನ್ನು ಬೃಂದಾವನದ ಆರು ಜನ ಗೋಸ್ವಾಮಿನ್‌ಗಳು ಬಂಗಾಳದ ವೈಷ್ಣವ ಧರ್ಮವಾಗಿ ರೂಪಿಸಿದ್ದುದನ್ನು ಇಲ್ಲಿ ಸ್ಮರಿಸಬಹುದು.

ನಾನಕನ (1500) ಕಾಲದ ಸಿಖ್ ಪಂಥವು ಹಿಂದೂಗಳನ್ನು ಮುಸ್ಲಿಮರನ್ನು ಭಗವಂತನ ಮಕ್ಕಳು, ಸೋದರರು ಎಂದು ಭಾವಿಸುವ ಹಿನ್ನೆಲೆಯಲ್ಲಿ ಜಾತಿಗಳ ಮೇಲು ಕೀಳನ್ನು ನಿವಾರಿಸುವ ಧ್ಯೇಯವುಳ್ಳುದಾಗಿತ್ತು. ಅವನು ತನ್ನ ಸಂದೇಶವನ್ನು ಭಾರತದ ಉದ್ದಗಲಕ್ಕೆ ಸಂಚರಿಸಿ, ಭಾರತದ ಆಚೆ ಸಿಲೋನಿಗೂ ಹೋಗಿ ಅಲ್ಲಿಯೂ ಬೀರಿದನು. ಗುರು ಅಂಗದನ ಕಾಲದಲ್ಲಿ (1550) ಹಿಂದೂಗಳಿಗೂ ಸಿಖ್ಖರಿಗೂ

ಅಂತರ ಹೆಚ್ಚಾಗುತ್ತ ಬಂದಿತು. ದೇವರನ್ನು ವಿಗ್ರಹ ರೂಪದಲ್ಲಾಗಲಿ ಚಿತ್ರರೂಪ ದಲ್ಲಾಗಲಿ ಆರಾಧಿಸಲು ಸಿಖ್ ಪಂಥದ ವಿರೋಧವಿದೆ. ಇಂತಹ ಭಿನ್ನಾಭಿಪ್ರಾಯಗಳ ಪರಿಣಾಮವಾಗಿ ಅಂತರ ಹೆಚ್ಚಾಗುತ್ತ ಬಂದು ಹಿಂದೂ ಮತ್ತು ಸಿಖ್ ಧರ್ಮಗಳು ಬೇರ್ಪಟ್ಟುವು.

ಕೇವಲ ಜಡ ಅರ್ಥಹೀನ ಶಾಸ್ತ್ರಾಚರಣೆಗಳ ಮುದ್ದೆಯಾಗಿದ್ದ ಧರ್ಮವನ್ನು ಮೇಲೆತ್ತಿ ಅದನ್ನೊಂದು ಜೀವನ ವಿಧಾನವನ್ನಾಗಿ ಪರಿವರ್ತಿಸಿದ ಕೀರ್ತಿ ಭಕ್ತಿ ಚಳವಳಿಗಳಿಗೆ ಸಲ್ಲುತ್ತದೆ. ಸಿರಿಯದಲ್ಲಿ ಆರಂಭವಾದ ಸೂಫಿ ಪಂಥ (7ನೆ ಶ.) ಒಂದು ಸಂತ ಚಳವಳಿಯಾಗಿದ್ದು, ಅದು ಇರಾಕಿನಲ್ಲಿ ಶಾಸ್ತ್ರಾಚರಣೆಗಳ ವಿರೋಧಿ ಚಳವಳಿಯಾಗಿ ವಿಕಾಸ ಹೊಂದಿತು. ಸೂಫಿ ಪಂಥವು ಇಸ್ಲಾಮಿನ ಸಾಂಪ್ರದಾಯಕ ಮತ ವಿರೋಧಿ "heterodox cult" ಎಂದು ಹೇಳಲಾಗಿದೆ. ಮತ್ತು ಅದಕ್ಕೂ ಭಾರತದ ಭಕ್ತಿಪಂಥಗಳಿಗೂ ದಟ್ಟ ಸಾಮ್ಯವಿರುವುದನ್ನು ಗುರುತಿಸಲಾಗಿದೆ. ಸೂಫಿ ಪಂಥದ ಅತ್ಯಂತ ಪ್ರಸಿದ್ಧ ವ್ಯಕ್ತಿ ಷೇಕ್ ಅಬ್ದುಲ್ ವಹಾಬನು (16 ಶ.) ಒಬ್ಬ ಅರಬ್ಬನಾಗಿದ್ದು, ಸಂಕಷ್ಟದ ಅಲೆಮಾರಿ ಜೀವನದ ದರವೇಶಿ ಫಕೀರನಾದ; ಅವನು ಗುಜರಾತಿಗೆ ಬಂದು ಸಿಲೋನಿಗೂ ಹೋಗಿ ನಿಸ್ವಾರ್ಥ ಸರಳ ಜೀವನವನ್ನು ಬದುಕಿದ. ಆ ಭಕ್ತಿ ಚಳವಳಿಗಳು ಹಿಂದೂ ಸಮಾಜದ ಚರಿತ್ರೆಯ ಉದ್ದಕ್ಕೂ ಅದನ್ನು ಸಜೀವಗೊಳಿಸುತ್ತ ಬಂದುವು. ಅವು ದೇವರನ್ನು ಸ್ವರ್ಗದಿಂದ ಮರ್ತ್ಯಕ್ಕೆ, ದೇವಾಲಯದಿಂದ ಮನುಷ್ಯನ ಹತ್ತಿರಕ್ಕೆ ತಂದುವು. ತಮಿಳುನಾಡಿನ ಸುಂದರರ್ ಹೇಳುತ್ತಾನೆ – "ದೇವಾಲಯದಲ್ಲಿರುವುದು ಜಡ ದೈವ; ಆದರೆ ಮನುಷ್ಯನಲ್ಲಿರು ವುದು ಚೈತನ್ಯಪೂರ್ಣ ದೈವ: ಎರಡನೆಯದಕ್ಕೆ ನಾವು ಸಲ್ಲಿಸುವುದೆಲ್ಲ ಮೊದಲನೆಯ ದಕ್ಕೆ ಸೇರುತ್ತದೆ". "ನೆಲಕ್ಕೆ ನೀರೆರೆದರೆ, ಮೇಲೆ ಪಲ್ಲವಿಸುತ್ತದೆ" ಎನ್ನುತ್ತಾನೆ ಬಸವ; ಬಡವರಿಗೆ ಕೊಡಿ, ಅದು ನಿಮಗೆ ಸ್ವರ್ಗದಲ್ಲಿ ಫಲವನ್ನು ನೀಡುತ್ತದೆ. ಈ ಆಶಯದ ಪ್ರತಿಧ್ವನಿ ಎಲ್ಲ ಭಕ್ತಿ ಚಳವಳಿಗಳಲ್ಲೂ ಉಂಟು.

ಭಾರತದ ಚಳವಳಿಗಳೆಲ್ಲ ವರ್ಣ ವ್ಯವಸ್ಥೆ, ಅದರ ಫಲವಾದ ಜಾತಿಭೇದವನ್ನು ಒಕ್ಕೊರಲಿನಿಂದ ಖಂಡಿಸಿವೆ. ಬಸವನ ಅಭಿಮಾನಿಯಾಗಿದ್ದ ಆಂಧ್ರದ ಮಲ್ಲಿಕಾರ್ಜುನ ಪಂಡಿತಾರಾಧ್ಯನು ತನ್ನ "ಶಿವಭಕ್ತಿ ಸಾರಮು" ಕೃತಿಯಲ್ಲಿ ಶಿವಭಕ್ತರಲ್ಲಿ ಜಾತಿಭೇದ ವನ್ನು ಮಾಡಕೂಡದೆಂದು ಹೇಳುತ್ತ, ಶಿವಭಕ್ತನಾಗಿರುವ ಅಸ್ಪೃಶ್ಯನನ್ನು ಬ್ರಾಹ್ಮಣ ಸಮಾನನನ್ನಾಗಿ ನೋಡಬೇಕೆನ್ನುತ್ತಾನೆ. ಅವನ ಪ್ರಕಾರ, ಬ್ರಾಹ್ಮಣರಂತೆಯೇ ಎಲ್ಲ ವರ್ಗದ ಶಿವಭಕ್ತರಿಗೂ ತೀವ್ರ ಶಿಕ್ಷೆಗಳಿಂದ ವಿನಾಯ್ತಿ ಇರಬೇಕು. ಬ್ರಾಹ್ಮಣನಾಗಿದ್ದ ಚೈತನ್ಯನು ಅಸ್ಪೃಶ್ಯರಿಗೂ ವೈಷ್ಣವ ದೀಕ್ಷೆಯನ್ನು ನೀಡಿದನು. ಅವನ ಪಂಥದಲ್ಲಿ ಮುಸ್ಲಿಮರಿಗೂ ಅವಕಾಶವಿದ್ದಿತು. ಕೆಳವರ್ಗದ ಅವನ ಶಿಷ್ಯರು ಶಾಮಾನಂದ ಮತ್ತು ಗೋವಿಂದ ಕರ್ಮರ್ಕರ್ ಇವರು ಕೀರ್ತನೆಗಳನ್ನು ರಚಿಸಿದ್ದಾರೆ. ಶಾಕ್ತ ಕಾಯಸ್ಥನಾದ

ಶಂಕರ ದೇವನು ಬ್ರಾಹ್ಮಣರನ್ನೂ ಹರಿಜನರನ್ನೂ ಸಮಾನವಾಗಿ ಕಂಡದ್ದಕ್ಕೆ ಕಟುವಾಗಿ ಟೀಕಿಸಲಾಯ್ತು. ತನ್ನ ಎಲ್ಲ ಜಾತಿಯ ಶಿಷ್ಯರು ಊಟದ ಮನೆಯಲ್ಲಿ ಸಮಾನ ಪಂಕ್ತಿಯಲ್ಲಿ ಕುಳಿತುಕೊಳ್ಳಲು ಸೂಚಿಸಿದ್ದನು. ಭಗವಂತನ ಪಿತೃತ್ವವನ್ನು ಮನುಷ್ಯರ ಸೋದರತ್ವವನ್ನು ಒತ್ತಿ ಹೇಳಿದ ಗುರುನಾನಕ್, "ಒಬ್ಬ ವ್ಯಕ್ತಿಯ ಜಾತಿ ಸ್ಥಾನಗಳು ಅವನ ವೃತ್ತಿಯಿಂದಲೆ ಹೊರತು, ಆಕಸ್ಮಿಕ ಹುಟ್ಟಿನಿಂದಲ್ಲ" ಎಂದನು. ಅವನು ಭಾವುಕನಾಗಿ ಒಂದೆಡೆ ನುಡಿದನು – "ತೀರ ಕೆಳ ಜಾತಿಗಳಲ್ಲಿ ತೀರ ನಿಕೃಷ್ಟರಿದ್ದಾರೆ, ನಾನಕ್, ನಾನು ಅವರ ಜೊತೆ ಇರುತ್ತೇನೆ." ನೇಕಾರನಾಗಿದ್ದ ಕಬೀರನ ಶಿಷ್ಯರಲ್ಲಿ ರವಿದಾಸನು ಚಪ್ಪಲಿ ಹೊಲೆಯುವವನು, ಧನ್ನನು ಒಬ್ಬ ಜಾಟ್ ರೈತ. ರಾಜಾಸ್ತಾನದ ಮಾವಜಿಯು (18 ಶ.) ಮನುಷ್ಯನ ಸಾಮಾಜಿಕ, ಧಾರ್ಮಿಕ ಸಮಾನತೆಯನ್ನು ನಂಬಿದ್ದವನು. ಬ್ರಾಹ್ಮಣನಾಗಿದ್ದ ಜ್ಞಾನದೇವನ (13 ಶ.) ಶಿಷ್ಯರಲ್ಲಿ ನಾಮದೇವನು ಚಿಪ್ಪಿಗ, ಸೇನನು ಕ್ಷೌರಿಕ, ಗೋರನು ಕುಂಬಾರ, ಜೋಗ ಪರಮಾನಂದನು ಗಾಣಿಗ, ಚೋಕ ಮೇಳನು ಒಬ್ಬ ಅಸ್ಪೃಶ್ಯ. ದೈವೀಭಕ್ತಿಯಿಂದ ಭಾವುಕನಾದ ಚೋಕ ಮೇಳನು ಫಂಡರಪುರದ ವಿಠೋಬ ದೇವಾಲಯವನ್ನು ಪ್ರವೇಶಿಸಿದ್ದರಿಂದ ಬ್ರಾಹ್ಮಣರಿಂದ ಏಟು ತಿನ್ನಬೇಕಾಯ್ತು. ಆಗ ಅವನು ನೋವಿನಿಂದ ತಾನು "ನಿಕೃಷ್ಟನಿರಬಹುದು, ತನ್ನ ಭಕ್ತಿ ಅಲ್ಲ; ಕಬ್ಬು ಡೊಂಕು ಇರಬಹುದು, ಅದರ ರಸ ಅಲ್ಲ" ಎಂದು ಹಾಡುತ್ತಾನೆ. ಶ್ರೀ ವೈಷ್ಣವ ಪಂಥದ ನಾಯಕ ರಾಮಾನುಜರು ಕಾಂಚೀಪೂರ್ಣನೆಂಬ ಶೂದ್ರ ಗುರುವಿಗೆ ಎಷ್ಟು ಮಾರುಹೋಗಿದ್ದರೆಂದರೆ ಅವನ ಶಿಷ್ಯನಾಗಿ ಅವನ ಪಾದಸೇವೆ ಮಾಡಲು ಮುಂದಾದರು. ಇದರಿಂದ ಒಂದು ಕ್ಷಣ ದಿಗ್ಭ್ರಾಂತನಾದ ಕಾಂಚೀಪೂರ್ಣ ಹಿಂದಕ್ಕೆ ಸರಿದಾಗ "ನಿಜವಾದ ವಿಷ್ಣುಭಕ್ತನೇ ನಿಜವಾದ ಬ್ರಾಹ್ಮಣ" ಎಂದರು ರಾಮಾನುಜರು. ಅದೇ ರಾಮಾನುಜರು ಕರ್ನಾಟಕದ ಮೇಲ್ಕೋಟೆಗೆ ದೆಹಲಿಯಿಂದ ರಾಮಪ್ರಿಯ ವಿಗ್ರಹವನ್ನು ತರಲು ಸಹಾಯ ಮಾಡಿದ ಹರಿಜನರನ್ನು "ತಿರುಕುಲತ್ತಾರ್" (=ಶ್ರೀಕುಲದವರು) ಎಂದು ಹೆಸರಿಸಿ, ವರ್ಷದಲ್ಲಿ ಉತ್ಸವದ ಸಂದರ್ಭದಲ್ಲಿ ಅವರಿಗೆ ಮೂರು ದಿನ ಮೇಲ್ಕೋಟೆ ತಿರುನಾರಾಯಣ ದೇವಾಲಯ ಪ್ರವೇಶಕ್ಕೆ ಅವಕಾಶ ಮಾಡಿಕೊಟ್ಟರು. (ಈಗಲೂ ಆ ಪದ್ಧತಿ ಮುಂದುವರಿದಿದೆ). ಆ ವೈಷ್ಣವ ಪರಂಪರೆಯ ತಿರುಪ್ಪಾಳ್ವಾರರು ಆಸ್ಪೃಶ್ಯನಾಗಿದ್ದರೂ ಅವರನ್ನು "ಆಳ್ವಾರ್" ಎಂದು ಕರೆದುದಲ್ಲದೆ ಹದಿಮೂರನೇ ಶತಮಾನದ ವೇದಾಂತ ದೇಶಿಕರು ಅವರ ಕೃತಿಗಳಿಗೆ ವ್ಯಾಖ್ಯಾನ ಬರೆದಿದ್ದಾರೆ. ಶೂದ್ರರಾಗಿದ್ದ ನಮ್ಮಾಳ್ವಾರರು ಹೀಗೆ ಹೇಳಿದ್ದಾರೆ – "ಒಬ್ಬ ಚಂಡಾಲನು ವಿಷ್ಣು ಭಕ್ತನಾಗಿದ್ದರೆ ಅವನು ಎಲ್ಲರ ಆರಾಧನೆಗೆ ಅರ್ಹ." ತಮಿಳುನಾಡಿನ ಶೈವ ನಾಯನ್ಮಾರರಲ್ಲಿ ನಂದನಾರ್ ಒಬ್ಬ ಅಸ್ಪೃಶ್ಯ. ಆಂಧ್ರದ ಶ್ರೇಷ್ಠ ವಾಗ್ಗೇಯಕಾರ ಅನ್ನಮಾಚಾರ್ಯರ ಪ್ರಕಾರ (15ನೇ ಶ.) ವಿಷ್ಣು ಭಕ್ತ ಅಸ್ಪೃಶ್ಯನು ಲೌಕಿಕ ಬ್ರಾಹ್ಮಣನಿಗಿಂತ ಶ್ರೇಷ್ಠ. ಹರಿಹರ ಕವಿಯ ಪ್ರಕಾರ (13ನೇ ಶ.) ಅಸ್ಪೃಶ್ಯ ಶಿವಭಕ್ತ

ಮಾದಾರ ಚೆನ್ನಯ್ಯನ ಉನ್ನತ ಶಿವಭಕ್ತಿಯ ವಿಷಯವನ್ನು ಕೇಳಿ ರಾಜನು ಅವನ ದರ್ಶನಕ್ಕೆ ಆನೆಯ ಮೇಲೇರಿ ಹೊಲೆಗೇರಿಗೆ ಬಂದು ಅವನ ಪಾದಗಳಿಗೆ ಬಿದ್ದಾಗ ಹೆದರಿ ಹಿಂತೆಗೆದ ಚನ್ನಯ್ಯನಿಗೆ "ನಿನ್ನ ಪಾದರಕ್ಷೆ ನನ್ನ ಕಿರೀಟಕ್ಕಿಂತ ಶ್ರೇಷ್ಠ" ವೆನ್ನುತ್ತಾನೆ. ಕರ್ನಾಟಕದ ಶಿವಶರಣರು ಉಳಿದ ಶಿವಭಕ್ತರನ್ನು "ಮಾಹೇಶ್ವರರು" ಎಂದು ಕರೆದರೆ ದಲಿತ ಶಿವಭಕ್ತರನ್ನು "ಹಿರಿಯ ಮಾಹೇಶ್ವರರು" ಎಂದು ಕರೆದು ಹೆಚ್ಚಿನ ಸ್ಥಾನವನ್ನು ನೀಡಿದರು. ಶಿವಭಕ್ತ ರಾಜ ಕರಿಕಾಲ ಚೋಳನು "ಮಾಹೇಶ್ವರ" ನಾದರೆ ಅಸ್ಪೃಶ್ಯ ಜಾತಿಯ ಶಿವಭಕ್ತ ಮಾದಾರ ಚನ್ನಯ್ಯನು "ಹಿರಿಯ ಮಾಹೇಶ್ವರ."

ಕರ್ನಾಟಕದ ಹರಿದಾಸ ಚಳವಳಿಯ (15–16 ಶ.) ಬ್ರಾಹ್ಮಣ ಪುರಂದರ, ಕುರುಬ ಕನಕದಾಸ ಇಬ್ಬರೂ ಕೃಷ್ಣದೇವರಾಯ ಚಕ್ರವರ್ತಿಯ ರಾಜಗುರು ವ್ಯಾಸರಾಯನ ಶಿಷ್ಯರು. ಒಂದು ಕತೆಯ ಪ್ರಚಾರ, ಕನಕದಾಸನನ್ನು ವ್ಯಾಸರಾಯರು ಶಿಷ್ಯನನ್ನಾಗಿ ಮಾಡಿಕೊಂಡದ್ದಕ್ಕೆ ಸಾಂಪ್ರದಾಯಕ ವಲಯಗಳು ತೀವ್ರವಾಗಿ ಪ್ರತಿಭಟಿಸಿದುವು. ಇವರೆಲ್ಲರೂ ಕನ್ನಡದ ಕೀರ್ತನಕಾರರು. ಪುರಂದರದಾಸರು ಒಂದೆಡೆ ಹೇಳುವಂತೆ – "ಸುಳ್ಳು ಹೇಳುವವನೇ ಹೊಲೆಯ, ಅವನು ಬ್ರಾಹ್ಮಣ ನಾಗಿದ್ದರೂ." ಒರಿಸ್ಸಾದ ಸಾಲ್‌ಬೇಗ್ (17ನೇ ಶ.) ಮುಸ್ಲಿಮನಾಗಿದ್ದರೂ ಪುರಿ ಜಗನ್ನಾಥನ ಭಕ್ತನಾಗಿದ್ದ. ಅವನ ಹೃದಯ ವಿದ್ರಾವಕ ಭಜನೆಗಳು ಒರಿಸ್ಸದ ಜಾನಪದ ಸಾಹಿತ್ಯದ ಭಾಗವಾಗಿ ಪರಿಣಮಿಸಿವೆ. ಒಂದು ಕತೆಯ ಪ್ರಕಾರ, ಸಾಲ್‌ಬೇಗನ ಗೈರು ಹಾಜರಿಯಲ್ಲಿ ಜಗನ್ನಾಥನ ರಥ ಮುಂದಕ್ಕೆ ಚಲಿಸಲು ನಿರಾಕರಿಸಿತು. ಈಗಲೂ ಜಗನ್ನಾಥನ ಉತ್ಸವದಲ್ಲಿ ರಥವು ಸಾಲ್‌ಬೇಗನ ಸಮಾಧಿ ಮುಂದೆ ಒಂದು ನಿಮಿಷ ನಿಂತು ಮುಂದೆ ಸಾಗುತ್ತದೆ. ಕರ್ನಾಟಕದಲ್ಲಿ ಶಿಶುನಾಳ ಷರೀಫ (19ನೇ ಶ.), ಚೆನ್ನೂರು ಜಲಾಲ್‌ಸಾಬರಂತಹ ಮುಸ್ಲಿಮ್ ತತ್ವಪದಕಾರರು ಎಲ್ಲ ಧರ್ಮ, ಪಂಥಗಳ ಸಮನ್ವಯಕಾರರಾಗಿ ಕಾಣಿಸುತ್ತಾರೆ.

ಬಸವ ಚಳವಳಿಯು (12 ಶ.) ಮುಖ್ಯವಾಗಿ ಒಂದು ಸಮಾಜೋ ಧಾರ್ಮಿಕ ಚಳವಳಿ. ಇಲ್ಲಿಯವರೆಗೆ ಆ ಚಳವಳಿಗೆ ಸೇರಿದ ಇನ್ನೂರ ಹದಿನಾರು ಲೇಖಕ ಲೇಖಕಿಯರ ಹದಿನೈದು ಸಾವಿರದ ಐದುನೂರ ಮೂವತ್ತಮೂರು (15,533) ವಚನಗಳು ಲಭ್ಯ. ಆ ಲೇಖಕರ ಹಿನ್ನೆಲೆ, ವೃತ್ತಿ, ಜಾತಿಗಳ ವಿಶ್ಲೇಷಣೆ ಸ್ಥೂಲವಾಗಿ ಹೀಗಿದೆ :

| | | | |
|---|---|---|---|
| ಅಂಬಿಗ | 1 | ಧಾನ್ಯ ಆಯುವುದು | 1 |
| ಅಡಿಗೆಯವ | 1 | ಸೌದೆ ಮಾರುವಾತ | 1 |
| ಕರಣಿಕ | 2 | ಕುರುಬ | 1 |
| ಕ್ಷೌರಿಕ | 1 | ಬತ್ತ ಕುಟ್ಟುವುದು | 1 |
| ಗ್ರಂಥ ಭಂಡಾರಿ | 1 | ಚಪ್ಪಲಿ ಮಾಡುವುದು | 1 |

| | | | |
|---|---|---|---|
| ಜಾನಪದ ಕಲಾವಿದರು | 5 | ದನಗಾಹಿ | 1 |
| ದಾಸೋಹಿ | 1 | ನೀರು ಹೊರುವಾತ | 1 |
| ನೇಕಾರ | 4 | ಬಡಗಿ | 2 |
| ಕಾವಲುಗಾರ | 4 | ಲಾಯದ ಕೆಲಸ | 1 |
| ಬುಟ್ಟಿ ಹೆಣೆವಾತ | 1 | ಬೇಡ | 1 |
| ಮಡಿವಾಳ | 1 | ಮೀನುಗಾರ | 1 |
| ಧಾರ್ಮಿಕ ಕೆಲಸಗಳು | 8 | ರತ್ನ ವ್ಯಾಪಾರಿ | 1 |
| ಸೂಳೆ | 1 | ವೈದ್ಯ | 1 |
| ರೈತ | 4 | ವ್ಯಾಪಾರಿ | 1 |
| ಕೊಡೆ ಹಿಡಿವಾತ | 1 | ಸರ್ಕಾರಿ ಉದ್ಯೋಗಿ | 5 |
| ಹಗ್ಗ ಹೊಸೆಯುವುದು | 1 | ಸಂಚಿಯವರು | 2 |
| ಪಾತ್ರೆ ಕೆಲಸ | 1 | ಹೆಂಡ ಮಾರಾಟ | 1 |
| ಚಿಪ್ಪಿಗ | 1 | ದೋಸೆ ಮಾಡುವುದು | 1 |
| ಬೆಳಗಿನ ಜಾವ ಕೂಗುವುದು | 1 | ಕಳ್ಳತನ | 1 |

ಇವು ಕೆಲವು ಸುಲಭವಾಗಿ ಗುರುತಿಸಬಹುದಾದ ಹಿನ್ನೆಲೆಗಳು. ಬಹುತೇಕ ಸಮಾಜದ ಎಲ್ಲ ವರ್ಗದ ಜನರೂ ಅಲ್ಲಿ ಪ್ರತಿನಿಧಿತವಾಗಿದ್ದಾರೆ; ಅವರಲ್ಲಿ ಶ್ರಮಜೀವಿಗಳು ನಿಕೃಷ್ಟ ಜಾತಿಗಳವರೇ ಹೆಚ್ಚು ಎಂಬುದು ಸ್ಪಷ್ಟ. 'ಭಕ್ತಿ ಭಂಡಾರಿ' ಬಸವಣ್ಣನ ನೇತೃತ್ವದಲ್ಲಿ ನಂಬಿಕೆ, ಶ್ರದ್ಧೆಗಳನ್ನಿಟ್ಟು ಅವರೆಲ್ಲ ಒಂದುಗೂಡಿದರು ಎಂಬುದನ್ನು ನೋಡಿದರೆ, ಅದಕ್ಕೆ ಕಾರಣ "ನಂಬಿ ಕರೆದರೆ ಶಿವನು ಓ ಎನ್ನುತ್ತಾನೆ" ಎಂಬ ಧರ್ಮದ ಸರಳ ವ್ಯಾಖ್ಯಾನ, ಜಾತಿಗಳ ಮತ್ತು ಅವರ ವೃತ್ತಿಗಳ ಸಮಾನತೆ ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಬಸವಣ್ಣನ ವ್ಯಕ್ತಿತ್ವ. ಅವನ 'ಮಹಾಮನೆ'ಯಲ್ಲಿ ಸೇರುತ್ತಿದ್ದ ಭಕ್ತರಲ್ಲಿ ಬ್ರಾಹ್ಮಣನು ದಲಿತನ ಜೊತೆ ಅವನ ತೋಳಿಗೆ ತನ್ನ ತೋಳು ಅಂಟಿದಂತೆ ಕುಳಿತುಕೊಂಡು, ಮುಕ್ತ ಮನಸ್ಸಿನಿಂದ ಚರ್ಚೆ ಮಾಡುತ್ತಿದ್ದ ಚಿತ್ರ 'ಶೂನ್ಯ ಸಂಪಾದನೆ'ಯಲ್ಲಿ ದೊರಕುತ್ತದೆ. ಪ್ರತಿಯೊಬ್ಬನೂ ಇನ್ನೊಬ್ಬ ಶರಣ ತನ್ನ ಸಮಾನ ಎಂದಲ್ಲ, ತನಗಿಂತ ಶ್ರೇಷ್ಠ ಎಂದು ಭಾವಿಸುತ್ತಿದ್ದ; ಅಂದಿನ ಸಮಾನತೆಯ ಪರಿಕಲ್ಪನೆಯೇ ಇದು. ಮಡಿವಳ ಮಾಚಿದೇವನು ಬಸವಣ್ಣನಿಂದ ಸನ್ಮಾರ್ಗವನ್ನು ಅರಿತು ಅವನ ಪಾದಗಳಿಗೆ ನಮೋ ಎಂದರೆ, ಅದೇ ಬಸವಣ್ಣನು ಮಾಚಿದೇವನಿಂದ ಮಾರ್ಗದರ್ಶನ ಪಡೆದು ಅವನ ಪಾದಗಳಿಗೆ ನಮೋ ಎನ್ನುತ್ತಾನೆ. ಹುಟ್ಟು ಬ್ರಾಹ್ಮಣ

ನಾದ ಬಸವಣ್ಣ ದಲಿತನ ಮನೆಗೆ ಹೋಗಿ ಆಹಾರವನ್ನು ಹಂಚಿಕೊಂಡ. ಒಂದು ಘಟ್ಟದಲ್ಲಿ ಬ್ರಾಹ್ಮಣ ಮಧುವಯ್ಯನ ಮಗಳಿಗೂ ದಲಿತ ಹರಳಯ್ಯನ ಮಗನಿಗೂ ವಿವಾಹ ಏರ್ಪಾಟಾಗಿ ಎಲ್ಲರ ಒಪ್ಪಿಗೆ ಪಡೆಯಿತು. ಆದರೆ ಅದನ್ನು ಸಾಂಪ್ರದಾಯಕ ಜನರು ವಿರೋಧಿಸಿದುದರ ಪರಿಣಾಮವಾಗಿ ಬಿಜ್ಜಳನು ಅವರನ್ನು ಕೊಲ್ಲಿಸಿದ್ದು, ರಾಜಧಾನಿಯಲ್ಲಿ ರಕ್ತಪಾತವಾದುದು ಐತಿಹಾಸಿಕವಾಗಿ ಪ್ರಸಿದ್ಧವೇ ಆಗಿದೆ.

ಶರಣ ಚಳವಳಿ ಒಂದು ಪೂರ್ಣ ಪ್ರಮಾಣದ ಸಾಮಾಜಿಕ ಚಳವಳಿ. ಉಳಿದೆಲ್ಲ ಭಕ್ತಿ ಚಳವಳಿಗಳು ಮನುಷ್ಯನ ಆಧ್ಯಾತ್ಮಿಕ ಸಮಾನತೆಯನ್ನು ಮಾತ್ರ ಎತ್ತಿ ಹಿಡಿದುವು. ಆದರೆ ಶರಣ ಚಳವಳಿಯೊಂದೇ ಆಧ್ಯಾತ್ಮಿಕ ಸಮಾನತೆಯ ಜೊತೆ ವೈವಾಹಿಕ ಸಂಬಂಧದ ಸಾಮಾಜಿಕ ಸಮಾನತೆಯನ್ನೂ ಪ್ರತಿಪಾದಿಸಿತು. ಇದು ಆ ಚಳವಳಿಯನ್ನು ಉಳಿದ ಚಳವಳಿಗಳಿಂದ ಭಿನ್ನವಾಗಿಸುವ ವಿಶಿಷ್ಟಾಂಶ (distinguishing feature).

ಲೆನಿನ್ನನ ಕಮ್ಯುನಿಸ್ಟ್ ಚಳವಳಿಗೆ ಕಾರ್ಲ್ ಮಾರ್ಕ್ಸ್‌ನು ಒಂದು ಸೈದ್ಧಾಂತಿಕ ನೆಲೆಗಟ್ಟನ್ನು ಒದಗಿಸಿದ ರೀತಿಯಲ್ಲಿ ಶರಣ ಚಳವಳಿಯಲ್ಲಿ ಕೆಲಸ ಮಾಡಿದವನು ವಿದ್ವಾಂಸ, ಚಿಂತಕ ಚನ್ನಬಸವಣ್ಣ. ಚನ್ನಬಸವ ಒಂದು ರೀತಿಯಲ್ಲಿ ಸಿದ್ಧಾಂತಿಯಾದರೆ ಬಸವಣ್ಣ ಆ ಸಿದ್ಧಾಂತವನ್ನು ನಿಜವಾಗಿಸಿದ ಕ್ರಿಯಾಶೀಲ. ಚನ್ನಬಸವಣ್ಣನ ಒಂದು ವಚನವು ಹೇಳುತ್ತದೆ – ಇನ್ನೊಬ್ಬ ಶರಣನ ಮನೆಯಲ್ಲಿ ಸಹಭೋಜನ ಮಾಡಿ 'ಶಿವಾಚಾರ'ವನ್ನು ಗೌರವಿಸಿದೆವು ಎಂದು ಬರೀ ಹೇಳಿಕೊಂಡರೆ ಸಾಲದು; ಅಂಥ ಅವರು ಹೆಣ್ಣು ಕೊಟ್ಟು ಹೆಣ್ಣು ತರುವುದು ತಮ್ಮ ಜಾತಿಯಲ್ಲೇ ಸರಿ ಎಂಬ 'ಕುಲಾಚಾರ'ವನ್ನು ಹೇಳಿಕೊಂಡು, ಮದುವೆ ವಿಷಯ ಬಂದಾಗ ಜಾತಿಭೇದವನ್ನು ಮಾಡುತ್ತಾರೆ. "ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಕೊಡುವುದು ಕೊಂಬುದು ಸದಾಚಾರ, ಉಳಿದುದೆಲ್ಲ ಅನಾಚಾರ." ಬ್ರಾಹ್ಮಣ, ದಲಿತ ಇಬ್ಬರೂ ಹೆಣ್ಣು ಕೊಟ್ಟು ಹೆಣ್ಣು ತರುವುದೇ "ಸದಾಚಾರ", ಉಳಿದುದೆಲ್ಲ "ಅನಾಚಾರ" – ಇದು ಅಂದಿನ ಚಳವಳಿಯ ತಾರಕಮಂತ್ರ. ಇಂದಿಗೂ ವೀರಶೈವರಲ್ಲಿಯೇ ಬೇರೆ ಬೇರೆ ಜಾತಿಗಳಲ್ಲಿ ಪರಸ್ಪರ ಮದುವೆಗಳಾಗುವುದು ದುಸ್ತರವಾಗಿದೆ. ವೀರಶೈವ ಡೋಹರ ವರ್ಗ ಇಂದಿಗೂ ಒಟ್ಟು ವೀರಶೈವದ ಕಕ್ಷೆಯಿಂದ ಹೊರಗುಳಿದಿದೆ. ಆದರೆ ಅಂದಿನ ಚಳವಳಿ ಬ್ರಾಹ್ಮಣರು ದಲಿತರು ಪರಸ್ಪರ ವಿವಾಹ ಸಂಬಂಧ ಬೆಳಸುವುದನ್ನು ಪ್ರಬಲವಾಗಿ ಪ್ರತಿಪಾದಿಸಿತು.

ಚನ್ನಬಸವಣ್ಣನ 'ಶಿವಾಚಾರ', 'ಕುಲಾಚಾರ'ಗಳನ್ನು ಸಮಾಜವಿಜ್ಞಾನಿ ಷೆರಿಂಗ್ ಬಳಸುವ 'religious duties', 'caste duties' ಪದಗಳಿಗೆ ಸ್ಥೂಲ ಸಂವಾದಿಗಳೆನ್ನಬಹುದು. ಷೆರಿಂಗ್ ಸರಿಯಾಗಿ ಗಮನಿಸಿರುವಂತೆ ಹಿಂದೂ ಸಂದರ್ಭದಲ್ಲಿ ಧಾರ್ಮಿಕ ಕಟ್ಟುಪಾಡುಗಳಿಗಿಂತ ("ಶಿವಾಚಾರ") ಜಾತಿ ಕಟ್ಟುಪಾಡುಗಳು

("ಕುಲಾಚಾರ") ಹೆಚ್ಚು ಪ್ರಬಲ. ಧಾರ್ಮಿಕ ಕಟ್ಟುಪಾಡುಗಳನ್ನು ವ್ಯಕ್ತಿ ಮೀರಿದರೆ ಸಮಾಜ ಕ್ಷಮಿಸೀತು; ಜಾತಿ ಕಟ್ಟುಪಾಡುಗಳನ್ನು, ಅದರಲ್ಲೂ ವಿವಾಹ ಸಂಬಂಧಕ್ಕೆ ಸಂಬಂಧಿಸಿದ ನಿಯಮವನ್ನು ಮೀರಿದರೆ ಅದು ಹೆಚ್ಚು ಗಂಭೀರವಾದುದು. ಶಿವಭಕ್ತರಲ್ಲಿ ವಿವಾಹ ಸಂಬಂಧಗಳು ಏರ್ಪಡಲು ಬ್ರಾಹ್ಮಣ, ದಲಿತ ಎಂಬ ಜಾತಿಭೇದ ಅಡ್ಡಿಯಾಗಕೂಡದು ಎಂಬ ಶರಣ ಚಳವಳಿಯ ಸೂತ್ರ ಇಂದಿಗೂ ಅಪಾರ ದಿಟ್ಟತನದ್ದೇ ಸರಿ.

ಸಾಮಾಜಿಕವಾಗಿ ಗಂಡಿಗಿಂತ ಹೆಣ್ಣು ಕೀಳು ಎಂಬ ಭಾವನೆ ವ್ಯಾಪಕವಾಗಿದ್ದ ಸಂದರ್ಭದಲ್ಲಿ, ಅದರಲ್ಲೂ ವೇದಾಧ್ಯಯನದ ಪ್ರಶ್ನೆ ಬಂದಾಗ ಹೆಣ್ಣು ಶೂದ್ರಳಿಗೆ ಸಮಾನವೆಂದು ಬ್ರಾಹ್ಮಣ ವರ್ಗವು ಭಾವಿಸಿದ್ದಾಗ, ಭಕ್ತಿ ಚಳವಳಿಗಳು ಆ ನಿಯಮವನ್ನು ಧಿಕ್ಕರಿಸಿ ಸ್ತ್ರೀಯರನ್ನು ಪುರುಷ ಸಮಾನವಾಗಿ ಕಂಡವು.

ಇಲ್ಲಿಯೂ ತಂತ್ರಗಳು ಧೀರ ನಿಲುವನ್ನು ತೆಗೆದುಕೊಂಡಿವೆ. ಅವು ಚಂಡಾಲಿ, ದೊಂಬಿ, ರಜಕಿ, ಶಬರಿಯರಂತಹ ಕೆಳವರ್ಗಗಳಿಗೆ ಸೇರಿದ ಮಹಿಳೆಯರನ್ನು ಗೌರವದಿಂದ ಉಲ್ಲೇಖಿಸಿವೆ. ನಾಥ ಪಂಥದ ಪ್ರಕಾರ, ಮೈನಾವತಿ ರಾಣಿಗೆ ದೀಕ್ಷೆ ಕೊಟ್ಟ ಹಾಡಿಯು ಕೆಳವರ್ಗದ ಸ್ತ್ರೀ.

ಭಕ್ತಿ ಪಂಥಗಳು ಸ್ತ್ರೀಯರಿಗೆ ದೀಕ್ಷೆ ಕೊಡುವುದರ ಪರ. ಎಲ್ಲ ಭಕ್ತಿ ಪಂಥಗಳಲ್ಲಿ ಸ್ತ್ರೀ ಅನುಯಾಯಿಗಳುಂಟು. ಮಹಾರಾಷ್ಟ್ರದ ಜ್ಞಾನದೇವನ ತಂಗಿ ಮುಕ್ತಾಬಾಯಿಯ ಆಧ್ಯಾತ್ಮಿಕ ಸಾಧನೆಯನ್ನು ನಾಥ ಪಂಥದ ಚಾಂಗವಾಟೇಶ್ವರನು ಮೆಚ್ಚಿಕೊಂಡಿದ್ದಾನೆ. ಅದೇ ಜ್ಞಾನದೇವನ ಪಂಥಕ್ಕೆ ಸೇರಿದ ಜಾನಾಬಾಯಿಯು ಒಬ್ಬ ಸೇವಕಿ, ಕನ್ಹೋಪಾತ್ರ ಒಬ್ಬ ವೇಶ್ಯೆ–ಇಬ್ಬರೂ ಮರಾಠಿಯಲ್ಲಿ ಅಭಂಗಗಳನ್ನು ಬರೆದಿದ್ದಾರೆ. ತಮಿಳುನಾಡಿನ ಸುಪ್ರಸಿದ್ಧ ಆಂಡಾಳ್, ಕರಿಕ್ಕಾಲ ಅಮ್ಮೈಯಾರ್ ವೈಷ್ಣವ, ಶೈವ ಪಂಥಗಳಿಗೆ ಸೇರಿದವರು. ಅಲ್ಲಿನ ಶ್ರೀ ವೈಷ್ಣವ ದೇವಾಲಯಗಳಲ್ಲಿ ಈಗಲೂ ಪ್ರತಿವರ್ಷದ ಮಾಘಮಾಸದಲ್ಲಿ ಅಂಡಾಳಳ 'ತಿರುಪ್ಪಾವೈ'ಗಳನ್ನು ಭಕ್ತಿಯಿಂದ ಹಾಡುತ್ತಾರೆ. ಚೈತನ್ಯ ಪಂಥದ ಜಾಹ್ನವಿ, ಹೇಮಲತಾ ಇಬ್ಬರೂ ವಿದ್ವಾಂಸರೇ. ಬಿಹಾರದ ವಿದ್ಯಾಪತಿಯು ಸ್ತ್ರೀಶಿಕ್ಷಣದ ಪರವಾಗಿದ್ದವನು.

ರಜಪೂತ ರಾಣಿ ಮೀರಾಬಾಯಿಯ (16ನೇ ಶ.) ಭಜನೆಗಳು ಬಹುಪ್ರಸಿದ್ಧ; ಅವಳದು ಭಕ್ತಿಯ ಧರ್ಮವೇ ಆಗಿತ್ತು. ಈಗಲೂ "ಮೀರಾಬಾಯಿಗಳು" ಎಂದು ಕರೆದುಕೊಳ್ಳುವ ಎಲ್ಲ ಜಾತಿಗಳ ವಿಧವೆಯರು ಮೀರಾಳ ಅನುಯಾಯಿಗಳೆಂದು ಹೇಳಿಕೊಂಡು, ಸರಳ ಶಿಸ್ತುಬದ್ಧ ಜೀವನವನ್ನು ಬದುಕುತ್ತಾರೆ. ರಾಜಾಸ್ಥಾನದ ಚರಣದಾಸನ (18ನೇ ಶ.) ಶಿಷ್ಯರಲ್ಲಿ ಪುರುಷ ಸ್ತ್ರೀಯರಿಬ್ಬರೂ ಇದ್ದರು. ಸ್ತ್ರೀಯನ್ನು ಕಡೆಗಣಿಸುವ ಯಾವುದೇ ಕ್ರಮಕ್ಕೆ ಗುರುನಾನಕನ ವಿರೋಧವಿತ್ತು – "ಸ್ತ್ರೀಯೇ ನಮ್ಮನ್ನು ಗರ್ಭದಲ್ಲಿ ಹೊತ್ತು ಹೆತ್ತವಳು; ಅವಳ ಬಗ್ಗೆ ಕನಿಷ್ಠವಾಗಿ ಏಕೆ ಮಾತ–

ನಾಡಬೇಕು.” ಅವನ ಅನುಯಾಯಿಗಳು ‘ಸತಿ’ ಮತ್ತು ‘ಘೋಷಾ’ ಪದ್ಧತಿಗಳನ್ನು ವಿರೋಧಿಸಿದರು.

ಈಚಿನ ಹರಿದಾಸ ಪರಂಪರೆಗೆ ಸೇರಿದ ಹೆಳವನ ಕಟ್ಟೆ ಗಿರಿಯಮ್ಮ, ಹರಪನಹಳ್ಳಿ ಭೀಮವ್ವರು (17–18 ಶ.) ಕೀರ್ತನೆ ರಚಿಸಿದ್ದಾರೆ. ಅವು ಜನಪ್ರಿಯವೂ ಆಗಿವೆ.

ಸ್ತ್ರೀಯರು ಸಾಧನೆ, ವಿದ್ವತ್ತುಗಳಲ್ಲಿ ಪುರುಷರಿಗೆ ಸಮನಾಗಿ ಬೆಳೆಯುವಂತಹ ವಾತಾವರಣವನ್ನು ಶರಣ ಚಳವಳಿ ನಿರ್ಮಿಸಿತು. ಜೇಡರ ದಾಸಿಮಯ್ಯ ಹೇಳುತ್ತಾನೆ: “ಮೊಲೆ ಮುಡಿ ಬಂದರೆ ಹೆಣ್ಣೆಂಬರು, ಗಡ್ಡ ಮೀಸೆ ಬಂದರೆ ಗಂಡೆಂಬರು. ನಡುವೆ ಸುಳಿವ ಆತ್ಮನು ಹೆಣ್ಣೂ ಅಲ್ಲ, ಗಂಡೂ ಅಲ್ಲ.” ಸಿದ್ಧರಾಮನ ಅಭಿಪ್ರಾಯದಲ್ಲಿ ಹೆಣ್ಣು ಮಾಯೆ ಅಲ್ಲ, ಹೆಣ್ಣು ಸಾಕ್ಷಾತ್ ದೈವವೇ. ಹಲವು ಸಾರಿ ತಮ್ಮ ಗಂಡಂದಿರಿಗೆ ಮಹಿಳೆಯರು ಸರಿಯಾದ ಮಾರ್ಗದರ್ಶನ ಮಾಡಿದ ನಿದರ್ಶನಗಳಿವೆ. ಅಲ್ಲಮನಂತಹ ಶ್ರೇಷ್ಠ ಅನುಭಾವಿಗೆ ಅದ್ವೈತದ ನಿಜವಾದ ಅರ್ಥವನ್ನು ತಿಳಿಸಿಕೊಡುತ್ತಾಳೆ, ಅವನ ಬಂಧುವಲ್ಲದ ಮುಕ್ತಾಯಕ್ಕ, ಅವಳು “ಅರಿವಿನ ವಿಶ್ರಾಮ” (=ಜ್ಞಾನದ ತುತ್ತತುದಿ) ಎಂದೇ ಪ್ರಖ್ಯಾತನಾಗಿದ್ದ ಅಲ್ಲಮನ ಜೊತೆ ದ್ವೈತ, ಅದ್ವೈತಗಳ ಬಗ್ಗೆ ಚರ್ಚೆ ಕೂಡ ಮಾಡಬಲ್ಲವಳಾಗಿದ್ದಳು. ‘ವಾಗದ್ವೈತ’ ಎಂದರೆ ಬರೀ ಮಾತಿನ ಅದ್ವೈತವು ವ್ಯರ್ಥ; ನಿಜವಾದ ಅದ್ವೈತ ಒಂದು ಸ್ಥಿತಿ, ಆ ಸ್ಥಿತಿಗೆ ಹೋದವನು ಮಾತನ್ನು ಮೀರುತ್ತಾನೆ : ಅವನು “ಅರಿತು ಮರೆತವನು” (ಅರಿತು, ತಾನು ಅರಿತಿದ್ದೇನೆ ಎಂಬುದನ್ನು ಮರೆತವನು) ಎಂಬ ಅವಳ ಮಾತು ಅತ್ಯಂತ ಅರ್ಥಪೂರ್ಣ. ತಾನು ಕೈ ಹಿಡಿದ ಗಂಡನನ್ನು ತ್ಯಜಿಸಿ ಚೆನ್ನಮಲ್ಲಿಕಾರ್ಜುನ ದೈವಕ್ಕಾಗಿ ಹಂಬಲಿಸಿದ ಮಹಾದೇವಿಯಕ್ಕನ ವಚನಗಳು ಅತ್ಯಂತ ಸುಂದರ ಭಾವಗೀತೆಗಳೂ ಹೌದು. ನೂಲುವ, ದೋಸೆ ಮಾಡುವ, ಬತ್ತ ಕುಟ್ಟುವ ಇತ್ಯಾದಿ ಕಾಯಕಗಳನ್ನು ಕೈಗೊಂಡಿದ್ದ ಹಲವು ಮಹಿಳೆಯರ ರಚನೆಗಳು ದೊರಕಿವೆ. ಸೂಳೆ ಸಂಕವ್ವೆಯ ವಚನದ ಅಂಕಿತ “ನಿರ್ಲಜ್ಜೇಶ್ವರ”ವು ಅವಳ ಬಗ್ಗೆ ಎಲ್ಲವನ್ನೂ ಹೇಳುತ್ತದೆ. ದಲಿತ ಉರಿಲಿಂಗ ಪೆದ್ದಿಯ ಹೆಂಡತಿ ಕಾಳವ್ವೆ ವಚನಕಾರ್ತಿಯಲ್ಲದೆ ಸಂಸ್ಕೃತದ ಒಳ್ಳೆ ಜ್ಞಾನವಿದ್ದವಳೂ ಆಗಿದ್ದಳು. ವಚನಕಾರ್ತಿಯರು ಅವರ ತಾಯ್ನುಡಿ ಕನ್ನಡದಲ್ಲಿ ಮಾತ್ರವಲ್ಲ, ವೇದಾಧ್ಯಯನ ಮಾಡಿ ಸಂಸ್ಕೃತದಲ್ಲಿ ನಿಷ್ಣಾತರಾಗಿದ್ದರು ಕೂಡ. ಬ್ರಾಹ್ಮಣ ಸ್ತ್ರೀಯರಿಗೆ ಜನಿವಾರಧಾರಣೆ ನಿಷಿದ್ಧವಾಗಿದ್ದರೂ ಲಿಂಗಾಯತ ಮಹಿಳೆಯರು ಪುರುಷರಂತೆ ಇಷ್ಟಲಿಂಗವನ್ನು ಧರಿಸುತ್ತಿದ್ದರು; ಈಗಲೂ ಅಷ್ಟೇ.

ಭಕ್ತಿ ಚಳವಳಿಗಳು ಸಾಮಾನ್ಯವಾಗಿ ಬ್ರಹ್ಮಚರ್ಯವನ್ನು ಹೆಚ್ಚು ವೈಭವೀಕರಿಸಿಲ್ಲ, ಬ್ರಹ್ಮಚಾರಿಗೆ ಅಲ್ಲಿ ಶ್ರೇಷ್ಠ ಸ್ಥಾನವಿದ್ದರೂ, ಆ ಚಳವಳಿಗಳ ನೇತಾರರು ಹಲವರು ಗೃಹಸ್ಥರೇ ಆಗಿದ್ದರು. ಪ್ರಾಪಂಚಿಕ ಬದುಕನ್ನು ಅವು ನಿಷೇಧಿಸಲಿಲ್ಲ. ಅದರ ಬದಲು

ಪ್ರಪಂಚವನ್ನು ಒಪ್ಪಿಕೊಳ್ಳುವ, ಎದುರಿಸುವ ಮಾತುಗಳೇ ಅಲ್ಲಿ ಕಾಣಿಸುತ್ತವೆ. ಪುರಂದರದಾಸರ ಪ್ರಸಿದ್ಧ ಮಾತೊಂದಿದೆ – "ಈಸಬೇಕು, ಇದ್ದು ಜೈಸಬೇಕು". ಬದುಕಿನ ಹೊನಲಿನಲ್ಲಿ ಅಗತ್ಯವಿದ್ದರೆ ಬಂಡೆಯಂತೆ ಗಟ್ಟಿಯಾಗು; ಅಂತೆಯೇ ಬಲ್ಲವರ ಮುಂದೆ ಬಿಲ್ಲಿನಂತೆ ಬಾಗು; ಅದು ಲೋಕದ ಜನಕ್ಕೆ ಪುರಂದರರ ಬೋಧನೆ. ಬಸವಣ್ಣ ಇಹದ ಬದುಕನ್ನು ಕಮ್ಮಟಕ್ಕೆ ಹೋಲಿಸುತ್ತಾನೆ; ಕಮ್ಮಟದಲ್ಲಿ ಲೋಹದ ತುಂಡೊಂದು ಬೆಂಕಿಯಲ್ಲಿ ಬೆಂದು, ಹೊಡೆತದಿಂದ ಆಕಾರವನ್ನು ಪಡೆದು ನಾಣ್ಯದ ಮುದ್ರೆ ಒತ್ತಿಸಿಕೊಂಡ ಬಳಿಕ, ಅದು ಹೊರಗೆ ಬೇರೊಂದು ಬೆಲೆಯನ್ನು ಪಡೆಯುತ್ತದೆ. ಅಂತೆಯೇ, ಬದುಕಿನ ಕಷ್ಟದ ಕುಲುಮೆ ಮನುಷ್ಯನನ್ನು ರೂಪಿಸುತ್ತದೆ. ಅಂತಹ ಮನುಷ್ಯ ಇಹದಲ್ಲೂ ಸಲ್ಲುತ್ತಾನೆ, ಪರದಲ್ಲೂ ಸಲ್ಲುತ್ತಾನೆ; ಒಂದು ಅದ್ಭುತ ಅರ್ಥಪೂರ್ಣ ಪ್ರತಿಮೆ ಇದು. ಇನ್ನೊಬ್ಬ ಶರಣನ ಪ್ರಕಾರ, ಸತಿ ಪತಿಗಳು ಒಂದಾದ ಭಕ್ತಿಯು ಶಿವನಿಗೆ ಹಿತವಾಗಿರುತ್ತದೆ. ಅದೇ ಪುರಂದರರು ಹೇಳುವಂತೆ, ಮಾನವನ ಬದುಕು ಅಮೂಲ್ಯ, ಅದನ್ನು ಹಾಳು ಮಾಡಬಾರದು. ತಮಿಳುನಾಡಿನ ಮಾಣಿಕ್ಯ ವಾಚಕರ ಪ್ರಕಾರ, ಮನುಷ್ಯರಾಗಿ ಹುಟ್ಟಿ ಶಿವನ ಕರುಣೆಯನ್ನು ಪಡೆಯುವ ಅವಕಾಶ ವಿಲ್ಲದ್ದಕ್ಕೆ ಬ್ರಹ್ಮ ವಿಷ್ಣುಗಳೇ ಪರಿತಾಪಪಡುತ್ತಿದ್ದಾರೆ.

ಭಕ್ತಿ ಚಳವಳಿಗಳು ದೈವಕ್ಕಿಂತ ರಾಜನು ದೊಡ್ಡವನೆಂದು ಒಪ್ಪಿಕೊಳ್ಳಲು ಸಿದ್ಧವಿರಲಿಲ್ಲ ಎಂಬ ದೃಷ್ಟಿಯಿಂದ ಅವು ಪ್ರಭುತ್ವದ ವಿರುದ್ಧ ನಡೆದ ಒಂದು ಬಗೆಯ ಪ್ರತಿಭಟನೆಗಳೂ ಹೌದು. ಅನೇಕ ಪ್ರಮುಖರು ರಾಜನನ್ನು ತಮ್ಮ ಯಜಮಾನನೆಂದು ಒಪ್ಪಿಕೊಳ್ಳಲಿಲ್ಲ ಮಾತ್ರವಲ್ಲ, ತಾವು ಭಗವಂತನನ್ನು ಬಿಟ್ಟು ಅನ್ಯರನ್ನು ಹೊಗಳುವುದಿಲ್ಲ ವೆಂದು ಸಾರಿದರು. ಆಳುವ ವರ್ಗಗಳ ಕ್ರೌರ್ಯವನ್ನು ಗುರುನಾನಕನು ಸ್ಪಷ್ಟ ಮಾತು ಗಳಲ್ಲಿ ಖಂಡಿಸಿದನು. ತಮಿಳುನಾಡಿನ ನಮ್ಮಾಳ್ವಾರರು ತಮ್ಮ "ತಿರುವಾಯ್‌ಮೊಳಿ" ಯಲ್ಲಿ, ಆಂಧ್ರದ ಅನ್ನಮಾಚಾರ್ಯರು ತಮ್ಮ ವಾಗ್ಗೇಯ ಕೃತಿಗಳಲ್ಲಿ ಮನುಷ್ಯನಾದವನು ಭಗವಂತನನ್ನು ಮಾತ್ರ ಸ್ತುತಿಸಬೇಕೇ ಹೊರತು ಮನುಷ್ಯರನ್ನಲ್ಲ; ಅನ್ನ, ವಸತಿಗಳಿಗಾಗಿ ಮನುಷ್ಯರನ್ನು ಕೀರ್ತಿಸುವುದು ಪಾಪ ಎನ್ನುತ್ತಾರೆ. ಮಾಣಿಕ್ಯವಾಚಕರ "ನಾವು ಯಾರಿಗೂ ಆಡಿಯಾಳುಗಳಲ್ಲ, (ಶಿವನನ್ನು ಬಿಟ್ಟರೆ) ಯಾರಿಗೂ ಹೆದರೆವು" ಎಂಬ ಸುಪ್ರಸಿದ್ಧ ಕೀರ್ತನೆಯನ್ನು ತಮಿಳುನಾಡಿನ ಶಿವದೇವಾಲಯಗಳಲ್ಲಿ ನಿತ್ಯವೂ ಹಾಡಲಾಗುತ್ತದೆ. ಅವನು ತನ್ನ ಯೌವನದಲ್ಲಿ ಇಬ್ಬರು ಯಜಮಾನರಿಗೆ ಆಡಿಯಾಳಾಗಿರುವುದು ಸಾಧ್ಯವಿಲ್ಲವೆಂದು ರಾಜನ ಬಳಿ ಮಂತ್ರಿಯಾಗಿದ್ದವನು ಆ ಪದವಿಯನ್ನು ತ್ಯಜಿಸಿ, ಶಿವಭಕ್ತನಾದನು. ಅಸ್ಸಾಮಿನ ಶಂಕರದೇವನು ಪುರಿಯ ಜಗನ್ನಾಥನಿಗಲ್ಲದೆ ಅನ್ಯರಿಗೆ ಬಾಗೆನು ಎಂಬ ಶಪಥವನ್ನೇ ತೊಟ್ಟಿದ್ದನು. ಬಿಜ್ಜಳನ ಭಂಡಾರಿಯಾಗಿದ್ದರೂ ಬಸವ ತನ್ನ ಸೋದರ ಶಿವಭಕ್ತರಿಗಾಗಿ ಮಾತ್ರ ಭಂಡಾರಿ ಯಾಗಿರುವುದಾಗಿ ಹೇಳಿ, ತನ್ನ ಒಳ ನಿಷ್ಠೆ ಶಿವನಿಗೆ ಮಾತ್ರ ಎಂದಿದ್ದಾನೆ. ಅವನಿಗಿಂತ ಮುಂಚೆ ಇದ್ದ ಕೊಂಡಗುಳಿ ಕೇಶಿರಾಜನು (ಕ್ರಿ.ಶ. 1120) ಆಸ್ಥಾನದಲ್ಲಿ ರಾಜ

ಆರನೆಯ ವಿಕ್ರಮಾದಿತ್ಯನಿಗೆ ಕೈಮುಗಿದಂತೆ ಕಂಡರೂ ಅವನು ಬಾಗುತ್ತಿದ್ದುದು ತನ್ನ ಕೈ ಬೆರಳಿನ ನಂದಿ ಮುದ್ರೆಯ ಉಂಗುರಕ್ಕೆ. ಅದು ರಾಜನಿಗೆ ತಿಳಿದು ಆ ಉಂಗುರವನ್ನು ಕೇಳಿ ಪಡೆದುಕೊಂಡಾಗ ಅವನು ಮಂತ್ರಿ ಪದವಿಗೆ ಸ್ವಸಂತೋಷ ದಿಂದ ತಿಲಾಂಜಲಿಯಿತ್ತು ತನ್ನ ಪತ್ನಿಯೊಡನೆ ರಾಜಧಾನಿ ಹೊರಗಿದ್ದ ದಲಿತ ಶಿವಭಕ್ತನ ಮನೆಯಲ್ಲಿ ನೆಲಸಿ ಅಲ್ಲಿ ತನ್ನ ಭಕ್ತಿಯ ಆಚರಣೆಯಲ್ಲಿ ತೊಡಗುತ್ತಾನೆ. ಹರಿಹರ ಕವಿಯಂತೂ (13 ಶ.) ಮನುಷ್ಯರ ಮೇಲೆ ಸಾಯುವವರ ಮೇಲೆ ಎಂದೂ ಕಾವ್ಯ ಬರೆಯಬೇಡಿ, ಭಗವಂತ ವಿರೂಪಾಕ್ಷನನ್ನು ಕುರಿತು ಮಾತ್ರ ಸ್ತೋತ್ರ ಮಾಡಿ ಎಂದು ಮನವಿ ಮಾಡಿಕೊಂಡಿದ್ದಾನೆ. ಹದಿನಾರನೇ ಶತಮಾನದ ಸುರಂಗ ಕವಿ ತನ್ನ ನಾಲಗೆಯನ್ನು ಶಿವನಿಗೆ ಮಾರಿದ್ದೇನೆ ಎಂದು ಹೇಳುವಷ್ಟು ದೂರ ಹೋದನು. ರಾಜನ ಆಸ್ಥಾನವೆಂದರೆ ಅಧಿಕಾರ, ಜಾತಿಗಳ ಒಂದು ಅನುಶ್ರೇಣಿ; ಭಗವಂತನ ಆಸ್ಥಾನದಲ್ಲಿ ಎಲ್ಲ ಭಕ್ತರು ಸಮಾನರು.

ಎಲ್ಲ ಭಕ್ತಿ ಚಳವಳಿಗಳ ಕೇಂದ್ರದಲ್ಲಿ ಒಬ್ಬ ಅಥವಾ ಕೆಲವರು ಪ್ರಮುಖರಿರು ತ್ತಾರೆ, ನಿಜ. ಆದರೆ ಗಮನಿಸಬೇಕಾದದ್ದೆಂದರೆ ಜನ ಸಮೂಹಕ್ಕೆ, ಧಾರ್ಮಿಕ ಮೇಳ ಗಳಿಗೆ ಚಳವಳಿಗಳು ನೀಡಿದ ಪ್ರಾಮುಖ್ಯ. "ಒಬ್ಬ ಕ್ರಿಶ್ಚಿಯನ್ನನು ಕ್ರಿಶ್ಚಿಯನ್ನನೇ ಅಲ್ಲ" ಎಂಬ ಒಂದು ಪ್ರಸಿದ್ಧೋಕ್ತಿಯಿದೆ–ಇದರರ್ಥ, ಒಂದು ಧರ್ಮ ಜೀವಂತವಾಗಿರ ಬೇಕಾದರೆ ಅದು ಹರಡಬೇಕಾದರೆ ಹಲವರ ಭಾಗವಹಿಸುವಿಕೆ ಅಗತ್ಯ; ಸಮೂಹ ಮುಖಿಯಾದಾಗಲೇ ಜನತೆಯ ಧರ್ಮದ ಬಗೆಗಿನ ಉತ್ಸಾಹವು ವ್ಯಾಪಕವಾಗುವುದು. ಭಕ್ತಿ ಶ್ರದ್ಧೆಗಳು ಸಮೂಹದಿಂದ ಉದ್ದೀಪನಗೊಳ್ಳುತ್ತವೆ. ಸಾಮೂಹಿಕ ಹಾಡು, ಭಜನೆ, ಕುಣಿತ, ಊಟ ಮಾಡುವುದು, ತೀರ್ಥಯಾತ್ರೆ, ಒಟ್ಟಿಗೆ ವಾಸಿಸುವುದು ಇವು ಭಕ್ತಿ ಚಳವಳಿಗಳಲ್ಲಿ ಪ್ರಮುಖ ಪಾತ್ರ ವಹಿಸಿದುವು. ಗುರುನಾನಕನ 'ಸಂಗತ್' ಎಲ್ಲ ಜನ ಸೇರಿ ಹಾಡುವ ಜಾಗವಾದರೆ, 'ಪಂಗತ್' ಎಲ್ಲರೂ ಸೇರಿ ಭೋಜನ ಮಾಡುವ ಜಾಗವಾಗಿತ್ತು. ಮಹಾರಾಷ್ಟ್ರದ 'ವಾರಕರಿ' ಪದ್ಧತಿಯಂತೆ, ಭಕ್ತರು ಪ್ರತಿವರ್ಷ ಫಂಡರಾಪುರಕ್ಕೆ 'ಅಭಂಗ'ಗಳನ್ನು ಎಡೆಬಿಡದೆ ಹಾಡುತ್ತ ಕುಣಿಯುತ್ತ ದೇವರ ನಾಮ ಘೋಷಿಸುತ್ತ ಸಾಮೂಹಿಕವಾಗಿ ಹೋಗಿ ದೇವರ ದರ್ಶನ ಮಾಡಬೇಕು. ನಿಯಮದ ಪ್ರಕಾರ ಭಕ್ತನು ವರ್ಷಕ್ಕೆ ನಾಲ್ಕು ಬಾರಿ, ತಪ್ಪಿದರೆ ಒಮ್ಮೆಯಾದರೂ ಆಷಾಢ ಏಕಾದಶಿ ದಿವಸ ಫಂಡರಪುರಕ್ಕೆ ಹೋಗಬೇಕು. ಅಲ್ಲಿ ವಿಠೋಬನ ದರ್ಶನ ಮಾಡಿ ಆಶೀರ್ವಾದ ಹೊತ್ತು ಬಂದ ವ್ಯಕ್ತಿ ವಿಠೋಬನೇ ಆಗಿರುವುದರಿಂದ, ಹಾಗೆ ದರ್ಶನ ಮಾಡಿ ಹಿಂದಿರುಗಿದ ಶೂದ್ರನಿಗೆ ಬ್ರಾಹ್ಮಣನೂ ನಮಸ್ಕರಿಸಬೇಕು. ಕರ್ನಾಟಕದ "ಪರಿಸೆ"ಯು ಶ್ರೀಶೈಲಕ್ಕೆ ಜನರು ಸಾಮೂಹಿಕವಾಗಿ ಹೋಗುವ ಧಾರ್ಮಿಕ ಆಚರಣೆ. ಅಲ್ಲಿಂದ ಹಿಂದಿರುಗಿದವರನ್ನು ಊರ ಜನ ಮೆರವಣಿಗೆಯಲ್ಲಿ ಕರೆದೊಯ್ದು ಸತ್ಕರಿಸುತ್ತಾರೆ; ಜನ ಅವರ ಪಾದಮುಟ್ಟಿ ನಮಸ್ಕರಿಸುತ್ತಾರೆ. ಮಧ್ಯಯುಗೀನ ರಾಜಾಸ್ಥಾನದಲ್ಲಿ 'ರಾಮದ್ವಾರ', 'ದಾದುದ್ವಾರ', 'ಅಖಾರ'ಗಳಂತಹ ಸಂಸ್ಥೆಗಳು

ಜನರಲ್ಲಿ ಧಾರ್ಮಿಕ ಸೋದರ ಭಾವವನ್ನು ಗಟ್ಟಿಗೊಳಿಸಲು ನಿಮಿತ್ತವಾದುವು. ಅವು ಸಾಮಾಜಿಕ ಕಾರ್ಯಗಳಲ್ಲೂ ತೊಡಗುತ್ತಿದ್ದುವು. ಶ್ರೀ ವೈಷ್ಣವರ 'ರಾಮಾನುಜ ಕೂಟ', ಮಾಧ್ವರ 'ದಾಸಕೂಟ'ಗಳು ಆಯಾ ಪಂಥೀಯರನ್ನು ಒಟ್ಟಿಗೆ ಸೇರಿಸಲು ನಿಮಿತ್ತ ವಾದುವು. 11–12ನೇ ಶತಮಾನಗಳಲ್ಲಿ ಪಶ್ಚಿಮ ಪಾಕಿಸ್ತಾನದ ಲಾಹೋರ್ ಸೂಫಿ ಸಂತರ ಚಟುವಟಿಕೆಗಳ ಕೇಂದ್ರವಾಗಿತ್ತು. ಅವರದು "ಇಸ್ಲಾಮಿನ ಆಧ್ಯಾತ್ಮೀಕರಣ" ಧ್ಯೇಯವಾಗಿದ್ದು, ಸಾಮೂಹಿಕ ಸಭೆಗಳಲ್ಲಿ ಭಕ್ತಿಯ ಮೂಲಕ ಭಗವಂತ ಮತ್ತು ಭಕ್ತರ ಐಕ್ಯವನ್ನು ಸಾಧಿಸುವುದನ್ನು ಪ್ರಚಾರ ಮಾಡಲು ಸಾಮೂಹಿಕ ಹಾಡು ("ಕವಾಲಿ") ಮತ್ತು ಕುಣಿತಗಳನ್ನು ("ಸಮ") ಬಳಸಲಾಯ್ತು. "ಕವಾಲಿ", "ಸಮ"ಗಳು ಆ ಜನರಲ್ಲಿ ಒಂದು ಬಗೆಯ ಭಾವಾವೇಶದ ಮೂಲಕ ಅವರನ್ನು "ಅಲ್ಲಾ"ನ ಐಕ್ಯದತ್ತ ಕೊಂಡೊಯ್ಯುತ್ತಿದ್ದುವು. ಬಂಗಾಳದ ಶತ್ತಾಸಿಯಂತಹ ಸೂಫಿಗಳು (15 ಶ.) ವೇದಾಂತವನ್ನು ಶ್ರದ್ಧೆಯಿಂದ ಅಭ್ಯಸಿಸಿದರು.

ಬಸವನ ಕಾಲದ ಧಾರ್ಮಿಕ ಗೋಷ್ಠಿಗಳ ಹೆಚ್ಚು ಸ್ಪಷ್ಟ ಚಿತ್ರಣ ನಮಗೆ ಲಭ್ಯ. ಅವುಗಳನ್ನು ಅನುಭವ ಗೋಷ್ಠಿ, ಅನುಭವ ಮಂಟಪ, ಶರಣ ಗೋಷ್ಠಿ ಮುಂತಾಗಿ ಹೆಸರಿಸಿದೆ. ದೈವ, ಆಧ್ಯಾತ್ಮಿಕ ಅನುಭವ (ಅನುಭಾವ) ಅವುಗಳಲ್ಲದೆ ಸಾಮಾಜಿಕ ಅಸಮಾನತೆ, ಸ್ತ್ರೀಯ ಸ್ಥಾನಮಾನ, ವೃತ್ತಿಗಳ ಲಕ್ಷಣ, ವ್ಯಕ್ತಿ ದೈವಗಳ ಸಂಬಂಧ, ಗಂಡ ಹೆಂಡತಿ ಸಂಬಂಧ, ಅಸ್ಪೃಶ್ಯತೆ ಇತ್ಯಾದಿ ಸಾಮಾಜಿಕ ವಿಷಯಗಳನ್ನು ಅಲ್ಲಿ ಮುಕ್ತವಾಗಿ ಚರ್ಚಿಸುತ್ತಿದ್ದರು. ಆ ಗೋಷ್ಠಿಗಳಲ್ಲಿ ಎಲ್ಲರಿಗೂ ಅಭಿಪ್ರಾಯ ಸ್ವಾತಂತ್ರ್ಯ ವಿತ್ತು. ಅಂತಹ ಗೋಷ್ಠಿಗಳಲ್ಲಿ ಸ್ಫೂರ್ತರಾದ ಹಲವರು ವಚನಗಳನ್ನು ಉದ್ಗರಿಸಿದರೆ ಅವುಗಳನ್ನು ವಚನಭಂಡಾರಿ ಶಾಂತರಸನು ಪ್ರತಿ ಮಾಡಿಕೊಳ್ಳುತ್ತಿದ್ದನೆಂದೂ ಹೇಳ ಲಾಗಿದೆ. ಅವನು ಬಸವನ ಮನೆಯ ಹಸ್ತಪ್ರತಿ ಭಂಡಾರದ ಮುಖ್ಯಸ್ಥನಾಗಿದ್ದನು. ಭಾರತದ ಬೇರೆ ಬೇರೆಡೆಗಳಿಂದ ಭಕ್ತರು ಕಲ್ಯಾಣಕ್ಕೆ ಆಕರ್ಷಿತರಾದರು; ಅಲ್ಲಿನ ಚರ್ಚೆಗಳಲ್ಲಿ ತಾವು ಭಾಗಿಗಳಾಗಿ ಸ್ಫೂರ್ತರಾದರು.

ಸಹಜವಾಗಿಯೆ ಆ ಚಳವಳಿಗಳ ಹಲವು ನಾಯಕರು ಸಂಸ್ಕೃತ ವಿದ್ವಾಂಸ ರಾಗಿದ್ದರೂ ಸಂಸ್ಕೃತಕ್ಕಿಂತ ದೇಶೀಯ ಭಾಷೆಗಳಿಗೆ ಹೆಚ್ಚಿನ ಮಹತ್ವವನ್ನು ಅವು ನೀಡಿದುವು. ಸಂಸ್ಕೃತವು ಎಲ್ಲ ಕಡೆಗೂ ಆಸ್ಥಾನದ ಪಾಂಡಿತ್ಯದ ಭಾಷೆ ತಾನೇ. ಎಲ್ಲ ಕಾಲ ದೇಶಗಳಲ್ಲಿ ಒಂದು ಕಡೆ ಪ್ರಾಕ್ತನ ಜಡ, ಸಾಂಪ್ರದಾಯಕ, ನಿರ್ದಿಷ್ಟ ಮಾರ್ಗ; ಇನ್ನೊಂದು ಕಡೆ ಸಮಕಾಲೀನ, ಚಲನಶೀಲ ಹೊಸ ಹುಡುಕಾಟ, ಸ್ವಾತಂತ್ರ್ಯ ಇವುಗಳ ಮಧ್ಯೆ ತಿಕ್ಕಾಟಗಳಿದ್ದೇ ಇರುತ್ತವೆ. ಸಂಸ್ಕೃತವು ಮುಖ್ಯವಾಗಿ ಮೊದಲ ವರ್ಗದ, ದೇಶೀಯಭಾಷೆಗಳು ಎರಡನೆಯ ವರ್ಗದ ಪ್ರತಿನಿಧಿಗಳು. ಮಧ್ಯಕಾಲೀನ ಕನ್ನಡದ "ವ್ಯಾಸಕೂಟ" "ದಾಸಕೂಟ" ಪದಗಳು ಆ ಎರಡು ಮಾದರಿಗಳನ್ನು ಸಮರ್ಥವಾಗಿ ಪ್ರತಿನಿಧಿಸುತ್ತವೆ. ಆ ಎರಡು ಪದಗಳು ಸ್ಥೂಲವಾಗಿ 'ಮಾರ್ಗ' 'ದೇಶಿ'ಗಳಿಗೆ ಸಮಾನ

ಗಳೆಂದು ಭಾವಿಸಿದರೂ ತಪ್ಪಿಲ್ಲ. 'ವ್ಯಾಸಕೂಟ'ದವರ ಒಲವು ಸಂಸ್ಕೃತವಾದರೆ, 'ದಾಸಕೂಟ'ದವರ ಒಲವು ಕನ್ನಡ. ಶ್ರೀ ವೈಷ್ಣವ ಸಂಪ್ರದಾಯದಲ್ಲಿ 'ವಡಗಲೈ' (ಉತ್ತರದವರು) ಪಂಥದವರಲ್ಲಿ ಸಂಸ್ಕೃತಕ್ಕೆ, 'ತೆಂಗಲೈ' (ದಕ್ಷಿಣದವರು) ಪಂಥದವರಲ್ಲಿ ತಮಿಳಿಗೆ ಹೆಚ್ಚು ಪ್ರಾಶಸ್ತ್ಯ. ತೆಂಗಲೈನವರಿಗೆ ತಮಿಳು ಪ್ರಬಂಧಗಳು 'ದ್ರಾವಿಡ ವೇದ'ವೇ ಸರಿ. ಕನ್ನಡ ವಚನಗಳನ್ನು ಮುಂದೆ 'ವಚನಾಗಮ' ಎಂದು ಕರೆದು ಅವುಗಳನ್ನು ಆಗಮಗಳಿಗೆ ಸಮಾನವಾಗಿ ನೋಡಿದ್ದುಂಟು. ಭಕ್ತಿ ಪಂಥಗಳೆಲ್ಲ ದಾಸಕೂಟವೇ. ಭಕ್ತಿ ಚಳವಳಿಗಳು ದೇಶ ಭಾಷೆಗಳ ಮೂಲಕ ತಮ್ಮ ಸಮಾಜಪರ, ಪ್ರಗತಿಪರ ಭಾವನೆ ಚಿಂತನೆಗಳನ್ನು ವ್ಯಕ್ತಪಡಿಸಿದ್ದರಿಂದ ಅವು ಜನಸಾಮಾನ್ಯರ ಬದುಕಿನ ಭಾಗವಾದುವು. ಎಲ್ಲ ಭಾರತೀಯ ಆಡು ಭಾಷೆಗಳೂ ಭಕ್ತಿ ಚಳವಳಿಗಳ ಫಲವಾದ ಕೃತಿಗಳಿಂದ ಶ್ರೀಮಂತಗೊಂಡಿವೆ.

ಮಧ್ಯಕಾಲೀನ ಭಾರತದಲ್ಲಿ ಭಕ್ತಿ ಚಳವಳಿಯು "ಲೋಕಭಾಷಾ" ಎನ್ನಿಸಿಕೊಂಡಿದ್ದ ಬ್ರಜ್‌ಭಾಷಾ, ಆವಧಿ, ಮೈಥಿಲಿ ಇತ್ಯಾದಿ ಭಾಷೆಗಳನ್ನು ಪುಷ್ಟಿಗೊಳಿಸಿತು. ಜಯದೇವ (11 ಶ.) ತನ್ನ ಗೀತಗಳನ್ನು ಸಂಸ್ಕೃತದಲ್ಲಿ ರಚಿಸಿದರೂ, 'ಪರಮವೈಷ್ಣವ ಭಕ್ತ', 'ಮೈಥಿಲಿ ಕೋಕಿಲ' ವಿದ್ಯಾಪತಿಯು (14 ಶ.) ಸಂಸ್ಕೃತ ಮತ್ತು 'ಅಪಭ್ರಂಶ' (ಆಡುಭಾಷೆ) ಎರಡೂ ಭಾಷೆಗಳಲ್ಲಿ ಕೃತಿ ರಚನೆ ಮಾಡಿದನು. ಅವನ 'ಪದಾವಲಿ'ಯು ಬಂಗಾಳಿ ಸಾಹಿತ್ಯದ ಮೇಲೆ ಅಪಾರ ಪರಿಣಾಮವನ್ನು ಬೀರಿತು. ವಿದ್ವಾಂಸರು ಹೇಳುವಂತೆ "ಬಿಹಾರದ ಆಡುಭಾಷೆ ಮೈಥಿಲಿಯು ಅವನಿಂದಾಗಿ ಸಾಹಿತ್ಯಕ ಭಾಷೆಯಾಯ್ತು". ಅವನು ಬಹುವಾಗಿ ಸ್ತ್ರೀಶಿಕ್ಷಣ ಪ್ರತಿಪಾದಕನಾಗಿದ್ದನು. ಅವನ ಗೀತಗಳ ಓಲೆಗರಿ ಹಸ್ತಪ್ರತಿಗಳು ನೇಪಾಳಕ್ಕೆ ಹೋಗಿ ಮುಂದಿನ ಮೂರು ಶತಮಾನ ನೇಪಾಳಿ ಕವಿಗಳ ಮೇಲೆ ಅದ್ಭುತ ಪರಿಣಾಮವನ್ನು ಬೀರಿದುವು. ಚಂಡಿದಾಸನ 'ವೈಷ್ಣವ ಸಹಜೀಯ ಪಂಥ'ದ ಕೇಂದ್ರ ತತ್ವ ಭಗವತ್ ಪ್ರೇಮವೇ ಆಗಿತ್ತು. ಹಲವು ಬಂಗಾಳಿ ಕವಿಗಳು (15–16 ಶ.) ನೇಪಾಳದಲ್ಲಿ ಸುಂದರ ಭಾವಗೀತೆಗಳನ್ನು ರಚಿಸಿದರು.

ಜ್ಞಾನದೇವನು ಸಂಸ್ಕೃತ ಪರಿಣತನಾದರೂ ಅವನು ತನ್ನ 'ಭಾವರತ್ನ ದೀಪಿಕಾ'ವನ್ನು ('ಜ್ಞಾನೇಶ್ವರಿ') "ಜನಭಾಷೆ" ಮರಾಠಿಯಲ್ಲಿ ಬರೆಯಲು ಬಯಸಿದ. ಅವನ ಸಮಕಾಲೀನರಾದ ಗೃಹಸೇವಕಿ ವೃತ್ತಿಯ ಜಾನಾಬಾಯಿ, ವೇಶ್ಯೆ ಕನ್ಹೊಪಾತ್ರರು ಅವನಿಂದ ಸ್ಫೂರ್ತರಾಗಿ ಮರಾಠಿಯಲ್ಲಿ ಗೀತರಚನೆ ಮಾಡಿದರು. ಮಹಾರಾಷ್ಟ್ರದ ಇನ್ನೊಬ್ಬ ಸಂತ ಏಕನಾಥನು (15 ಶ.) "ಸಂಸ್ಕೃತವು ದೇವಭಾಷೆಯಾದರೆ, ಪ್ರಾಕೃತವು (ಮರಾಠಿ) ದೆವ್ವಗಳ ಭಾಷೆಯೇ?" ಎಂದು ಸವಾಲು ಎಸೆದಿದ್ದಾನೆ. ಉದಾತ್ತ ದೈವೀ ಭಾವನೆಗಳಿಗೆ ಮರಾಠಿಯೇ ಶ್ರೇಷ್ಠ ಅಭಿವ್ಯಕ್ತಿ ಸಾಧನವೆಂದಿದ್ದಾನೆ. ಅಸ್ಸಾಮಿನ ಶಂಕರದೇವನು ಸಂಸ್ಕೃತದ ಭಾಗವತಪುರಾಣವನ್ನು

ಅಸ್ಸಾಮಿ ಭಾಷೆಗೆ ಅನುವಾದಿಸಿದನು. ಚೈತನ್ಯನು 'ಶಿಕ್ಷಾಷ್ಟಕ'ವೆಂಬ ಕಿರುಕೃತಿಯನ್ನು ಸಂಸ್ಕೃತದಲ್ಲಿ ರಚಿಸಿದ್ದರೂ ಅವನ ಅನುಯಾಯಿಗಳೆಲ್ಲ ಬಳಸಿದುದು ಬಂಗಾಳಿ; ಅವರಿಂದ ಬಂಗಾಳಿ ಸಾಹಿತ್ಯವು ಕಳೆಗೊಂಡುದಲ್ಲದೆ ಇಂದಿಗೂ ಅವರ ಕೃತಿಗಳು ಬಂಗಾಳಿ ಸಾಹಿತಿಗಳಿಗೆ ಪ್ರೇರಕ ಶಕ್ತಿ. ಗುರುನಾನಕನ ಮತ್ತು ಅವನ ಅನುಯಾಯಿಗಳ ಬೋಧನೆಗಳೆಲ್ಲ ಪಂಜಾಬಿಯಲ್ಲಿದ್ದು ಮುಂದೆ "ಗ್ರಂಥ-ಸಾಹಿಬ್" ಹೆಸರಲ್ಲಿ ಅವುಗಳನ್ನು ವ್ಯವಸ್ಥಿತಗೊಳಿಸಲಾಯ್ತು. ಅದು ಮೇಲ್ಜಾತಿಯವರ, ದಲಿತರ, ಅಂತೆಯೇ ಹಿಂದೂಗಳ ಮುಸ್ಲಿಮರ ಉಪದೇಶಗಳನ್ನೊಳಗೊಂಡಿದೆ. ಮಧ್ಯಕಾಲೀನ ರಾಜಾಸ್ಥಾನ ಸಾಹಿತ್ಯದ ಮುಖ್ಯ ವೈಶಿಷ್ಟ್ಯ, ರಾಜಾಸ್ಥಾನಿಯನ್ನು ಸಾಹಿತ್ಯದ ಭಾಷೆಯಾಗಿ ಬಳಸಿದ್ದು. ಮೀರಾಳ ಭಜನೆಗಳಿರುವುದು ರಾಜಾಸ್ಥಾನಿಯಲ್ಲಿ. ತುಳಸಿದಾಸನು (15–16 ಶ.) ಅಕ್ಷರಸ್ಥ ಅನಕ್ಷರಸ್ಥ ಎಂಬ ಭೇದವಿಲ್ಲದೆ ಎಲ್ಲರಿಗೂ ತಲಪಲೆಂದು ತನ್ನ ರಾಮಾಯಣವನ್ನು ಅವಧಿ ಭಾಷೆಯಲ್ಲಿ ಬರೆದನು. ನರಸಿ ಮೆಹ್ತನ (17 ಶ.) ರಚನೆಗಳು ಗುಜರಾತಿ ಭಾಷೆಯನ್ನು ಶ್ರೀಮಂತಗೊಳಿಸಿವೆ. ಅವನ "ವೈಷ್ಣವ ಜನ ತೋ ತೇನೇ ಕಹಿಯೆ" ಎಂಬ ಗೀತವು ಪ್ರಾಮಾಣಿಕನೇ, ಎಲ್ಲ ಮಹಿಳೆಯರನ್ನು ತನ್ನ ತಾಯಿಯಂತೆ ನೋಡುವವನೇ, ಅನ್ಯರ ದುಃಖದಲ್ಲಿ ಭಾಗಿಯಾದವನೇ ನಿಜವಾದ ವೈಷ್ಣವ ಎಂಬ ಬೋಧನೆಯನ್ನೊಳಗೊಂಡಿದ್ದು ಅದು ಗಾಂಧೀಜಿಯವರಿಗೆ ಬಹು ಪ್ರಿಯವಾಗಿದ್ದಿತು. ಒಂದು ಅರ್ಥದಲ್ಲಿ ಗಾಂಧೀಜಿ ಭಕ್ತಿ ಪಂಥದ ಆಧುನಿಕ ಮುಂದುವರಿಕೆಯಾಗಿದ್ದರು. ಆಖೋನು (17 ಶ.) 'ಭಕ್ತಿ'ಯೆಂಬ ಹಕ್ಕಿಗೆ 'ಜ್ಞಾನ', 'ವೈರಾಗ್ಯ'ಗಳೇ ಎರಡು ರೆಕ್ಕೆಗಳು ಎಂದಿದ್ದಾನೆ. ಜ್ಞಾನಾಪೇಕ್ಷೆ, ತ್ಯಾಗ ಮನೋಭಾವ ಇವು ಇರುವವರೆಲ್ಲ 'ಭಕ್ತ'ರೇ.

ತಮಿಳುನಾಡಿನ ಆಳ್ವಾರರ ನಾಯನ್ಮಾರಗಳ ಭಕ್ತಿ ಗೀತೆಗಳು ತಮಿಳುನಾಡಿನಲ್ಲಿ ಜನಪ್ರಿಯ. ನಾಯನ್ಮಾರರ 'ತೇವಾರಮ್'ಗಳು ತಮಿಳುನಾಡಿನ ದೇವಾಲಯಗಳಲ್ಲಿ ಸಂಸ್ಕೃತ ಶ್ಲೋಕಗಳ ಸ್ಥಾನವನ್ನಾಕ್ರಮಿಸಿವೆ. ಆಗಲೇ ನೋಡಿದಂತೆ ಶ್ರೀ ವೈಷ್ಣವರ 'ತೆಂಗಲೈ' ಪಂಥದವರು ಆಳ್ವಾರರ ತಮಿಳು ರಚನೆಗಳನ್ನು 'ದ್ರಾವಿಡ ವೇದ'ವೆಂದೇ ಗೌರವಿಸಿದ್ದಾರೆ.

ಕರ್ನಾಟಕದಲ್ಲಿ ಮಾಧ್ವಪಂಥದ ಶ್ರೀ ಪಾದರಾಯ (15 ಶ.) ದೇವಾಲಯಗಳಲ್ಲಿ ಶಾಸ್ತ್ರೋಕ್ತ ಆರಾಧನೆಗೆ ಕನ್ನಡವನ್ನು ಮೊದಲು ಬಳಸಿದನೆಂದು ಪ್ರತೀತಿ ಇದೆ. ಅವನ ಬಳಿಕ ಕನ್ನಡದಲ್ಲಿ ಹರಿದಾಸ ಸಾಹಿತ್ಯದ ಸಮೃದ್ಧ ಬೆಳೆಯೇ ಆರಂಭವಾಯಿತು. ವ್ಯಾಸ, ಪುರಂದರ, ಕನಕದಾಸ, ಜಗನ್ನಾಥರಂತಹ ನೂರಾರು ಕೀರ್ತನಕಾರರು ಕಾಣಿಸಿದರು. ಪುರಂದರರನ್ನು 'ಕರ್ನಾಟಕ ಸಂಗೀತ ಪಿತಾಮಹ'ನೆಂದೇ ಗುರುತಿಸಲಾಗಿದೆ. ಕುರುಬನಾಗಿದ್ದ ಕನಕದಾಸರನ್ನು ಹಲವರು ಕೆಳಜಾತಿಯವನೆಂದು ಹಾಸ್ಯ ಮಾಡಿದರೂ ವ್ಯಾಸರಾಯರು ಅವನನ್ನು ಪ್ರೀತಿಯಿಂದ ಶಿಷ್ಯನಾಗಿ

ಸ್ವೀಕರಿಸಿದರು. ಅವನ "ರಾಮಧಾನ್ಯಚರಿತೆ" ಒಂದು ಅಪೂರ್ವ ಪುಟ್ಟ ಕನ್ನಡ ಕೃತಿ, ವಸ್ತುವಿನ ದೃಷ್ಟಿಯಿಂದ. ರಾಗಿ, ಬತ್ತಗಳ ಜಗಳದ ವಿಷಯವೇ ಅದರ ಕೇಂದ್ರ ವಸ್ತುವಾದರೂ ಅದು ಒಂದು ದೃಷ್ಟಿಯಿಂದ ವರ್ಗ ಸಂಘರ್ಷದ ಪ್ರತೀಕವೂ ಹೌದು. ರಾಗಿಯು ಕೆಳವರ್ಗದವರ, ಬಡವರ ಸಂಕೇತವಾದರೆ ಬತ್ತವು ಮೇಲ್ವರ್ಗದವರ, ಶ್ರೀಮಂತರ ಪ್ರತಿನಿಧಿ. "ನೀನು ಶೂದ್ರನ ಆಹಾರ; ನಾನು ಬ್ರಾಹ್ಮಣರಿಗೆ ದೇವತೆಗಳಿಗೆ ಪ್ರಿಯನಾದವನು" ಎಂದು ಬತ್ತ ಅಹಂಕರಿಸಿ ರಾಗಿಯನ್ನು ನಿಂದಿಸಿದರೂ ಶ್ರೀರಾಮನು ಅಂತಿಮವಾಗಿ ತೀರ್ಪು ಕೊಡುತ್ತ ಕ್ಷಾಮಕಾಲದಲ್ಲಿ ಎಲ್ಲರನ್ನೂ ಬದುಕಿಸುವ ಬಡವರ ಆಹಾರ ರಾಗಿಯೇ ಶ್ರೇಷ್ಠವೆಂಬ ನಿರ್ಣಯವನ್ನು ನೀಡುತ್ತಾನೆ. ಈ ಕೃತಿ ಒಂದು ರೀತಿ ಕನಕದಾಸನ ಆತ್ಮಚರಿತ್ರಾತ್ಮಕವೂ ಹೌದು. ಬ್ರಾಹ್ಮಣರಿಂದ ತಿರಸ್ಕೃತವಾಗಿದ್ದ ಶ್ರಮಜೀವಿ ಶೂದ್ರವರ್ಗದ ಮೇಲ್ಮೆಯನ್ನು ಅಲ್ಲಿ ಎತ್ತಿ ಹಿಡಿಯಲಾಗಿದೆ.

ಕರ್ನಾಟಕದ ಅನುಭಾವಿ ವೀರಶೈವ ವಚನಕಾರರ ಭಾವಗೀತಾತ್ಮಕ ರಚನೆಗಳಾದ ವಚನಗಳು ಕನ್ನಡ ಸಾಹಿತ್ಯದ ಚರಿತ್ರೆಯಲ್ಲಿ ಒಂದು ನೂತನ ಅಧ್ಯಾಯವನ್ನೇ ತೆರೆದುವು. ಬೇರೆ ಬೇರೆ ವರ್ಗಗಳಿಗೆ ಸೇರಿದ ನೂರಾರು ಸಾಮಾನ್ಯರು ಕನ್ನಡದಲ್ಲಿ ತಮ್ಮ ನೇರ ಅನುಭವಗಳನ್ನು ಹೇಳಿಕೊಂಡರು. ಅಷ್ಟೇ ಅಲ್ಲ, ಆಯಾ ವಚನಕಾರರು ತಮಗೆ ಪರಿಚಿತವಾದ ವೃತ್ತಿಯ ಪರಿಭಾಷೆಯನ್ನು ಬಳಸಿ ಆಧ್ಯಾತ್ಮಿಕ ಅನುಭವ ಚಿಂತನಗಳನ್ನೂ ವ್ಯಕ್ತಪಡಿಸಿದರು; ಜೇಡರ ದಾಸಿಮಯ್ಯನು ನೇಕಾರರ ಪರಿಭಾಷೆಯಲ್ಲಿ, ಮಾದರ ಧೂಳಯ್ಯನು ಚಪ್ಪಲಿ ಹೊಲೆಯುವ ಪರಿಭಾಷೆಯಲ್ಲಿ, ತುರುಗಾಹಿ ರಾಮಣ್ಣ ದನಕಾಯುವ ಪರಿಭಾಷೆಯಲ್ಲಿ, ಹೆಂಡದ ಮಾರಯ್ಯ ಹೆಂಡದ ಮಾರಾಟದ ಪರಿಭಾಷೆಯಲ್ಲಿ ಇತ್ಯಾದಿ. ವಚನ ಸಾಹಿತ್ಯಕ್ಕೆ ಮುನ್ನಿನ ಕನ್ನಡ ಸಾಹಿತ್ಯವು ಕಲಿತವರಿಗೆ ಮೀಸಲಿದ್ದು, ಸಂಸ್ಕೃತ ಭೂಯಿಷ್ಠವಾದ ಕನ್ನಡದಲ್ಲಿ ಮತ್ತು ಅನ್ಯಭಾಷೆಗಳಿಂದ ಎರವಲು ಪಡೆದ ಛಂದಸ್ಸಿನಲ್ಲಿ ರಚಿತವಾಗಿದ್ದರೆ ಶರಣರ ರಚನೆಗಳು ದೇಶೀಯ ಸರಳ ಕನ್ನಡದಲ್ಲಿ ಛಂದಸ್ಸಿನ ನಿಯಮಗಳಿಂದ ಮುಕ್ತವಾದ, ಗದ್ಯವೂ ಅಲ್ಲದ ಪದ್ಯವೂ ಅಲ್ಲದ ವಿಶಿಷ್ಟ ರೀತಿಯಲ್ಲಿ ರಚಿತವಾದುವು. ಇಂದಿಗೂ ಕನ್ನಡವು ಅಂತಾರಾಷ್ಟ್ರೀಯ ಮಟ್ಟದಲ್ಲಿ ತನ್ನ ವಿಶಿಷ್ಟ ಕೊಡುಗೆಯೆಂದು ಹೇಳಿಕೊಳ್ಳಬಹುದಾದ ಸಾಹಿತ್ಯವೆಂದರೆ ವಚನ ಸಾಹಿತ್ಯವೇ.

ತಮಗಿಂತ ಹಿಂದಿನ 'ಉಭಯಭಾಷಾಕವಿ'ಗಳಾದ (ಕನ್ನಡ ಮತ್ತು ಸಂಸ್ಕೃತ) ಜೈನ ಬ್ರಾಹ್ಮಣ ಕವಿಗಳಂತೆ ಎಲ್ಲ ವಚನಕಾರರೂ ಸಂಸ್ಕೃತದಲ್ಲಿ ಪರಿಣತರೇನೂ ಆಗಿರಲಿಲ್ಲ. ಬಹುಪಾಲು ವಚನಕಾರರಲ್ಲಿ ಅಂತಹ ಸಂಸ್ಕೃತ ಪಾಂಡಿತ್ಯವೇನೂ ಕಾಣಿಸದಾದರೂ ಒಂದು ವಿಶೇಷವೆಂದರೆ ಹುಟ್ಟಿನಿಂದ ದಲಿತನಾಗಿದ್ದು ಮರ ಕಡಿದು ವ್ಯಾಪಾರ ಮಾಡುತ್ತ ಕಳ್ಳತನವನ್ನೂ ಅಭ್ಯಾಸ ಮಾಡಿಕೊಂಡಿದ್ದ ಉರಿಲಿಂಗ

ಪೆದ್ದಿಯೆಂಬ ವಚನಕಾರನು ತನ್ನ ವಚನಗಳಲ್ಲಿ ಬಹು ಸಂಖ್ಯೆಯ ಸಂಸ್ಕೃತ ಕೃತಿಗಳಿಂದ ಶ್ಲೋಕಾಧಾರಗಳನ್ನು ಉಲ್ಲೇಖಿಸಿರುವುದು. ಅವನ ಇನ್ನೂರ ತೊಂಬತ್ತ ನಾಲ್ಕು ವಚನಗಳಲ್ಲಿ ವೇದ, ಉಪನಿಷತ್ತು, ಸ್ಮೃತಿಗಳಿಂದ ಕಾಶಿಕಾಂಡ, ವಾತುಲಾಗಮ, ತತ್ವದೀಪಿಕಾ ಮುಂತಾದ ಕೃತಿಗಳಿಂದ ಮುನ್ನೂರ ಏಳು ಸಂಸ್ಕೃತ ಉದ್ಧರಣೆಗಳನ್ನು ನೀಡಿದ್ದಾನೆ. ಅವನ ಗುರು ವಚನಕಾರ ಉರಿಲಿಂಗದೇವನಿಂದ ದೀಕ್ಷೆ ಪಡೆದ ಅವನು 'ಶಿಷ್ಯಾದಿಚ್ಛೇತ್ ಪರಾಜಯಂ' ಎಂಬಂತೆ ವಿದ್ವತ್ತಿನಲ್ಲಿ ತನ್ನ ಗುರು ಸಮಾನನೇ ಆದ. ಅವನಾಗಲಿ ಅವನ ಪತ್ನಿ ಕಾಳವ್ವೆಯಾಗಲಿ ಸಾಮಾಜಿಕ ಅನಿಷ್ಟಗಳನ್ನು ಕಟುವಾಗಿ ಖಂಡಿಸಿದ್ದಾರೆ. ಶರಣ ಚಳವಳಿಯು ಕೆಳವರ್ಗದವರಿಗೆ ತಂದುಕೊಟ್ಟ ಸ್ವಾಭಿಮಾನ ಆತ್ಮವಿಶ್ವಾಸಗಳ ಸಂಕೇತ ಅವರು.

ಉರಿಲಿಂಗದೇವನ ಬಳಿಕ ಅವನ ಶಿಷ್ಯ ಉರಿಲಿಂಗ ಪೆದ್ದಿಯು ತನ್ನ ಗುರುವಿನ ಮಠಕ್ಕೆ ಅಧಿಪತಿಯಾದುದು ಭಾರತೀಯ ಇತಿಹಾಸದಲ್ಲೇ ಅತ್ಯಪೂರ್ವ. ಅಸ್ಪೃಶ್ಯನೊಬ್ಬ ಮಠಾಧಿಪತಿಯಾಗಿ ನೇಮಕಗೊಂಡುದು, ಅವನ ಹೆಸರಿನ ಮಠಗಳು ಈಗಲೂ ಉತ್ತರ ಕರ್ನಾಟಕದಲ್ಲಿ ಕ್ರಿಯಾಶೀಲವಾಗಿರುವುದೂ ಅಷ್ಟೇ.

ಹಿಂದೂ ಸಮಾಜದಲ್ಲಿ ಭಕ್ತಿಚಳವಳಿಗಳು ರಾಚನಿಕ ಬದಲಾವಣೆಯನ್ನು ತಂದುವೇ, ಅವು ತುಳಿಯಲ್ಪಟ್ಟ ಜನರ ಆರ್ಥಿಕ ಬೆಳವಣಿಗೆಗೆ ಸಹಾಯಕವಾದುವೇ ಎಂಬಂತಹ ಪ್ರಶ್ನೆಗಳು ಯಾರೂ ಕೇಳಬೇಕಾದುವೇ. ಈ ಬಗ್ಗೆ ಎಲ್ಲ ಚಳವಳಿಗಳ ಬಗ್ಗೆ ಅಲ್ಲದಿದ್ದರೂ ಕರ್ನಾಟಕದ ಶರಣ ಚಳವಳಿ ಬಗ್ಗೆ ಧೈರ್ಯವಾಗಿ ಹೀಗೆ ಹೇಳಬಹುದು : 'ಹೌದು' ಎಂಬ ಖಂಡಿತ ಉತ್ತರ ಸಾಧ್ಯವಾಗದಿದ್ದರೂ, 'ಇಲ್ಲ' ಎಂಬ ಉತ್ತರವಂತೂ ಖಂಡಿತ ಸಾಧ್ಯವಿಲ್ಲ. ಚಳವಳಿಯು ಬ್ರಾಹ್ಮಣ ದಲಿತ ವರ್ಗಗಳ ಮಧ್ಯೆ ವಿವಾಹಕ್ಕೆ ಅವಕಾಶ ಮಾಡಿಕೊಟ್ಟದು ಅದು ಸಾಮಾಜಿಕ ಮೇಲ್ಮುಖ ಚಲನೆಯ ಪರವಾಗಿದ್ದಿತು ಮಾತ್ರವಲ್ಲ, ಅದು ವಾಸ್ತವವಾಗಿ ನಡೆಯಲು ನಿಮಿತ್ತವೂ ಆಯಿತು. ಆ ಚಳವಳಿಯು ಕೆಳವರ್ಗದವರ ಮೇಲ್ಮುಖ ಚಲನೆಗೆ ಪ್ರೋತ್ಸಾಹ ನೀಡಿ ಯಶಸ್ವಿಯೂ ಆಯಿತು. ಲಿಂಗ ಧರಿಸಿದ ವೀರಶೈವರೆಲ್ಲರೂ ಸಮಾನರೆಂಬ ಪರಿಕಲ್ಪನೆಯಿದ್ದು, ಅವರೆಲ್ಲ ಸಮಾನ ವೇದಿಕೆಯಲ್ಲಿ ಮುಕ್ತವಾಗಿ ಚರ್ಚೆ ಮಾಡಲು ಅವಕಾಶವಿದ್ದುದರಿಂದ, ಅಂದಿನ ಜನಸಾಮಾನ್ಯರಲ್ಲಿ ಒಂದು ಒಳ ಅರಿವು ಮೂಡಿಸುವುದರಲ್ಲಿ ಯಶಸ್ವಿಯಾಯಿತು. ಆದರೆ ಮುಂದೆ ಹನ್ನೆರಡನೆಯ ಶತಮಾನದ ಸಾಮಾಜಿಕ ಎಚ್ಚರ ಮರೆಯಾಗಿ ಮತ್ತೆ ವೀರಶೈವ ಜನಾಂಗದಲ್ಲಿ ಜಾತಿಗಳ ಅನುಶ್ರೇಣಿಯು ಸ್ಥಿರವಾದುದು ಒಂದು ನಿರೀಕ್ಷಿತ ದುರಂತ. ಪ್ರಭುತ್ವವನ್ನು ಎದುರಿಸಿ ಬ್ರಾಹ್ಮಣ, ದಲಿತರ ವಿವಾಹಕ್ಕೆ ಮುಂದಾದ ಹನ್ನೆರಡನೆಯ ಶತಮಾನದ ವೀರಶೈವ ಚಳವಳಿ ತನ್ನ ಸಾಮಾಜಿಕರಲ್ಲಿ ಅನನ್ಯವಾದ ಸಾಮರಸ್ಯ, ಆತ್ಮವಿಶ್ವಾಸವನ್ನು ಮೂಡಿಸಿತೆಂಬಲ್ಲಿ ಅನುಮಾನವಿಲ್ಲ. ಆ ಚಳವಳಿ ಮುಂದೆಯೂ ಯಶಸ್ವಿಯಾಗಿ

ಉಳಿಯಿತು ಎಂದು ಹೇಳಲಿಕ್ಕಾಗದಿದ್ದರೂ ಅದರ ಸತ್ಪರಿಣಾಮಗಳು ತಕ್ಕಮಟ್ಟಿಗಾದರೂ ಇತಿಹಾಸದುದ್ದಕ್ಕೂ ಕಾಣಿಸಿಕೊಡಿವೆ.

ಆ ಶರಣ ಚಳವಳಿಯ ದೃಷ್ಟಿಕೋನವು ಸರ್ವ ಸಮತ್ವದ ದೃಷ್ಟಿಯವಾಗಿದ್ದು, ಎಲ್ಲ ವರ್ಗಗಳಲ್ಲಿ ಆತ್ಮವಿಶ್ವಾಸ ಮೂಡಿಸುವಂತಹುದಾಗಿತ್ತು. ಬೀದಿ ಗುಡಿಸುವ ತನ್ನ 'ಕಾಯಕ'ವನ್ನು ಕರ್ತವ್ಯವಾಗಿ ನಿರ್ವಹಿಸುತ್ತಿದ್ದ ನಾಗಿದೇವನು ರಾಜನಿಗೂ ಮೇಲ್ವರ್ಗದವರಿಗೂ ಅಸಮಾಧಾನವಾದರೂ ಲೆಕ್ಕಿಸದೆ ಕಲ್ಯಾಣ ನಗರಿಯಲ್ಲಿ ಕೆಲಸ ಮಾಡುವಾಗ 'ಸಂಬೋಳಿ' (=ದೂರ ಹೋಗಿ) ಎಂದು ಕೂಗುವುದನ್ನು ಕೈಬಿಟ್ಟ; ಹಾಗೆ ಕೂಗುವುದು ಅವನಿಗೆ ಅಪಮಾನವೆನ್ನಿಸಿತ್ತು, ಕಸ ಗುಡಿಸುವುದು ಅಲ್ಲ. ಮಡಿವಳ ಮಾಚಿದೇವನು ತಾನು ಶಿವಭಕ್ತರ ಬಟ್ಟೆಗಳನ್ನು ಬಿಟ್ಟು ಅನ್ಯರ ಬಟ್ಟೆ ತೊಳೆಯುವುದಿಲ್ಲವೆಂದು ರಾಜಧಾನಿಯ ಬೀದಿ ಬೀದಿಗಳಲ್ಲಿ ಸಾರಿದ.

ಕೆಳವರ್ಗದವರ ಆರ್ಥಿಕ ಸುಧಾರಣೆ ಆಯಿತೇ ಎಂಬ ಪ್ರಶ್ನೆಗೆ ಖಚಿತ ಉತ್ತರ ಕೊಡುವುದು ಕಷ್ಟ. ವಚನಕಾರರು ಬಡತನದ ಹಸಿವಿನ ಬಗ್ಗೆ ಮಾತನಾಡಿದ್ದಾರೆ; ಬಡವರ ಜೊತೆ ಸಮೀಕರಿಸಿಕೊಂಡಿದ್ದಾರೆ. ಅವರ ಬರಹಗಳಲ್ಲೇ ಬಡವರ ಮತ್ತು ಬಡತನದ ಉಲ್ಲೇಖಗಳು ಕನ್ನಡ ವಾಙ್ಮಯದಲ್ಲಿ ಮೊತ್ತ ಮೊದಲು ದಾಖಲಾಗಿರುವುದು ಅರ್ಥಪೂರ್ಣ. ಗುರುನಾನಕನಂತೆ ಅವರೂ ವ್ಯಕ್ತಿ ತನ್ನ ಸಂಪತ್ತನ್ನು ಇತರರ ಜೊತೆ ಹಂಚಿಕೊಳ್ಳಬೇಕೆಂದು ಪ್ರತಿಪಾದಿಸಿದರು, ಆ ರೀತಿ ನಡೆದುಕೊಂಡರು. ಚಳವಳಿಯು ಮುಖ್ಯವಾಗಿ ಸಮಾಜೋಧಾರ್ಮಿಕ ಸ್ವರೂಪದ್ದೆಂಬುದು ಈಗಾಗಲೇ ಸ್ಪಷ್ಟವಾಗಿದೆ. ಅವರಿಗೆ ಜಾತಿ ಅಧಿಕಾರಗಳ ಮೇಲ್ವರ್ಗದ ಜನರು ಸಮಾಜದ ಎಲ್ಲ ಬಗೆಯ ಸವಲತ್ತುಗಳನ್ನು ಪಡೆದಿದ್ದಾರೆ ಎಂಬ ಅರಿವಿದ್ದರೂ ಪ್ರಭುತ್ವದ ಬೆಂಬಲವಿಲ್ಲದೆ ಆ ಚಳವಳಿ ಸಮಾಜದಲ್ಲಿ ಆರ್ಥಿಕ ಬದಲಾವಣೆಯನ್ನು ತರುವ ಸ್ಥಿತಿಯಲ್ಲಿರಲಿಲ್ಲ; ತರುವಷ್ಟು ಶಕ್ತವೂ ಆಗಿರಲಿಲ್ಲ; ಆರ್ಥಿಕ ಬದಲಾವಣೆಯಂತಹ ಪರಿಕಲ್ಪನೆಯೇ ಆ ಕಾಲಕ್ಕೆ ಕರ್ನಾಟಕದಲ್ಲಿ ಮಾತ್ರವಲ್ಲ, ಭಾರತದಲ್ಲೂ ಇರಲಿಲ್ಲ, ವಿಶ್ವದಲ್ಲೂ ಇರಲಿಲ್ಲ. ಶರಣ ಚಳವಳಿಯು ಬಡವರಿಗೆ ಸ್ವಾಭಿಮಾನವನ್ನು ಕಲಿಸಿತು; ಕೆಲವೊಮ್ಮೆ ಬಡತನವನ್ನು ವೈಭವೀಕರಿಸಿತು. ಬೇರೆ ಬೇರೆ ವೃತ್ತಿಯವರು ತಮ್ಮ ಉತ್ಪನ್ನಗಳಿಗೆ ಹೆಚ್ಚಿನ ಬೆಲೆ ನಿಗದಿ ಮಾಡಲು ಒತ್ತಾಯಿಸಲಾರದ ಕಾಲ ಅದು. 'ಕಾಯಕ' ತತ್ವದ ಪ್ರಕಾರ, ಎಲ್ಲ ವೃತ್ತಿಗಳೂ ಸಮಾನ ಗೌರವಕ್ಕೆ ಪಾತ್ರ; ಹಾಗೆ ಸಮಾನ ಗೌರವದಿಂದ ಕಾಣುವುದು ವೀರಶೈವ ಸಾಮಾಜಿಕರ ಕೈಯಲ್ಲಿತ್ತು. ಇಷ್ಟು ಬಹುಶಃ ನಿಜ. ತಮ್ಮ ತಮ್ಮ ವೃತ್ತಿಗಳನ್ನು ಮರುಕಳಿಸಿದ ಶ್ರದ್ಧೆ, ನವೋತ್ಸಾಹಗಳಿಂದ ಕೈಗೊಂಡ ಶ್ರಮಜೀವಿಗಳ ಆರ್ಥಿಕ ಪರಿಸ್ಥಿತಿ ಅವರ ಉತ್ಪಾದನೆ ಹೆಚ್ಚಿದ್ದರಿಂದ ಸುಧಾರಿಸಿರಬೇಕು ಮತ್ತು ಅವರು ಶಿವಭಕ್ತರಾಗಿ ಮಾಂಸಾಹಾರ, ಮದ್ಯಪಾನಗಳನ್ನು ಕೈಬಿಟ್ಟಿದ್ದು ಕೂಡ ಅವರ ಆರ್ಥಿಕ ಸುಧಾರಣೆಗೆ ಖಂಡಿತ ಸಹಾಯ ಮಾಡಿರುತ್ತದೆ.

ಬಸವಣ್ಣನು ಬಡವರ ಬಡತನವನ್ನು ಕಂಡು ಮರುಗಿ ಅವರಿಗೆ ನೀಡಲು ಹೋದ ಧನಸಹಾಯವನ್ನು ಆ ಧನ ತಮ್ಮ ದುಡಿಮೆಯ ಫಲವಲ್ಲವೆಂದು ಭಕ್ತರು ನಿರಾಕರಿಸಿದ ಉದಾಹರಣೆಗಳೂ ಉಂಟು.

ಈ ಸಂದರ್ಭದಲ್ಲಿ ಅಂದಿನ ಕತೆಯೊಂದು ಉಲ್ಲೇಖಾರ್ಹ. 'ಸಾಕಾರ ನಿಷ್ಠೆ', 'ಭೂತಂಗಳೊಳನುಕಂಪೆ' (=ಸರ್ವಜೀವಿಗಳಲ್ಲಿ ದಯಾಪರತೆ) ಈ ಗುಣಗಳ ಪ್ರತೀಕದಂತಿದ್ದ ಸಿದ್ಧರಾಮನು (ಬಸವನ ಸಮಕಾಲೀನ) ಒಬ್ಬ ದೊಡ್ಡ ಸಮಾಜ ಕಾರ್ಯಕರ್ತ. ಜನರು ತಾವೆ ಸಹಾಯ ಮಾಡಿಕೊಳ್ಳುವುದಕ್ಕೆ ಸಹಾಯ ಮಾಡಿದನು. ತಾನೇ ತನ್ನ ಶಿಷ್ಯರ ಜೊತೆ ಹಲವು ಕೆರೆಗಳನ್ನು ಕಟ್ಟಿಸಿದ್ದಲ್ಲದೆ ಬಡಜನರಿಗೆ ಅನ್ನಸಂತರ್ಪಣೆ, ಸಾಮೂಹಿಕ ವಿವಾಹಗಳನ್ನು ವ್ಯವಸ್ಥೆ ಮಾಡುತ್ತಾನೆ. ಅವನು ಸಾಲ ತೀರಿಸಿ ಬಿಡುಗಡೆ ಮಾಡಿದ ವ್ಯಕ್ತಿಗಳಲ್ಲಿ ಒಬ್ಬನಾದ ಬಿಲ್ಲೇಶ ಬೊಮ್ಮಯ್ಯನು ಸಾಲ ಮಾಡುವಂತಹ ಇನ್ನೂ ಹಲವು ಪಾಪಗಳನ್ನು ಮಾಡಿದ್ದರಿಂದ ಸತ್ತಮೇಲೆ ನರಕ ವಾಸಿಯಾಗುತ್ತಾನೆ. ಒಮ್ಮೆ ಕೈಲಾಸದಿಂದ ಸಿದ್ಧರಾಮನು ಹಿಂದಿರುಗುತ್ತಿರುವಾಗ ನರಕದಿಂದ ಬೊಮ್ಮಯ್ಯನ ಆರ್ತಕರೆ ಕೇಳಿ, ನರಕದ ಬಿಲದೊಳಕ್ಕೆ ಅವನು ತನ್ನ ದಂಡವನ್ನು ತೂರಿಸಿದಾಗ ಅದನ್ನು ಹಿಡಿದುಕೊಂಡ ಬಿಲ್ಲಯ್ಯನ ಕಾಲನ್ನು ಒಬ್ಬನು, ಅವನ ಕಾಲನ್ನು ಇನ್ನೊಬ್ಬ ಹೀಗೆ ಸಾವಿರಾರು ಜನ ಹಿಡಿದುಕೊಳ್ಳುತ್ತಾರೆ. ಆ ದಂಡವನ್ನು ಮೇಲಕ್ಕೆ ಎಳೆದು ಸಿದ್ಧರಾಮ ಏಕಕಾಲಕ್ಕೆ ಸಾವಿರಾರು ನಾರಕಿಗಳನ್ನು ಮುಕ್ತಗೊಳಿಸುತ್ತಾನೆ. ಈ ಸಾಂಕೇತಿಕ ಕತೆಯು ಧಾರ್ಮಿಕ, ಲೌಕಿಕಗಳ ಹಿತವಾದ ಸಮನ್ವಯವನ್ನು ಹೇಳುತ್ತದೆ; ಸಾಕ್ಷಾತ್ ಶಿವನ ದರ್ಶನವಾಗಿದ್ದರೂ ಸಿದ್ಧರಾಮನ ಕಿವಿ ಬಡವರ ಆರ್ತನಾದಕ್ಕೆ ಕಿವುಡಾಗಿರಲಿಲ್ಲ; ಆ ಬಗ್ಗೆ ಅವನು ಕ್ರಿಯಾತ್ಮಕವಾಗಿ ಸ್ಪಂದಿಸಿದ್ದನು. ಅವನು ನಿರಂತರವಾಗಿ ಬದುಕನ್ನು ಮೇಲೆತ್ತಿದ.*

ಒಂದು ನಿರ್ದಿಷ್ಟ ಚೌಕಟ್ಟಿನಲ್ಲಿಟ್ಟು ನೋಡಿದಾಗ, ಎಲ್ಲ ಭಕ್ತಿ ಚಳವಳಿಗಳೂ ಪ್ರತಿಭಟನಾತ್ಮಕಗಳೇ. ಭಕ್ತಿ ಸಾಹಿತ್ಯವನ್ನು ಆಯಾ ಪ್ರಮಾಣದಲ್ಲಿ ಪ್ರತಿಭಟನಾತ್ಮಕ ಸಾಹಿತ್ಯವೆಂದೇ ಹೆಸರಿಸಬಹುದು. ಭಕ್ತಿ ಚಳವಳಿಗಳು ಪ್ರಭುತ್ವದ, ಸಾಂಪ್ರದಾಯಕ ಧಾರ್ಮಿಕ ಮುಖಂಡರ ವಿರುದ್ಧ ನಿಂತು ಧರ್ಮವನ್ನು ಪ್ರಜಾಪ್ರಭುತ್ವೀಕರಿಸಿದವು; ಶಾಸ್ತ್ರಾಚರಣ ಮುಖಿ ಧರ್ಮವನ್ನು ಮೌಲ್ಯ ಮುಖಿಯನ್ನಾಗಿ ಪರಿವರ್ತಿಸಿದವು.

---

* ಮೇಲಿನ ಕತೆ ಸಾಂಕೇತಿಕ. ಒಬ್ಬ ಪಾಪಿಯನ್ನು ಸಿದ್ಧರಾಮ ಉದ್ಧಾರ ಮಾಡಿದರೆ, ಹಾಗೆ ಉದ್ಧಾರಗೊಂಡವನು ಇನ್ನೊಬ್ಬ ಪಾಪಿ ಉದ್ಧಾರಗೊಳ್ಳಲು ಸಹಾಯ ಮಾಡುತ್ತಾನೆ. ಕೆಟ್ಟತನವು ಸಾಂಕ್ರಾಮಿಕ ರೋಗವಾಗುವಂತೆ ಒಳ್ಳೆಯತನವೂ 'ಸಾಂಕ್ರಾಮಿಕ ಆರೋಗ್ಯ' ವಾಗಬಲ್ಲದು. ಸಿದ್ಧರಾಮನ ನಿಜವಾದ 'ಸಮಾಜಕಾರ್ಯ' ಒಬ್ಬರಿಂದ ಒಬ್ಬರಿಗೆ ವ್ಯಾಪಕ ವಾಗಿ ಹಬ್ಬಿತು ಎಂಬುದನ್ನು ಆ ಕತೆ ಧ್ವನಿಸುತ್ತದೆ. ('ಸಾಂಕ್ರಾಮಿಕ ಆರೋಗ್ಯ' ಕಷ್ಟ ಮತ್ತು ತಡ.)

# ಗ್ರಂಥಾವಳಿ


Ramanath Jha : Vidyapathi

Mendis G.C. : The Early History of Ceylon

Kari Abdul Wahad : Creative Bengal

Saiyid Athar Abbas Rizvi : A History of Sufism In India, II

(Ed.) Jha D.N. : The Feudal Order

Ranade R.D. : Pathway to God in Marathi Literarure

Ranade R.D. : Pathway to God in Kannada Literature

(Ed.) Marulasiddaiah H.M. : Dimensions of Bhakti Movement in India

(Ed.) Sen S.P. : Social Contents of Indian Religious reform movements

Berton Stein : Social Mobility and Medieval South Indian Sects

Nandimath S.C. : A Handbook of Virashaivism

Suryanath Kamat : 'Popular Religious Movements in Karnataka – Past and Present' (Quarterly Journal of the Mythic Society. July-Sept. 1999)

Chidananda Murthy M. : Basavanna

ಚಿದಾನಂದಮೂರ್ತಿ ಎಂ. : ವೀರಶೈವಧರ್ಮ – ಭಾರತೀಯ ಸಂಸ್ಕೃತಿ (ಹಿಂದೂ–ಲಿಂಗಾಯತ)




# 17

# “ವಿಶ್ವಸುತ” – ಬಸವಣ್ಣ

ಬಸವಣ್ಣನನ್ನು “ಯುಗದ ಉತ್ಸಾಹ”ವೆಂದೇ ಅವನ ಸಮಕಾಲೀನ ಅಲ್ಲಮ ಗುರುತಿಸಿದ್ದಾನೆ. ಬಹುಶಃ 16–17ನೇ ಶ.ದ ಅಜ್ಞಾತ ಕವಿಯೊಬ್ಬ ಅವನನ್ನು “ವಿಶ್ವಸುತ” ಎಂದು ಕರೆದಿದ್ದಾನೆ. ಅದನ್ನು ಗಮನಿಸುವ ಮುನ್ನ ಕೆಳದಿ ಅರಸರ ಕಾಲದ ಚನ್ನವೀರ ಮಾಹೇಶ್ವರನು (ಕ್ರಿ.ಶ. 1650) ಋಗ್ವೇದದ ಸುಪ್ರಸಿದ್ಧ “ಪುರುಷ ಸೂಕ್ತ”ಕ್ಕೆ ಬರೆದಿರುವ “ನಿರಂಜನ ಜಂಗಮ ಭಾಷ್ಯ” ಎಂಬ ಹೆಸರಿನ ಕನ್ನಡ ಟೀಕನ್ನು ಗಮನಿಸುವುದು ಅಗತ್ಯ. “ಪುರುಷ ಸೂಕ್ತ”ದ ಪಾಠ ಇದು –

ಸಹಸ್ರ ಶೀರ್ಷಾ ಪುರುಷಃ
ಸಹಸ್ರಾಕ್ಷಃ ಸಹಸ್ರ ಪಾತ್
ಸ ಭೂಮಿಂ ವಿಶ್ವತೋ ವೃತ್ವಾ
ಅತ್ಯತಿಷ್ಠದ್ದಶಾಂಗುಲಂ ॥

ಇದಕ್ಕೆ ಕನ್ನಡ ಟೀಕು ಹೀಗಿದೆ – “ಪುರುಷಃ=ಇರುತ್ತಿದ್ದ ನಿರಂಜನ ಜಂಗಮಂ ಪುರುಷನೆನಿಸಿಕೊಂಬವನೆ ಶೈವರ್ಗೆ ಶಿವಂ, ಶಾಕ್ತೇಯರ್ಗೆ ಶಕ್ತಿ, ಕಪಾಲಿಕರ್ಗೆ ಕಪಾಲಿ, ಗಾಣಪತ್ಯರ್ಗೆ ಗಣಪತಿ, ವೈಷ್ಣವರ್ಗೆ ವಿಷ್ಣು, ಸೌರರ್ಗೆ ಸೂರ್ಯ, ಸಾಂಖ್ಯರ್ಗೆ ಪಂಚವಿಂಶತಿ ತತ್ವ ಸಂಖ್ಯೆ, ಲಿಂಗಾಂಗಿ ಮಹಾವ್ರತಿ ಮಾಯಾವಾದಿ ಕಾಳಮುಖಿ ಭಾಗವತ ಭೇದವಾಗಿ ಸತ್ಯಯೋಗಿ ಕಲಾಂಗಿ ಸಿದ್ಧಯೋಗಿ ಇವು ದೊದಲಾದವುಗಳ ವೈದಿಕಾವೈದಿಕಾಂತರ ದರ್ಶನಸ್ಥರ್ಗೆ ತತ್ರದ್ರೂಪನಾಗಿರ್ಪಂ.” ‘ಪುರುಷ ಸೂಕ್ತ’ಕ್ಕೆ ಇದಕ್ಕಿಂತ ಉದಾತ್ತವಾದ ವ್ಯಾಖ್ಯಾನವನ್ನು ಬರೆಯಲು ಸಾಧ್ಯವೇ ಇಲ್ಲ. ಶಿವ, ವಿಷ್ಣು, ಶಕ್ತಿ, ಸೂರ್ಯ ದೊದಲಾದ ‘ವೈದಿಕ’ ದೇವತೆಗಳಂತೆ, ಬುದ್ಧ, ತೀರ್ಥಂಕರ, ಏಸು, ಅಲ್ಲಾ ಮುಂತಾದ ‘ಅವೈದಿಕ’ ದೇವತೆಗಳೂ ಒಂದೇ ದೈವದ ಭಿನ್ನ ಹೆಸರುಗಳು. “ಏಕಂ ಸತ್ ವಿಪ್ರಾ ಬಹುಧಾ ವದಂತಿ” ಎಂಬ ವೇದಘೋಷಕ್ಕೆ ಅನುಗುಣವಾಗಿದೆ ಈ ವ್ಯಾಖ್ಯಾನ.

ಸುಮಾರು ಅದೇ ಕಾಲಕ್ಕೆ ಸೇರಿರಬಹುದಾದ ಅಜ್ಞಾತ ಕವಿಯೊಬ್ಬನ

"ಬಸವೇಶ್ವರ ಸ್ತೋತ್ರ" ಎಂಬ ಕಿರುಕೃತಿಯು ಬಸವ ಸ್ತೋತ್ರವನ್ನು ಮಾಡಿರುವ ಬಗೆ ಹೀಗಿದೆ –

ವಿಶ್ವಧರ್ಮವನೊಂದು ಮಾಡಿಪ ವೀರಶೈವರ ಚಂದಿರಾ
ವಿಶ್ವಸುತ ವರ ವೇದಬೋಧಕ ವಿಬುಧಪ್ರಿಯ ಬಸವೇಶ್ವರಾ ॥

ಅಜ್ಞಾತ ಕವಿಯು 'ಬಸವೇಶ್ವರ ಸ್ತೋತ್ರ'ದಲ್ಲಿ ಬಸವನನ್ನು ವಿಶ್ವದ ಎಲ್ಲ ಧರ್ಮಗಳನ್ನೂ ಒಂದುಗೂಡಿಸುವವನನು, ಎಲ್ಲ ಧರ್ಮಗಳನ್ನೂ ಮಾನ್ಯಮಾಡುವವನು ಎಂದೇ ಪ್ರಶಂಸಿಸಿದ್ದಾನೆ. ಎಲ್ಲ ಧರ್ಮಗಳೂ ಗೌರವಿಸುವ ಭಿನ್ನ ಭಿನ್ನ ದೈವ ಮತ್ತು ತತ್ವಗಳನ್ನು ಬಸವಣ್ಣ ಸಮಾನವಾಗಿ ಗೌರವಿಸುತ್ತಾನೆ. ಅವನು ಅಂತಹ 'ವೀರಶೈವರ ಚಂದಿರ' – ವೀರಶೈವವು ಉದಾತ್ತ ಧರ್ಮ; ಆ ಧರ್ಮದ ಬಾನನ್ನು ಬೆಳಗಿಸುವವನು ಬಸವಣ್ಣ. ಜೊತೆಗೆ ಅವನು 'ವಿಶ್ವಸುತ' ಎಂಬ ಮಾತಂತೂ ಅತ್ಯಂತ ಉದಾತ್ತ. ಅವನು ಮಂಡಗೆಯ ಮಾದಿರಾಜ, ಮಾದಲಾಂಬಿಕೆಯರ ಮಗ ಎಂಬ ಐತಿಹಾಸಿಕ ಸತ್ಯ ಎಲ್ಲರಿಗೂ ಗೊತ್ತಿದೆ. ಆದರೂ ಅವನು ಕೇವಲ ಅವರ ಮಗ ಅಲ್ಲ, ಅವನು 'ವಿಶ್ವಸುತ', ಅವನು ಇಡೀ ಲೋಕ ಹೆತ್ತ ಮಗ – ಅರ್ಥಾತ್ ಇಡೀ ಲೋಕವು ಅವನನ್ನು ಮಗನಂತೆ ವಾತ್ಸಲ್ಯದಿಂದ ಕಂಡರೆ ಬಸವಣ್ಣನೂ ಇಡೀ ಲೋಕವನ್ನು ಅಷ್ಟೇ ಭಕ್ತಿ ಶ್ರದ್ಧೆಗಳಿಂದ ಕಾಣುತ್ತಾನೆ – ಅವನೊಬ್ಬ ಲೋಕ ಸೇವಕ, ಸಮಾಜ ಭಕ್ತ. ಆ ಲೋಕ ಎನ್ನುವುದು ಒಂದು ವರ್ಗದ್ದಲ್ಲ – ಎಲ್ಲ ವರ್ಗ ಜಾತಿಗಳ ಜನರೂ ಸೇರಿದ್ದು. ಅವನು ಬರೀ ಬಾಗೆವಾಡಿಯ ಮಾದರಸ ಮಾದಲಾಂಬಿಕೆಯರ ಸುತ ಅಲ್ಲ; ಇಡೀ ಲೋಕದ ಎಲ್ಲ ಜನರ ಸುತ. 'ಲೋಕಸುತ' ಎಂಬುದಕ್ಕೆ ಹೆಚ್ಚಿನ ವ್ಯಾಖ್ಯಾನ ಅನಗತ್ಯ – ಅದರ ಅರ್ಥ ಸ್ವಯಂಬೋಧ. ಅಂತಹ ಬಸವ ಒಂದರ್ಥದಲ್ಲಿ ವೇದಬೋಧಕ – ಅವನು ಲೋಕವು ಸಾಕಿದ ಶಿಶುವಾದರೂ ತನ್ನ ನಡೆ ನುಡಿಗಳಿಂದ ಬೋಧಿಸಿ ಲೋಕವನ್ನು ತಿದ್ದಿದವನು. ಅವನು ಲೋಕದ ಸುತ, ಲೋಕದ ಗುರು. ಆಧುನಿಕ ಪೂರ್ವ ಕಾಲದ ಜನರು ಒಟ್ಟಾರೆ ಬಸವನನ್ನು ಅರ್ಥೈಸಿಕೊಂಡಿದ್ದ ರೀತಿ ಆಧುನಿಕ ಕಾಲದವರಿಗೂ ಅನುಕರಣೀಯ.*

ಗುಬ್ಬಿ ಮಲ್ಲಣಾರ್ಯನ "ವೀರಶೈವಾಮೃತ ಪುರಾಣ"ದಲ್ಲಿನ (ಕ್ರಿ.ಶ. 1530) ಈ ಪದ್ಯ ಗಮನಾರ್ಹ (7:2:8).

ಶ್ರೀ ಭಕ್ತಿಯುದ್ಧರಿಪ ಕಾರಣಂ ಬಸವೇಶ
ನೇ ಭುವನದೊಳ್ ಪುಟ್ಟಿದನ ನಾಮವಾದವನ

---

* ಪುರುಷ ಸೂಕ್ತದ ಟೀಕೆಗೆ ಆಕರ – ಸಾ.ಶಿ. ಮರುಳಯ್ಯ : ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ; ಸ್ತೋತ್ರದ ಆಕರ – ಸಂ. : ವೀರಣ್ಣ ರಾಜೂರ : ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಸೂಚಿ. IX.

ಶೋಭನ ಮುಖಾಬ್ಜದೊಳಗಿರ್ಪುದಂತಲ್ಲಿ ನಾಂ ನೆಲಸಿರ್ಪೆನೆಂದು ನುಡಿದಂ ।
ಆ ಭವಾನೀಶನಾ ಶ್ರುತಿ ಪುರಾಣ ಸ್ಮೃತಿಯ
ವೈಭವ ಪ್ರಖ್ಯಾತ ಬಸವೇಶ್ವರಾದಿಯ ಮ
ಹಾಭವ್ಯ ಗಣ ನಿಕರದಾಚರಣೆ ವೀರಶೈವಂ ಕೇಳು ಮಗನೇ ಯೆಂದ ॥

ಸಾಕ್ಷಿ ॥ ಯಸ್ಯ ವಕ್ತ್ರಂ ಸ್ಥಿತಂ ದೇವಿ ಬಸವೇತ್ಯಕ್ಷರ ತ್ರಯಂ
ವಸಾಮಿ ಸತತಂ ತತ್ರ ಸತ್ಯಂ ಸತ್ಯಂ ನ ಚಾನ್ಯಥಾ ॥

ಕೈಲಾಸದ ಶಿವನು ಶಿಲಾದನಿಗೆ ಬಸವಣ್ಣನ ವಿಷಯ ಹೇಳುತ್ತ, ಬಸವನ ನಾಮವು ಯಾರ ಬಾಯಿಂದ ಬರುತ್ತದೆಯೋ ಅಲ್ಲಿ ನಾನು ಇರುತ್ತೇನೆ. ಬಸವೇಶ್ವರನೇ ಮೊದಲಾದ ಗಣಗಳ ಆಚರಣೆಯೇ ವೀರಶೈವ ಎಂದು ಬೋಧಿಸುತ್ತಾನೆ. ಶಿವಭಕ್ತರಲ್ಲಿ ಮುಖ್ಯನಾದವನು ಬಸವಣ್ಣ – ಅವನು ಬದುಕಿದ ರೀತಿ, ಅವನ ಆಚರಣೆಯೇ ವೀರಶೈವ ಎಂಬ ಮಾತು ಬಹು ಧ್ವನಿಪೂರ್ಣ, ಬಸವ, ವೀರಶೈವ (ಲಿಂಗಾಯತ) ಇವು ಒಂದು ರೀತಿಯಲ್ಲಿ ಸಮಾನಾರ್ಥಕಗಳು.

ಗುಬ್ಬಿ ಮಲ್ಲಣಾರ್ಯ ಎಂಬ ವಚನ ಸಂಕಲನಕಾರ ಹೇಳಿರುವ ಮಾತುಗಳು ಸ್ಥೂಲವಾಗಿ ಹೀಗಿವೆ – "ಶರಣರು ನಡೆದು ನುಡಿದ ವಚನಗಳು" – ಶರಣರು ನಡೆದರು, ಅದರಂತೆ ನುಡಿದರು. ಅವರ ನುಡಿಗೆ ಬೆಲೆ ಬಂದದ್ದು ಅವರ ನಡೆಯಿಂದ. ಬಸವನ 'ಆಚರಣೆ'ಯೇ ವೀರಶೈವ ಎಂಬ ಮಾತನ್ನು ಈ ಹಿನ್ನೆಲೆಯಲ್ಲಿ ನೋಡಬೇಕು.



# 18

# ನನ್ನ ಅನುಭವಗಳು

ನಾವು ಚಿಕ್ಕವರಿದ್ದಾಗ ಎತ್ತಿನ ಬಂಡಿಯಲ್ಲಿ ಕುಳಿತು ಕೊರಕಲು ದಾರಿಯಲ್ಲಿ ಹೊಲಗಳ ಮಧ್ಯೆ ಇನ್ನೊಂದು ಊರಿಗೆ ಹೋಗುತ್ತಿರುವಾಗ ಒಮ್ಮೊಮ್ಮೆ ಎತ್ತಿನ ಬಂಡಿ ಬಾಗಿ ಬೀಳುವಂತಾಗುತ್ತಿತ್ತು. ಅಂತಹ ಸಂದರ್ಭದಲ್ಲಿ ಬಂಡಿಯಲ್ಲಿದ್ದ ಹಳ್ಳಿಯ ಜನ ಬೆದರಿ ಬೆಚ್ಚಿ "ಬಸವಾ! ಬಸವಾ!" ಎಂದು ಗಟ್ಟಿಯಾಗಿ ಉದ್ಗರಿಸುತ್ತಿದ್ದರು (ಅದು ಅವರ ಪ್ರಾರ್ಥನೆ). 'ಬಸವ' ಎಂದರೆ ಗಾಡಿ ಎಳೆಯುವ ಎತ್ತೋ ಅಥವಾ ಶರಣ ಬಸವಣ್ಣನೋ ಅವರ ಗಮನದಲ್ಲಿದ್ದುದು – ನನಗೆ ತಿಳಿಯದು. ಕಷ್ಟ ಬಂದಾಗ ಜನ ಭಗವಂತನನ್ನು ಪ್ರಾರ್ಥಿಸುತ್ತಿದ್ದ ರೀತಿ "ಬಸವಾ! ಬಸವಾ!" (ಕೆಲವೊಮ್ಮೆ "ಭಸವಾ! ಭಸವಾ!") – ಮಧ್ಯ ಕರ್ನಾಟಕದಲ್ಲಿ ಮಾತ್ರವಲ್ಲ ಉತ್ತರ ಕರ್ನಾಟಕದಲ್ಲೂ ಈ ಪದ್ಧತಿ ಇದ್ದುದನ್ನು ಖಚಿತಪಡಿಸಿಕೊಂಡಿದ್ದೇನೆ.

1957–58ರಲ್ಲಿ ನಾನು ಪಿಎಚ್.ಡಿ. ಸಂಶೋಧನ ವಿದ್ಯಾರ್ಥಿಯಾಗಿದ್ದಾಗ ಪೂಜ್ಯ (ದಿ) ತೀ.ನಂ.ಶ್ರೀ. ಸೂಚನೆ ಮೇರೆಗೆ ಉತ್ತರ ಕರ್ನಾಟಕದ ಪ್ರಸಿದ್ಧ ಸಾಂಸ್ಕೃತಿಕ ಕ್ಷೇತ್ರಗಳನ್ನು ನೋಡಲು ಕೈಗೊಂಡ ಪ್ರವಾಸದ ಸಂದರ್ಭದಲ್ಲಿ ಬಾಗಲಕೋಟೆಗೆ ಹೋಗಿ ಅಲ್ಲಿಂದ ಕೂಡಲ ಸಂಗಮಕ್ಕೆ ಹೋದೆ. ಅಲ್ಲಿ ಬಸ್ಸಿನಿಂದಿಳಿದು ನದಿಗಳ ಸಂಗಮ ಸ್ಥಾನಕ್ಕೆ ಹೋಗುತ್ತಿರುವಂತೆ ಬಸವ ಓಡಾಡಿದ ಜಾಗವೆಂದೇ ನಾನು ಹೆಜ್ಜೆ ಹೆಜ್ಜೆಗೆ ಜ್ಞಾಪಿಸಿಕೊಂಡೆ, ನದಿ ಪಕ್ಕದಲ್ಲಿ ನೆಲದ ಮೇಲೆ ನಡೆದು ಹೋಗುತ್ತ, ಬಸವಣ್ಣ ಇಟ್ಟ ಹೆಜ್ಜೆಯ ಮೇಲೆಯೇ ನಾನು ಹೆಜ್ಜೆ ಇಡುತ್ತಿದ್ದೇನೆ ಎಂದು ಪುಲಕಿತನಾದೆ; ಅಲ್ಲಿ ನದಿಯ ನೀರಿನಿಂದ ಮುಖ ತೊಳೆದುಕೊಂಡಾಗ ಆ ಮೆಟ್ಟಿಲ ಮೇಲೆ ನಿಂತು ಬಸವ ಸ್ನಾನಮಾಡುತ್ತಿದ್ದ ಎಂದೇ ಭ್ರಮಿಸಿದೆ. ಆ ಕಾಲಕ್ಕೆ ವಚನ ಸಾಹಿತ್ಯ ಪಿತಾಮಹರೆಂದೇ ಪ್ರಸಿದ್ಧರಾಗಿದ್ದ ಫ.ಗು. ಹಳಕಟ್ಟಿಯವರನ್ನು ಬಿಜಾಪುರಕ್ಕೆ ಹೋಗಿ ಮಾತನಾಡಿಸಿಕೊಂಡು ಬಂದಿದ್ದೆ.

ಮುಂದೆ 1975–76ರ ಸುಮಾರಿನಲ್ಲಿ ಹೈದರಾಬಾದಿಗೆ ವಿಮಾನದಲ್ಲಿ ಹೋಗಿ, ಸಂಜೆ ಅಲ್ಲಿಂದ ಕಾರಿನಲ್ಲಿ ಬೀದರಿಗೆ ಹೋಗುತ್ತಿರುವಾಗ ರಾತ್ರಿ ದಟ್ಟ ಕತ್ತಲೆಯಲ್ಲಿ ಕಾರಿನ ದೀಪದ ಬೆಳಕಿನಲ್ಲಿ ಎಡಗಡೆಯಿಂದ ಬಲಕ್ಕೆ ಒಂದು ಬಲಿಷ್ಠ ವೃಷಭ

ನಿಧಾನಕ್ಕೆ ನಡೆದು ಹೋಯ್ತು. ಬೀದರಿನಿಂದ ಬಸವಕಲ್ಯಾಣಕ್ಕೂ ಹೋಗಿ ಬರಬೇಕೆಂಬ ಉದ್ದೇಶವಿದ್ದ ನನಗೆ ಆ ವೃಷಭ ಅಥವಾ ಎತ್ತು ಬಸವಣ್ಣನೇ ಕತ್ತಲಲ್ಲಿ ಮಿಂಚಿ ಕಾಣಿಸಿದ ಅನುಭವವನ್ನು ತಂದುಕೊಟ್ಟಿತು. ಕಾಲದ ಕತ್ತಲೆಯಲ್ಲಿ ಎಂದೋ ಕಾಣಿಸಿ ಮತ್ತೆ ಕತ್ತಲೆಯಲ್ಲಿ ಮರೆಯಾದ ಬಸವಣ್ಣ ಎಂದು ರೋಮಾಂಚಿತನಾದೆ. ಬೀದರಿನಲ್ಲಿ ಸಭೆ ಮುಗಿಸಿಕೊಂಡು ಬಸವ ಕಲ್ಯಾಣದ ಪರಿಸರವನ್ನು ನೋಡಿಕೊಂಡು ಬಂದೆ. ಅಲ್ಲಿನ ಬೆಟ್ಟದ ಮೇಲಿನ ಕೋಟೆ ನೋಡಲು ಆಗ ಆಸಕ್ತಿಯಿರಲಿಲ್ಲ. ಮುಂದೆ ಹಲವು ವರ್ಷಗಳ ಬಳಿಕ ಅಲ್ಲಿನ ಬೆಟ್ಟ ಹತ್ತಿ ಕೋಟೆ ಪ್ರವೇಶಿಸಿದಾಗ ಅಲ್ಲಿದ್ದ ಕಲ್ಲ ಮೇಲಿನ ಎರಡು ಹೆಜ್ಜೆ ಗುರುತುಗಳನ್ನು "ಇದೇ ಬಸವ ಓಡಾಡಿದ ಹೆಜ್ಜೆ ಗುರುತುಗಳು" ಎಂದು ಅಲ್ಲಿನವರು ತೋರಿಸಿದ್ದರು. ಕೋಟೆ ಹತ್ತಿ ಅಲ್ಲೆಲ್ಲ ಮುಸ್ಲಿಮರಿಂದ ನಡೆದಿರುವ ಹಿಂದೂ ದೇವಾಲಯಗಳ ನಾಶವನ್ನು ನೋಡಿ ಖಿನ್ನನಾದುದೂ ಉಂಟು. ಕಲ್ಯಾಣ ಚಾಲುಕ್ಯರ ಕಾಲದ ಕಲ್ಯಾಣವು ಸಮಾಜೋಧಾರ್ಮಿಕ ಚಳವಳಿಯ ಕೇಂದ್ರವಾಯಿತು. ಹೈದರಾಬಾದ್ ನಿಜಾಮನ ಕಾಲದ ಅದೇ ಕಲ್ಯಾಣವು ಭಾರತೀಯ ಸಂಸ್ಕೃತಿಯ ವಿನಾಶದ ಸಂಕೇತವಾಯ್ತು. ಅಂತಹ ಕಲ್ಯಾಣದ ಬೆಟ್ಟ ಹತ್ತಿ ಹೋಗಿ, ಕೋಟೆ ನೋಡಿ, ಅಲ್ಲಿದ್ದ ಚಾಳುಕ್ಯರ ಕಾಲದ ಭಗ್ನ ಕಟ್ಟಡವೊಂದನ್ನು ಕಂಡು, ಬಿಜ್ಜಳನ ಅರಮನೆ ಅದೇ ಇರಬಹುದೆಂದು ಭಾವಿಸಿ ಬಸವಣ್ಣ ಭಾಗವಹಿಸುತ್ತಿದ್ದ ಸಭೆಗಳ ಆಸ್ಥಾನ ಅದೇ ಇರಬಹುದೆಂದು ನಾನು ಊಹಿಸಿದ್ದೆ – ಮೇಲ್ಭಾಗಕ್ಕೆ ಇಡೀ ಬಸವ ಕಲ್ಯಾಣ ನಗರ ಕಾಣುತ್ತದೆ.

ಬಸವ ಕಲ್ಯಾಣಕ್ಕೆ ಸಮೀಪದ ಬಾಲಕಂದಬೇಟ್ ಎಂಬ ಊರ ಪಕ್ಕದಲ್ಲೇ ಮೇಲೆ ಸಂಪೂರ್ಣ ಮಟ್ಟವಾಗಿರುವ ಬೆಟ್ಟವಿದ್ದು ಅದರ ತುದಿಯ ಬಂಡೆಗಳಲ್ಲಿ ಮನುಷ್ಯರೇ ತೋಡಿರುವ ಚಿಕ್ಕ ಚಿಕ್ಕ ಗುಂಡಿಗಳಿವೆ – ಬಸವಣ್ಣ ಅಲ್ಲೇ ಧಾನ್ಯವನ್ನು ಕುಟ್ಟಿಸಿ ಪುಡಿಮಾಡಿಸಿ ಅಡಿಗೆ ಮಾಡಿಸಿ ಸಾವಿರಾರು ಜನರಿಗೆ ಅನ್ನದಾಸೋಹ ನಡಸುತ್ತಿದ್ದ ಎಂಬ ಕತೆಗಳು ಅಲ್ಲಿ ಪ್ರಚಾರದಲ್ಲಿವೆ. ಬಸವಕಲ್ಯಾಣ, ಇಂಗುಳೇಶ್ವರ, ಬಾಲಕಂದಬೇಟ್ ಇಂತಹ ಕಡೆ ಈಗಲೂ ಬಸವಣ್ಣನನ್ನು ಕುರಿತಾದ 'ಜಾನಪದ' ಸ್ಮಾರಕಗಳು ಹಲವಾರಿವೆ.

ನನಗೇನೋ ಬಸವಣ್ಣನನ್ನು ಕುರಿತು ಬರೆಯುವಾಗ ಮಾತನಾಡುವಾಗ ಏಕವಚನವನ್ನು ಬಳಸುವುದೇ ಹೆಚ್ಚು ಪ್ರಿಯ. ಏಕವಚನ ಆತ್ಮೀಯತೆಯ ಸಂಕೇತ (ಒಮ್ಮೊಮ್ಮೆ ಅದು ನಿಂದಾವಾಚ್ಯವೂ ಆಗುತ್ತದೆ). ಬಸವಣ್ಣ ಎಂಬುದು ಅವನ ತಂದೆ ತಾಯಿಗಳು ಇಟ್ಟ ಹೆಸರು – ಅವನ ಬಾಲ್ಯದ ಹೆಸರು ಬಹುಶಃ 'ಬಸವರಸ' (ನೋಡಿ – ತಂದೆ ಮಾದರಸ). ಆದರೆ ಅವನು ತನ್ನ ಸಾಮಾಜಿಕ ಚಿಂತನೆ ಕ್ರಿಯೆಗಳ ಮೂಲಕ ತನ್ನನ್ನು ತಾನು ಸಮಾಜದ ಜೊತೆ ಸಂಪೂರ್ಣ ಸಮೀಕರಿಸಿ ಕೊಂಡವನು. "–ಅಣ್ಣ" ಎಂಬುದು ಅವನ ಕಾಲದ ಜನ ಸೇರಿಸಿದ ಸಂಬಂಧ

ಸೂಚಕ ಪ್ರತ್ಯಯ. "ಬಸವಣ್ಣನವರು", "ಬಸವಣ್ಣ" ಈ ಎರಡೂ ಪದಗಳು ನನ್ನ ಬರಹಗಳಲ್ಲಿ ಬಂದಿದ್ದರೂ ನನಗೇನೋ ಅವನ ಬಗ್ಗೆ ಏಕ ವಚನದಲ್ಲಿಯೇ ಬರೆಯುವುದು, ಮಾತನಾಡುವುದು ಪ್ರಿಯ. ಬಸವಣ್ಣನಲ್ಲಿ ನನಗೆ ಭಕ್ತಿ ಇದೆ; ಅಷ್ಟೇ ಆತ್ಮೀಯತೆಯೂ ಇದೆ. ದೇವರಲ್ಲಿ ಭಕ್ತಿಯಿರುವವರೆಲ್ಲ ಅಥವಾ ಬೇರೆಯವರೂ ಕೂಡ ದೇವರನ್ನು ಏಕವಚನದಲ್ಲಿಯೇ ಸಂಬೋಧಿಸುವುದು ("ಶಿವನೇ ನನ್ನನ್ನು ಕಾಪಾಡು"). ನನ್ನ ಬರಹಗಳಲ್ಲಿ ಬಸವಣ್ಣನ ಬಗ್ಗೆ ಕೆಲವೆಡೆ ಬಹುವಚನ ಬಳಸದಿದ್ದರೆ ಅದೇನೂ ತಪ್ಪಲ್ಲ – ಆದರೆ ನನಗೆ ತಿಳಿದಂತೆ ಹಿಂದಿನ ಯಾವ ಸಾಹಿತಿಯೂ ಸಾಮಾಜಿಕ ಚಿಂತಕನೂ ಧಾರ್ಮಿಕ ಮುಖಂಡನೂ ಅವನಷ್ಟು ಜನರಿಗೆ ಆತ್ಮೀಯ ವಾಗಿಲ್ಲ. ಈ ನನ್ನ ಮಾತುಗಳನ್ನು ಯಾರಾದರೂ ತಪ್ಪಾಗಿ ಭಾವಿಸಿಯಾರು ಎಂಬ ಅಳುಕು ನನಗೆ ಸ್ವಲ್ಪವೂ ಇಲ್ಲ.

ಒಂದು ತಮಾಷೆಯ ಸಂಗತಿ. 1945–8ರಲ್ಲಿ ದಾವಣಗೆರೆ ಜಯದೇವ ಉಚಿತ ವಿದ್ಯಾರ್ಥಿನಿಲಯದಲ್ಲಿದ್ದಾಗ ಪ್ರತಿ ಭಾನುವಾರ ನಗರದ ಮಧ್ಯೆ ಇದ್ದ ವಿರಕ್ತ ಮಠಕ್ಕೆ ನಾವು ಬೆಳಿಗ್ಗೆ ಕಡ್ಡಾಯವಾಗಿ ಹೋಗಲೇಬೇಕಿತ್ತು. ಅಲ್ಲಿನ ಪೂಜ್ಯರು ನಮಗೆ ಬಸವಣ್ಣನ ವಚನಗಳನ್ನು ಕಂಠಪಾಠ ಮಾಡಿಸುತ್ತಿದ್ದು, ಅವನ್ನು ಪ್ರತಿದಿನ ರಾತ್ರಿ ಊಟಕ್ಕೆ ಕುಳಿತಾಗ ನಾವು ಹೇಳಬೇಕಿತ್ತು. "ಅಯ್ಯಾ ಎಂದೊಡೆ ಸ್ವರ್ಗ" ಎಂದು ನಾನು ಹೇಳುವಾಗ ವಿಶೇಷವಿರಲಿಲ್ಲ; "ಎಲವೋ ಎಂದೊಡೆ ನರಕ" ಎಂದು ಹೇಳುವಾಗ "ಎಲವೋ" ಎಂಬುದನ್ನು ಗಟ್ಟಿಯಾಗಿ ಉಚ್ಚರಿಸಿ ಆ ದಿನ ತಂಟೆಮಾಡಿ ನನ್ನ ಜೊತೆ ಜಗಳಮಾಡಿದವನ ಮುಖ ನೋಡುತ್ತಿದ್ದೆ. ಅಲ್ಲಿಗೆ ನನ್ನ, ಅವನ ಎಂದಿನ ಸ್ನೇಹ ನವೀಕೃತವಾಗುತ್ತಿತ್ತು.

"ನಮಃ ಶಿವಾಯ" ಎಂಬ ಪಂಚಾಕ್ಷರಿ ಮಂತ್ರಕ್ಕಿಂತ "ಶ್ರೀಗುರು ಬಸವ ಲಿಂಗಾಯ ನಮಃ" ಎಂಬ ಮಂತ್ರವೇ ಹಿಂದಿನಿಂದ ಹೆಚ್ಚು ಜನಪ್ರಿಯ – ಎಲ್ಲ ವೀರಶೈವ ಹಸ್ತಪ್ರತಿಗಳ ಆರಂಭದಲ್ಲಿ ಅದೇ ಮಂತ್ರವು ಉಲ್ಲೇಖವಾಗಿದ್ದು, ಮುಂದೆ ಪ್ರತಿಕಾರನ ಬರಹವಿರುತ್ತದೆ.

ಒಂದು ಅಪ್ಪಟ ಕಲ್ಪನೆ : ದೇವಾಲಯಗಳಲ್ಲಿ ಶಿವಲಿಂಗದ ಮುಂದಿನ ವೃಷಭ ವನ್ನು "ಬಸವಣ್ಣ" ಎಂದು ಕರೆಯಲು ಬಸವಣ್ಣ ಹೆಸರಿನ ಉತ್ತರಾರ್ಧದ "ಅಣ್ಣ" ಆಗಿರುವಂತಿದೆ. ಸಂಪ್ರದಾಯವೆಂದರೆ ಆ ವೃಷಭದ ಎರಡು ಕೋಡುಗಳ ಮೂಲಕ ಗರ್ಭಗುಡಿಯ ಶಿವಲಿಂಗದ ದರ್ಶನ ಮಾಡಬೇಕು. ಹಾಗಾದರೆ, ಹನ್ನೆರಡನೆಯ ಶತಮಾನದ ಬಸವಣ್ಣನ ಮೂಲಕ ನಾವು ಕೈಲಾಸದ ಶಿವನ, ಪರಮಾತ್ಮನ ದರ್ಶನ ಮಾಡಬಹುದಲ್ಲವೇ? (ಇದು ನನಗೆ ಸಂತೋಷ ಕೊಟ್ಟ ಕಲ್ಪನೆ.)



## 19

# ಹಿಂದಿನ ಕವಿಶ್ರೇಷ್ಠರ ಇಂದಿನ ವಂಶಸ್ಥರು

ಕರ್ನಾಟಕ ನಿಜವಾಗಿಯೂ ಹೆಮ್ಮೆಪಡಬೇಕಾದ ಸಂಗತಿಯೆಂದರೆ, 10ರಿಂದ 14ನೇ ಶತಮಾನಗಳ ಅವಧಿಯಲ್ಲಿದ್ದ ಐವರು ಶ್ರೇಷ್ಠರ (ಪಂಪ, ನಾನ್ಯದೇವ, ಬಸವಣ್ಣ, ಪಾಲ್ಕುರಿಕೆ ಸೋಮನಾಥ, ಕುಮಾರವ್ಯಾಸ) ವಂಶಸ್ಥರು ಈಗಲೂ ಇರುವುದು. 1980ರಲ್ಲಿ ನಾನು 150 ವರ್ಷಗಳ ಹಿಂದಿನ ಇಂಗ್ಲೆಂಡಿನ ಶ್ರೇಷ್ಠ ಕವಿ ವರ್ಡ್ಸ್‌ವರ್ತ್‌ನ ಲೇಕ್ ಡಿಸ್ಟ್ರಿಕ್ಟಿನ ಅವನ ಮನೆಗೆ ಹೋದಾಗ ಆ ಮನೆಯನ್ನು ಅದು ಇರುವಂತೆಯೇ ಉಳಿಸಿಕೊಂಡು ಕವಿಯ ಕುರ್ಚಿ, ಮೇಜು ಇತ್ಯಾದಿಗಳನ್ನು ರಕ್ಷಿಸಿದ್ದರು. ಅವನ ವಂಶಸ್ಥರು ಈಗಲೂ ಅಲ್ಲಿದ್ದು ಆ ಮನೆಯ ಬಗ್ಗೆ ಇಡೀ ಇಂಗ್ಲೆಂಡ್ ಹೆಮ್ಮೆಪಡುತ್ತದೆ.

### 1. ಪಂಪನ (ಕ್ರಿ.ಶ. 945) ವಂಶಸ್ಥರು

ಪಂಪ ಮತ್ತು ಅವನ ತಮ್ಮ ಜಿನವಲ್ಲಭರ ತಾಯಿ ಅಣ್ಣಿಗೆರೆಯ ಜೋಯಿಸ ಸಿಂಗನ ದೊಮ್ಮಗಳಾದ ಅಬ್ಬಣಬ್ಬೆ, ತಂದೆ ಭೀಮಪಯ್ಯ. ಹುಟ್ಟಿನಿಂದ ಬ್ರಾಹ್ಮಣ ನಾಗಿದ್ದ ಭೀಮಪಯ್ಯ ಸ್ವ-ಇಚ್ಛೆಯಿಂದ ಜೈನನಾದನು. ಭೀಮಪಯ್ಯ ಮತಾಂತರ ಹೊಂದಬೇಕಾದರೆ ಪ್ರಬುದ್ಧನಾಗಿದ್ದು ಆ ಹೊತ್ತಿಗೆ ಪಂಪ ಜನಿಸಿದ್ದ; ಜೈನನಾದ ಮೇಲೆ ಜನಿಸಿದ ಮಗನಿಗೆ ಜಿನವಲ್ಲಭ ಎಂಬ ಜೈನೀಯ ಹೆಸರನ್ನಿಟ್ಟ. ಬ್ರಾಹ್ಮಣನಾಗಿ ಜನಿಸಿದ್ದರೂ ತಂದೆ ಜೈನನಾಗಿ ಪರಿವರ್ತನೆ ಹೊಂದಿದ್ದರಿಂದ ಪಂಪನೂ ಜೈನ ಎನ್ನಿಸಿಕೊಂಡ. ಎಂದರೆ, ಪಂಪನಲ್ಲಿ ಹಿಂದೂ-ಜೈನ ಸಂಸ್ಕೃತಿಗಳೆರಡೂ ಮಿಳಿತ ವಾದ್ದರಿಂದ ಮುಂದೆ ಮಹಾಭಾರತ, ಜೈನ ಪುರಾಣದ ಕತೆಗಳನ್ನು ತನ್ನ ಕಾವ್ಯಗಳಿಗೆ ವಸ್ತುವಾಗಿ ಮಾಡಿಕೊಂಡ. ಆದರೆ ಪಂಪನ ತಾಯಿ ಕಡೆಯವರು ಬ್ರಾಹ್ಮಣರಾಗಿಯೇ ಉಳಿದರು. ಪಂಪನ ವಂಶಸ್ಥರು ಶ್ರೀವತ್ಸ ಗೋತ್ರದ ಬ್ರಾಹ್ಮಣರು. ಬ್ರಾಹ್ಮಣನಾಗಿದ್ದ ಭೀಮಪಯ್ಯನೂ ಅದೇ ಗೋತ್ರದವನು. ಅವನು ಮದುವೆ ಮಾಡಿಕೊಂಡ ಅಬ್ಬಣಬ್ಬೆಯ ತಾತ ಜೋಯಿಸ ಸಿಂಗನ ಊರು ಅಣ್ಣಿಗೆರೆ ಎಂಬುದು ಸ್ಪಷ್ಟ. ಇಂದಿನ

ಅಣ್ಣಿಗೆರೆಯಲ್ಲಿರುವ 'ಜೋಯಿಸ' ಅಥವಾ 'ಜೋಷಿ' (=ಸಂಸ್ಕೃತ ಜ್ಯೋತಿಷಿ) ಎಂಬ ವಂಶನಾಮದ ಏಕೈಕ ಬ್ರಾಹ್ಮಣ ಕುಟುಂಬವೆಂದರೆ 85 ವರ್ಷದ ಈಗಿನ ಗೋವಿಂದ ಭಟ್ಟ ಜೋಷಿಯರದು. ಅವರು ಪಂಪನ ತಾಯಿಯ ವಂಶಸ್ಥರೆಂಬ ಬಗ್ಗೆ ಅನುಮಾನವಿಲ್ಲ. ಅವರದು ಅತ್ರಿ ಗೋತ್ರ. ಅವರ ಈಗಿನ ಮನೆ ಕನಿಷ್ಠ 400 ವರ್ಷಗಳಷ್ಟು ಹಿಂದಿನ ಭವ್ಯ ಕಟ್ಟಡವಾಗಿದ್ದು, ಅವರು ಅಲ್ಲಿನ ಸ್ಥಳೀಯರು ಮತ್ತು ಹಿಂದೆ ಅವರಿಗೆ 2 ಸಾವಿರ ಎಕರೆ ಭೂಮಿ ಇತ್ತಂತೆ (ಈಗ ಬಹುಪಾಲು ಉಳುವವರ ಪಾಲಾಗಿದ್ದು ಅವರಿಗೆ 50–60 ಎಕರೆ ಉಳಿದಿದೆ). ಅವರ ಮಗ ಸದಾಶಿವ ಜೋಷಿ ಆಸ್ತಿಯ ಉಸ್ತುವಾರಿ ನೋಡಿಕೊಳ್ಳುತ್ತಿದ್ದಾರೆ.

ಅದೇ ಅಣ್ಣಿಗೆರೆಯ ಜೈನ ವಂಶಸ್ಥ 'ಶ್ರೀಮಂತ ಭೀಮಪ್ಪಯ್ಯ ದೇಶಪಾಂಡೆ'ಯವರು ಪಂಪನ ತಂದೆಯ ವಂಶಸ್ಥರು. ಪಂಪನ ತಂದೆಯ ಹೆಸರನ್ನು ಆ ವಂಶ ಉಳಿಸಿಕೊಂಡು ಬಂದಿದೆ. ಅವರೂ ಅಣ್ಣಿಗೆರೆಯ ಮೂಲನಿವಾಸಿಗಳಾಗಿದ್ದು, ಅವರಿಗೂ 400–500 ವರ್ಷಗಳಷ್ಟು ಹಿಂದಿನ ಹಳೆಯ ಭವ್ಯ ವಾಸದ ಮನೆಯಿದ್ದು, ಅವರಿಗೂ ಹಿಂದೆ 500 ಎಕರೆ ಜಮೀನಿತ್ತು. ಬ್ರಾಹ್ಮಣರಾದ ಜೋಷಿ ಕುಟುಂಬಕ್ಕೂ ಜೈನ ಭೀಮಪ್ಪಯ್ಯ ದೇಶಪಾಂಡೆ ಕುಟುಂಬಕ್ಕೂ ರಕ್ತಸಂಬಂಧ ಈಗ ಯಾವುದೂ ಇಲ್ಲದಿರುವುದು ಸ್ವಾಭಾವಿಕ. ಆ ವಂಶಸ್ಥರ ಮನೆಗಳು ಪ್ರಾಚೀನತೆ, ಭವ್ಯತೆ ಎರಡರ ದೃಷ್ಟಿಯಿಂದಲೂ ಸಂರಕ್ಷಣಾರ್ಹ. ವಿಚಾರಿಸಿದರೆ ಬೇರೆ ಊರುಗಳಿಗೆ ಹೋಗಿರುವ ಅವರ ವಂಶಸ್ಥರಲ್ಲಿ ಅಮೂಲ್ಯ ದಾಖಲೆಗಳೂ ಸಿಕ್ಕಾವು. ಜಿನವಲ್ಲಭನ ಪತ್ನಿ ಭಗಿಯಬ್ಬೆ ಮಾಡಿಸಿದ ಮಹಾವೀರನ ಕಂಚಿನ ಪ್ರತಿಮೆ ದೊರಕಿದೆ (ಭಗಿಯಬ್ಬೆ ಒಬ್ಬ ಜೈನ ಮಹಿಳೆ, ಸ್ವಾಭಾವಿಕ).

## 2. ನಾನ್ಯದೇವನ (11ನೇ ಶ.) ವಂಶಸ್ಥರು

ಕಲ್ಯಾಣ ಚಾಲುಕ್ಯ ವಂಶದ ಸುಪ್ರಸಿದ್ಧ ಚಕ್ರವರ್ತಿ 6ನೇ ವಿಕ್ರಮಾದಿತ್ಯ (1076–1126) ಉತ್ತರ ಭಾರತವನ್ನು ಗೆದ್ದು ಅಲ್ಲಿ ನೇಪಾಳ–ಬಿಹಾರ ಪ್ರಾಂತವನ್ನಾಳಲು ತನ್ನ ಪ್ರತಿನಿಧಿ ನಾನ್ಯದೇವನನ್ನು ನೇಮಿಸಿದ. ನಾನ್ಯದೇವ ಕನ್ನಡಿಗನೆಂಬಲ್ಲಿ ಅನುಮಾನವಿಲ್ಲ. ಅವನ ನಿಜವಾದ ಹೆಸರು 'ನನ್ನಿದೇವ' (ಕನ್ನಡ. ನನ್ನಿ=ಸುಂದರ, ಒಳ್ಳೆಯ). 'ನನ್ನಿ'ದೇವ ಎಂಬುದೇ 'ನಾನ್ಯ'ದೇವ ಎಂದು ಸಂಸ್ಕೃತೀಕರಣಗೊಂಡಿದೆ. ಉತ್ತರ ಬಿಹಾರ, ದಕ್ಷಿಣ ನೇಪಾಳದ ಮಿಥಿಲೆ ಭಾಗವನ್ನಾಳಿದ ನಾನ್ಯದೇವನ ವಂಶಸ್ಥರು ತಮ್ಮದು 'ಕರ್ನಾಟಕ ವಂಶ'ವೆಂದೇ ಹೇಳಿಕೊಂಡಿದ್ದಾರೆ. ನಾನ್ಯದೇವನು ದಕ್ಷಿಣ ನೇಪಾಳದ ಸಿಮ್ರೌನ್‌ಗಢದಿಂದ ಆಳಿ ಆ ಪ್ರದೇಶವನ್ನು ಸಂಪದ್ಭರಿತಗೊಳಿಸಿದ; ರಾಜ್ಯವನ್ನು ವಿಸ್ತಾರಗೊಳಿಸಿ ಇಡೀ ನೇಪಾಳವನ್ನು ವಶಪಡಿಸಿಕೊಂಡ. ಇವನು ವಿದ್ವಾಂಸನೂ ಆಗಿದ್ದು ಭರತನ ನಾಟ್ಯಶಾಸ್ತ್ರದ ಮೇಲೆ ಬರೆದಿರುವ ಭರತ ಭಾಷ್ಯ ಅಥವಾ ಸರಸ್ವತೀ ಹೃದಯಾಲಂಕಾರ ಎಂಬ ವ್ಯಾಖ್ಯಾನವು ಪ್ರಸಿದ್ಧ. ಮುಂದೆ ಅವನ

ವಂಶಸ್ಥರು ಆಳಿಕೆಯನ್ನು ಮುಂದುವರಿಸಿದರು. ಆ ವಂಶದವರ ಕಾಲದಲ್ಲಿ ದಕ್ಷಿಣ ಭಾರತದಿಂದ, ವಿಶೇಷವಾಗಿ ಕರ್ನಾಟಕದಿಂದ ಹಲವು ವಿದ್ವಾಂಸರನ್ನು ನೇಪಾಳಕ್ಕೆ ಕರೆಸಿ ಅವರು ನೆಲೆಸುವಂತೆ ಮಾಡಲಾಯ್ತು. ಈಗಲೂ ಉತ್ತರ ಬಿಹಾರ ಮತ್ತು ದಕ್ಷಿಣ ನೇಪಾಳದ ಸಂಧಿ ಪ್ರದೇಶದಲ್ಲಿರುವ ಮಿಥಿಲೆಯ ಶ್ರೇಷ್ಠ ಸಂಸ್ಕೃತ ವಿದ್ವಾಂಸರಾದ 'ಮೈಥಿಲಿ ಬ್ರಾಹ್ಮಣ'ರು ತಾವು ಕರ್ನಾಟಕ ಮೂಲದವರು ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ನಾನ್ಯದೇವನ ಬಳಿಕ ಮಲ್ಯದೇವ, ಗಂಗದೇವ, ನರಸಿಂಹದೇವ ಇತ್ಯಾದಿ ಹೆಸರಿನವರು ನೇಪಾಳವನ್ನು ಆಳಿದರು. ಆ ವಂಶದ ಕೊನೆಯ ದೊರೆ ಹರಿಸಿಂಹದೇವ. 1324ರಲ್ಲಿ ಪದಚ್ಯುತನಾದ ಹರಿಸಿಂಹದೇವನನ್ನು 'the last and the greatest Hindu ruler of North India' ಎಂದೇ ಇತಿಹಾಸಕಾರರು ಕರೆದಿದ್ದಾರೆ. ಕರ್ನಾಟಕ–ನೇಪಾಳಗಳ ಸಾಂಸ್ಕೃತಿಕ ಸಂಬಂಧಗಳನ್ನು ಸಮೀಕ್ಷಿಸಲು ನಾನು ನೇಪಾಳಕ್ಕೆ ಹೋದಾಗ ಕಠ್ಮಂಡುವಿನಲ್ಲಿದ್ದ ಬೆಂಗಳೂರು ಮೂಲದ ಪದ್ಮಿನಿ ಬೈದ್ಯರನ್ನು ಭೇಟಿಯಾಗಲಿಲ್ಲ. ಬೆಂಗಳೂರಿನಲ್ಲಿ ಅವರನ್ನು ಭೇಟಿಯಾಗಲು ಮಲ್ಲೇಶ್ವರಕ್ಕೆ ಹೋದಾಗ ನನಗೊಂದು ಅಚ್ಚರಿ ಕಾದಿತ್ತು. ಅವರ ಪತಿಯಾಗಿರುವ ಕಠ್ಮಂಡುವಿನ ಶ್ರೀದೇವ್ ಬೈದ್ಯ ತಮ್ಮ ಬಳಿಯಿದ್ದ ವಂಶವೃಕ್ಷವನ್ನು ತೋರಿಸಿ, ತಾವು ಕೇರಳದಲ್ಲಿ ಆಳುತ್ತಿದ್ದ ರಾಜ ಮನೆತನದವರು ಎಂದು ಹೇಳಿಕೊಂಡರು. ಅವರ ವಂಶವೃಕ್ಷವು ಹರಿಸಿಂಹದೇವನ ಹೆಸರನ್ನು ಅವನ ಕಾಲ ಸಮೇತ (1324) ದಾಖಲಿಸಿರುವುದನ್ನು ನಾನು ನೋಡುತ್ತಿದ್ದಂತೆ 'ನೀವು ಕರ್ನಾಟಕ ಮೂಲದ ರಾಜ ಮನೆತನದವರು!' ಎಂದು ಉದ್ಗರಿಸಿದೆ. ಮೇಲೆ ಹೇಳಿದಂತೆ ನೇಪಾಳದ ಕರ್ನಾಟ ವಂಶದ ಕೊನೆಯ ದೊರೆ ಹರಿಸಿಂಹದೇನ ಕೊನೆಯ ಉಲ್ಲೇಖ ಕ್ರಿ.ಶ. 1324; ಎಲ್ಲ ರಾಜರ ಹೆಸರಿನ ಕೊನೆಯಲ್ಲಿ 'ದೇವ' ಎಂಬ ವಂಶನಾಮವಿದ್ದುದು ಅದನ್ನು ದೃಢ ಗೊಳಿಸಿತು. ನಾನ್ಯದೇವನ (ಕ್ರಿ.ಶ. 1100) ವಂಶಸ್ಥರು ಇಂದಿಗೂ ನೇಪಾಳದಲ್ಲಿರು ವುದು ರೋಮಾಂಚಕ ಸಂಗತಿ.

## 3. ಬಸವಣ್ಣನವರ (ಕ್ರಿ.ಶ. 1160) ವಂಶಸ್ಥರು

ಬಸವಣ್ಣನವರ ತಂದೆ ಮಾದರಸ ಬಸವನ ಬಾಗೇವಾಡಿಯ ಸ್ಮಾರ್ತರು; ತಾಯಿ ಮಾದಲಾಂಬಿಕೆಯ ತೌರ್ಮನೆ ಅಲ್ಲೇ ಸಮೀಪದ ಇಂಗುಳೇಶ್ವರ, ತಂದೆ ಮಾದರಸನ ವಂಶಸ್ಥರು ಬಾಗೇವಾಡಿಯಲ್ಲಿದ್ದಾರೆ. ಅವರನ್ನು ನಾನು 20 ವರ್ಷಗಳ ಹಿಂದೆ ಭೇಟಿ ಮಾಡಿದಾಗ, 'ಮಾದರಸ' ಎಂಬ ಹೆಸರು ತಂದೆಯಿಂದ ಮೊಮ್ಮಗ, ಅವನಿಂದ ಅವನ ಮೊಮ್ಮಗನಿಗೆ ಸಾಗಿ, ಉಳಿದು ಬಂದಿರುವುದನ್ನು ಕೇಳಿ ಸಂತೋಷಿಸಿದ್ದೆ. ಅವನ ತಾಯಿಯ ವಂಶಸ್ಥರು ಇಂದಿಗೂ ಇಂಗುಳೇಶ್ವರದಲ್ಲಿದ್ದು, ಅವರ ಬಳಿ ಅವರ ವಂಶವೃಕ್ಷವೂ ಇದೆ. ಇಂದಿಗೂ ಅವರು 'ಕುಲಕರ್ಣಿ' ಎಂಬ ವಂಶನಾಮವನ್ನು ಉಳಿಸಿಕೊಂಡಿದ್ದಾರೆ. ಉದಾ.: ಅರವಿಂದ ಕುಲಕರ್ಣಿ.

ಬಾಗೇವಾಡಿಯ ವಂಶಸ್ಥರ ವಂಶನಾಮವೂ 'ಕುಲಕರ್ಣಿ' ಎಂದಿದೆ. ಬಸವಣ್ಣನವರ ತಂದೆ ಬಾಗೇವಾಡಿಯ ಕರಣಿಕರಾಗಿದ್ದರು ಎಂಬುದಕ್ಕೆ ಆಧಾರಗಳಿವೆ. ಆ ಕಾರಣವೇ ಬಸವಣ್ಣ ಬಿಜ್ಜಳನ ಬಳಿ ಕರಣಿಕರಾಗಿ ಕೆಲಸ ಮಾಡಲು ಸಾಧ್ಯವಾಗಿದ್ದು ಬಸವಣ್ಣನವರ ತಾಯಿ, ತಂದೆಯ ವಂಶಸ್ಥರು ಕ್ರಮವಾಗಿ ಕೌಂಡಿನ್ಯ, ಕಾಶ್ಯಪ ಗೋತ್ರದ ಸ್ಮಾರ್ತರು.

## 4. ಸೋಮನಾಥನ (ಕ್ರಿ.ಶ. 1280) ವಂಶಸ್ಥರು

ತೆಲುಗಿನ 'ಬಸವಪುರಾಣಮು' ಎಂಬ ಶ್ರೇಷ್ಠ ಕಾವ್ಯದ ಕರ್ತೃ ತೆಲುಗು–ಕನ್ನಡ ಕವಿ ಸೋಮನಾಥನು ಶಿವಭಕ್ತೆ ಚನ್ನಮ್ಮನನ್ನು ನೋಡಲು ತನ್ನ ಮಗನೊಡನೆ ಆಂಧ್ರದಿಂದ ಮಾಗಡಿ ತಾಲೂಕಿನ ಕಲ್ಯಕ್ಕೆ ಬಂದು, ಅಲ್ಲಿನ ಬೆಟ್ಟದ ಮೇಲಿನ ಗುಹೆಯಲ್ಲಿ ಕೆಲಕಾಲ ಇರುತ್ತಾನೆ; ಅಲ್ಲೇ ಅವನು ಶಿವೈಕ್ಯನಾದಾಗ ಬೆಟ್ಟದ ಮೇಲಿರುವ ಕಲ್ಲೇಶ್ವರ ದೇಗುಲದ ಮುಂಭಾಗದಲ್ಲಿ ಸಮಾಧಿ ಮಾಡುತ್ತಾರೆ. ಈಗಲೂ ಅದನ್ನು ಸೋಮನಾಥನ ಸಮಾಧಿ ಎನ್ನುತ್ತಾರೆ. ಅದೇ ಬೆಟ್ಟದ ಇನ್ನೊಂದು ಪಾರ್ಶ್ವದಲ್ಲಿರುವ ಗವಿ ಮತ್ತು ಅದರ ಮುಂದಿನ ಮಂಟಪದಲ್ಲಿ ಅವನು ವಾಸವಾಗಿದ್ದ. ಇಂದಿಗೂ ಕಲ್ಯದಲ್ಲಿ ಅವನ ವಂಶಸ್ಥರಿದ್ದಾರೆ. ಹಿಂದೆಲ್ಲ ಅವರು ಮಕ್ಕಳಿಗೆ ಸೋಮನಾಥಾರಾಧ್ಯ, ಚನ್ನಮ್ಮ ಎಂಬ ಹೆಸರಿಡುತ್ತಿದ್ದರು. ಈಗಿನ ವಂಶಸ್ಥರ ಹೆಸರು ಮಲ್ಲಿಕಾರ್ಜುನಾರಾಧ್ಯ.

## 5. ಕುಮಾರವ್ಯಾಸನ (ಕ್ರಿ.ಶ. 1380) ವಂಶಸ್ಥರು

ಕರಣಿಕ ಮನೆತನದ ಕವಿ ಕುಮಾರವ್ಯಾಸನ ವಂಶಸ್ಥರು ಹುಬ್ಬಳ್ಳಿ ತಾಲೂಕಿನ ಕೋಳಿವಾಡದಲ್ಲಿದ್ದು ಅವರ ವಂಶಸ್ಥರು ಅಗಸ್ತ್ಯಗೋತ್ರದ ಭಾಗವತ ಸ್ಮಾರ್ತರು. ಆ ವಂಶಸ್ಥರಿಗೆ ಸೇರಿದ ದತ್ತಾತ್ರೇಯ ಪಾಟೀಲ ಕುಲಕರ್ಣಿಯವರ ಜೊತೆ ದೂರವಾಣಿಯ ಮೂಲಕ ಮಾತನಾಡಿದ್ದೇನೆ.

ಹಿಂದಿನ ಕರ್ನಾಟಕದ ಐವರು ಶ್ರೇಷ್ಠರ ವಂಶಸ್ಥರನ್ನು ಗುರುತಿಸಲು ಸಾಧ್ಯವಾಗಿರುವುದು ಕನ್ನಡಿಗರು ಹೆಮ್ಮೆಪಡಬೇಕಾದ ವಿಷಯ. ಅಕ್ಕಮಹಾದೇವಿಯ ವಂಶಸ್ಥರು ಶಿಕಾರಿಪುರ ಪ್ರದೇಶದಲ್ಲಿ ಇರುವ ವಿಷಯವನ್ನು ಕೇಳಿದ್ದೇನೆ. ಅದರ ನೈಜತ್ವವನ್ನು ಖಚಿತಪಡಿಸಿಕೊಳ್ಳಬೇಕಾಗಿದೆ.



# 20

# "ಅಣ್ಣ", "ಅಕ್ಕ", "ಪ್ರಭು"

ಅಣ್ಣ, ಅಕ್ಕ, ಪ್ರಭು ಇವು ಮೂರೂ ಸಂಬಂಧ ಸೂಚಕ ಪದಗಳು; ಮೊದಲ ಎರಡು ರಕ್ತ ಸಂಬಂಧವನ್ನು ಸೂಚಿಸಿದರೆ ಮೂರನೆಯದು ಸಾಮಾಜಿಕ ಸಂಬಂಧವನ್ನು ಸೂಚಿಸುತ್ತದೆ. ರಕ್ತ ಸಂಬಂಧವು ಸಹಜವಾದುದು; ಸಾಮಾಜಿಕ ಸಂಬಂಧವು ಮಾನವ ನಿರ್ಮಿತವಾದುದು. ಒಬ್ಬ ತಂದೆಯ ಮಕ್ಕಳು ಪರಸ್ಪರ ಅಣ್ಣ, ಅಕ್ಕ; ಆದರೆ, ಅಧಿಕಾರವು ಹಾಗಲ್ಲ–ಮನುಷ್ಯ ನಿರ್ಮಿತವಾದುದು. ಇದನ್ನು ವಿಸ್ತರಿಸುವ ಅಗತ್ಯವಿಲ್ಲ.

ಕನ್ನಡ ಸಾಹಿತ್ಯದ ವಿದ್ಯಾರ್ಥಿಗಳಿಗೆ ಅಣ್ಣ, ಅಕ್ಕ, ಪ್ರಭು ಎಂದೊಡನೆ ಸಹಜವಾಗಿಯೇ ತಕ್ಷಣ ನೆನಪಾಗುವುದು ಬಸವ, ಮಹಾದೇವಿ ಮತ್ತು ಅಲ್ಲಮ. ಅವರನ್ನು ಹಿಂದಿನಿಂದ ಮತ್ತು ಈಗಲೂ ಬಸವಣ್ಣ, ಅಕ್ಕಮಹಾದೇವಿ, ಅಲ್ಲಮಪ್ರಭು ಎಂದೇ ಕರೆಯುವುದು ರೂಢಿ. ಆ ಸಂಬಂಧ ಸೂಚಕ ಪದಗಳ ಬಳಕೆ ಬಹು ಅರ್ಥಪೂರ್ಣ – ಆ ವಚನಕಾರರು ವಾಸ್ತವವಾಗಿ ಏನು, ಅವರು ಸಮಕಾಲೀನರಿಗೆ ಮತ್ತು ಮುಂದಿನವರಿಗೆ ಕಂಡ ಬಗೆ ಹೇಗೆ ಎಂಬುದರ ಮೇಲೆ ಅಪೂರ್ವ ಬೆಳಕನ್ನು ಬೀರುತ್ತದೆ.

ಬಸವಣ್ಣನ ಬದುಕು, ನಡೆ, ನುಡಿ ಇವೆಲ್ಲ ಜನರಿಗೆ ಬಹು ಸಮೀಪವಾಗಿದ್ದುವೆಂಬುದು ಈಗ ಜಗತ್ಪ್ರಸಿದ್ಧ. ಅವನು ಹುಟ್ಟಿನಿಂದ ಶ್ರೀಮಂತ ಬ್ರಾಹ್ಮಣ; ವೃತ್ತಿಯಿಂದ ಬಿಜ್ಜಳನಂತಹ ದೊಡ್ಡ ಚಕ್ರವರ್ತಿಯ ಆರ್ಥಿಕ ವ್ಯವಹಾರವನ್ನು ನೋಡಿಕೊಳ್ಳುತ್ತಿದ್ದ ಭಂಡಾರಿ. ಆದರೂ ಅವನು ಅದೆಲ್ಲವನ್ನೂ ಮರೆತು, ತನ್ನ ಹುಟ್ಟು ಅಧಿಕಾರಗಳನ್ನು ಲೆಕ್ಕಿಸದೆ ಜನಸಾಮಾನ್ಯರಲ್ಲಿ ಸಂಪೂರ್ಣವಾಗಿ ಸಮೀಕರಿಸಿಕೊಂಡು ಬಾಳಿದ. ಬಿಜ್ಜಳನ ಭಂಡಾರಿಯಾಗಿ ತನ್ನ ಕರ್ತವ್ಯವನ್ನು ನಿರ್ವಹಿಸಿದ ಅವನು ಒಬ್ಬ ನಿಜವಾದ ಮಾನವನಾಗಿ ತನ್ನ ಆತ್ಮೀಯ ಕರ್ತವ್ಯಗಳನ್ನೂ ಅಷ್ಟೇ ಶ್ರದ್ಧೆಯಿಂದ ನಿರ್ವಹಿಸಿದ. ಅರಮನೆಯಲ್ಲಿ ಕಾಲ ಕಳೆದ; ಬಡವರ ಅಸ್ಪೃಶ್ಯರ ಗುಡಿಸಲುಗಳಲ್ಲಿಯೂ ಕಾಲ ಕಳೆದ. ನಡೆ, ನುಡಿ ಒಂದಾಗಿದ್ದ ಅವನು ಶ್ರೀಮಂತ, ಮೇಲು ಜಾತಿಯವರ ಕೆಂಗಣ್ಣಿಗೆ ಗುರಿಯಾದ; ಅಂತೆಯೇ ಜನಸಾಮಾನ್ಯರ ಹೃದಯಕ್ಕೆ ತೀರ

ಹತ್ತಿರವಾದ. ಮೇಲುವರ್ಗ ಅವನನ್ನು ದೂರವಿಟ್ಟದ್ದು ಕೆಳವರ್ಗಕ್ಕೆ ತೀರ ಆಪ್ತನಾಗಲು ಹತ್ತಿರವಾಗಲು 'ಅಣ್ಣ'ನಾಗಲು ಕಾರಣವಾಯ್ತು.

ಮಹಾದೇವಿ ಸಾಮಾನ್ಯ ವರ್ಗದವಳು; ಅವಳು "ಕೌಶಿಕ" ಎಂದು ಕಾವ್ಯಗಳಲ್ಲಿ ಬಣ್ಣಿಸಲಾಗಿರುವ ಕಸಪಯ್ಯ ನಾಯಕ ಎಂಬ ಬಳ್ಳಿಗಾವೆ ಪ್ರದೇಶದ ಸಾಮಂತನ ಜೊತೆ ಕೆಲವು ಕಾಲ ಒಲ್ಲದ ಮನಸ್ಸಿನಿಂದ ಸಂಸಾರ ಮಾಡಬೇಕಾಯ್ತು. ಅವಳು ಬಾಲ್ಯದಿಂದಲೇ ಶ್ರೀಶೈಲದ ಮಲ್ಲಿಕಾರ್ಜುನ ದೈವದ ಭಕ್ತಳಾಗಿದ್ದು ಯೌವನ ಸಮೀಪಿಸುತ್ತಿದ್ದಂತೆ ಆ ದೈವವೆ ತನ್ನ ಪತಿ ಎಂದು ಭಾವಿಸಿ ಸಾಧನೆ ಮಾಡಿದವಳು. ಕಸಪಯ್ಯ ನಾಯಕನು ಲೋಕದ ಕಣ್ಣಿಗೆ ಅವಳ ಪತಿಯಾಗಿದ್ದರೂ ಅವಳು ಅಂತರಂಗದಲ್ಲಿ ಮಲ್ಲಿಕಾರ್ಜುನನೆ ತನ್ನ ನಿಜಪತಿಯೆಂದು ಭಾವಿಸಿ ಅವನಿಗೆ ತನ್ನ ಮನಸ್ಸು, ಆತ್ಮ ಎರಡನ್ನೂ ಒಪ್ಪಿಸಿಕೊಂಡಳು. ಯಾವುದೋ ಒಂದು ಘಟ್ಟದಲ್ಲಿ ಅವಳ ಮತ್ತು ಕಸಪಯ್ಯ ನಾಯಕನ ಮಧ್ಯೆ ತೀವ್ರ ವಿವಾದ ಹುಟ್ಟಿ, ಅದನ್ನೇ ನೆವವಾಗಿ ಮಾಡಿಕೊಂಡು ಕಸಪಯ್ಯ ನಾಯಕನನ್ನು ಬಿಟ್ಟು ಶ್ರೀಶೈಲಕ್ಕೆ ತೀರ ಸಾಮಾನ್ಯ ವೇಷದಲ್ಲಿ ವಿರಾಗಿಣಿಯಂತೆ ಹೋದಳು. ಗಂಡು ಹೆಣ್ಣನ್ನು ತ್ಯಜಿಸುವುದು ಎಲ್ಲ ಕಾಲಕ್ಕೂ ಸುಲಭ, ಆದರೆ ಆಧುನಿಕ ಕಾಲದಲ್ಲೂ ಒಬ್ಬ ಹೆಂಡತಿ ಗಂಡನನ್ನು ತ್ಯಜಿಸುವುದು ತೀರ ಕಷ್ಟವಾಗಿರುವಾಗ ಎಂಟು ನೂರು ವರ್ಷಗಳಿಗೂ ಹಿಂದೆ ಒಬ್ಬ ಪ್ರಭಾವಶಾಲಿ ಮತ್ತು ನಾಡಿನ ಮೇಲೆ ಹಿಡಿತವನ್ನಿಟ್ಟಿದ್ದ ರಾಜನಿಗೆ ವಿಚ್ಛೇದನ ಹೇಳಿ ಅವನ ಅರಮನೆಯಿಂದ ಅವಳು ಹೊರಬಂದುದು ಆ ಕಾಲಕ್ಕಂತೂ ಒಂದು ಅಪೂರ್ವ ವಿಸ್ಮಯಕರ ಸಂಗತಿ. ಅವಳು ಕಲ್ಯಾಣಕ್ಕೆ ಸರಳವೇಷದಲ್ಲಿ ಹೋಗಿ ಅಲ್ಲಿ ತನ್ನ ವೈರಾಗ್ಯವನ್ನು ಎಲ್ಲರ ಮುಂದೆ ಸಮರ್ಥಿಸಿಕೊಂಡದ್ದು, ಅವಳ ನಿಷ್ಕಳಂಕ ಭಕ್ತಿ, ಅವಳ ಹೃದಯತುಂಬಿ ಹರಿದ ವಚನಗಳು ಇವುಗಳಿಂದ ಹನ್ನೆರಡನೆಯ ಶತಮಾನದಲ್ಲೇ ಅವಳು ಜನರಲ್ಲಿ ಬಂದು ಜೀವಂತ ಕತೆಯಾದಳು; ಆತ್ಮೀಯಳಾದಳು; ಅವರ ಹೃದಯಕ್ಕೆ ತೀರ ಹತ್ತಿರವಾದಳು. ಪುರುಷರಲ್ಲಿ ಬಸವಣ್ಣ ಎಂತೋ ಸ್ತ್ರೀಯರಲ್ಲಿಯೂ ಮಹಾದೇವಿಯು ಅಂದಿನ ಶರಣರ, ಎಲ್ಲ ವರ್ಗದ ಜನರ ಮನಸ್ಸನ್ನು ಗೆದ್ದಳು; ಜನತೆಯ 'ಅಕ್ಕ' ಆದಳು.

ಅಲ್ಲಮ ಕೆಳವರ್ಗಕ್ಕೆ, ಬಹುಶಃ ಶೂದ್ರ ವರ್ಗಕ್ಕೆ ಸೇರಿದ ಜನಾಂಗದಲ್ಲಿ ಹುಟ್ಟಿ ಬೆಳೆದ ಒಬ್ಬ ಕಲಾವಿದ – ದೇವಾಲಯದ 'ದಾಸಿ'ಯರ ನರ್ತನಕ್ಕೆ ಅನುಗುಣವಾಗಿ ವಾದ್ಯನುಡಿಸುತ್ತಿದ್ದ ಪ್ರತಿಭಾಶಾಲಿ. ಅವನು ಗೊಗ್ಗೇಶ್ವರ ದೇವಾಲಯಕ್ಕೆ ಬಂದ ಕಾಮಲತೆ ಎಂಬ ವೈಶ್ಯವರ್ಗಕ್ಕೆ ಸೇರಿದ ಹೆಣ್ಣನ್ನು ಪ್ರೀತಿಸಿದ. ಅವರದ್ದು ಒಂದು ರೀತಿಯ ಅಂತರಜಾತೀಯ ವಿವಾಹ. ಕೆಳವರ್ಗದ ಗಂಡು ಮೇಲ್ವರ್ಗದ ಹೆಣ್ಣನ್ನು ಕೈಹಿಡಿಯುವುದು ಅಂದು (ಇಂದಿನಂತೆ) ಜನರ ಅಪ್ರೀತಿಗೆ ಪಾತ್ರವಾಯಿತು. (ಆ ಬಗೆಯ 'ವಿಲೋಮ ವಿವಾಹ'ಗಳು ಭಾರತೀಯ ಪದ್ಧತಿಗೆ ವಿರುದ್ಧ. ಮೇಲ್ವರ್ಗದ

ಗಂಡು ಕೆಳವರ್ಗದ ಹೆಣ್ಣನ್ನು ಕೈಹಿಡಿಯುವ 'ಅನುಲೋಮ ವಿವಾಹ'ಕ್ಕೆ ಭಾರತೀಯ ಪದ್ಧತಿ ವಿರೋಧವಾಗಿಲ್ಲ.) ಎಳೆ ಹರೆಯದಲ್ಲೇ ವಿಧಿವಶಳಾದ ಕಾಮಲತೆಯ ಸಾವಿನಿಂದ ದುಃಖತಪ್ತನಾದ ಅಲ್ಲಮನಿಗೆ ಅಕಸ್ಮಾತ್ ಒಂದು ಭೂಗತದೇವಾಲಯ ದಲ್ಲಿದ್ದ ಅನಿಮಿಷ ಎಂಬ ಯೋಗಿಯ ಅಸ್ತಿಪಂಜರದ ಕೈಯಲ್ಲಿದ್ದ ಇಷ್ಟಲಿಂಗವು ದೊರೆತು, ಅವನಿಗೆ ಮುಂದಿನ ಸಾಧನೆಯ ಮಾರ್ಗವನ್ನು ಸೂಚಿಸಿತು. ಅವನು ನಿಜವಾದ 'ಜಂಗಮ'ನಾಗಿ ಬಹುವಾಗಿ ಸಂಚರಿಸಿ, ಕಾಮಲತೆಯ ಅಕಾಲಿಕ ಸಾವಿನ ನೋವನ್ನು ತನ್ನ ಭಕ್ತಿ ಸಾಧನೆಯ ತಪಸ್ಸನ್ನಾಗಿ ಪರಿವರ್ತಿಸಿಕೊಂಡ. ಅವನೊಬ್ಬ ಆರೂಢನಾದ, ಯೋಗಿಯಾದ, ತಪಸ್ವಿಯಾದ; ಆತ್ಮ ಚಿಂತಕನೂ ಆದ. ಅವನ ಲೇಖನಿಯಿಂದ ಹೊರಟ ವಚನಗಳು ಅಂತರಂಗದ ನಿಗೂಢ ಲೋಕದ ವಿಸ್ಮಯ ಗಳನ್ನು ತೆರೆದಿಡುತ್ತವೆ. ಆ ಆಧ್ಯಾತ್ಮಿಕ ಪ್ರಪಂಚ ಸಾಮಾನ್ಯರಿಗೆ ದೂರವಾದುದು, ಅರ್ಥವಾಗದ್ದು. ಅವನು ಯೋಗಿಯಾಗಿ ಜನರ ಜೊತೆ ಅಷ್ಟಾಗಿ ಬೆರೆತಂತೆ ಕಾಣಿಸು ವುದಿಲ್ಲ. ಬಸವಣ್ಣನಾದರೋ ಜನರ ಮಧ್ಯೆಯೇ ಬದುಕಿ ಅವರ ಒಳಸಮಸ್ಯೆಗಳನ್ನು ಅರಿತವನು. ಅಲ್ಲಮ ಸಾಮಾನ್ಯನಾಗಿ ಹುಟ್ಟಿದ್ದರೂ ಅವನು ಆರಿಸಿಕೊಂಡ ಮಾರ್ಗ ಸಾಮಾನ್ಯರಿಂದ ದೂರವಾಗಿದ್ದರೂ ಅವನ ಸಾಧನೆ, ಸಿದ್ಧಿಗಳು ಅಪಾರ ಭಕ್ತಿ ಪ್ರಶಂಸೆಗಳನ್ನು ಪಡೆಯುವಂತಹುದಾಗಿತ್ತು. ಅವನು ಕನ್ನಡದಲ್ಲಿ ವಚನಗಳನ್ನು ಬರೆದ; ಆದರೆ ಬಹುತೇಕ ವಚನಗಳು ಸಾಮಾನ್ಯರಿಗೆ ಎಟಕುವುದಿಲ್ಲವೆಂಬುದು ಸ್ಪಷ್ಟ. ಅವನು ಜನರಿಗೆ ಭಯ ಭಕ್ತಿಯ 'ಪ್ರಭು' ಆದ, ಗೌರವಾರ್ಹ ಹಿರಿಯ ಆದ.

ಈಗ ಚಿತ್ರ ತಕ್ಕ ಮಟ್ಟಿಗೆ ಸ್ಪಷ್ಟವಾಗುತ್ತದೆ. ಬಸವಣ್ಣ, ಅಕ್ಕಮಹಾದೇವಿಯರ ಬದುಕು ಸಾಮಾನ್ಯರಿಗೆ ಸಮೀಪ ಮತ್ತು ಪ್ರಿಯ. ಅಕ್ಕಮಹಾದೇವಿ ಕಸಪಯ್ಯ ನಾಯಕನನ್ನು ಬಿಟ್ಟು ಬೇರೊಬ್ಬ ವ್ಯಕ್ತಿಯನ್ನು ಮದುವೆಯಾಗಿದ್ದರೆ ಜನರಿಂದ ಅದಕ್ಕೆ ಸ್ಪಷ್ಟ ವಿರೋಧವಿರುತ್ತಿತ್ತು. ಆದರೆ ಅವಳು ಮನಃಪೂರ್ವಕವಾಗಿ ಒಲಿದದ್ದು ಪರಮಾತ್ಮನಿಗೆ; ಅವನಿಗಾಗಿ ಲೌಕಿಕ ವ್ಯಕ್ತಿಯನ್ನು ತ್ಯಜಿಸಿದಳು. ಇದರಿಂದಾಗಿ ಜನರು ಅವಳನ್ನು 'ಅಕ್ಕ' ಎಂದು, ಹಿಂದೆ ತಿಳಿಸಿದ ಕಾರಣಗಳಿಗಾಗಿ ಬಸವನನ್ನು 'ಅಣ್ಣ' ಎಂದು ಭಾವಿಸಿ ಸ್ವೀಕರಿಸಿದರು. ಆದರೆ ಅಲ್ಲಮ ಜನರಿಗೆ 'ಪ್ರಭು', 'ಪ್ರಭುದೇವ' ಆಗಿ ಪರಿಣಮಿಸಿದ. ಆಳುವ ಪ್ರಭುವಿಗೆ ಜನ ತೋರಿಸಬೇಕಾದ್ದು ಭಕ್ತಿ, ವಿಧೇಯತೆ. 'ಅಣ್ಣ', 'ಅಕ್ಕ' ಇವರು ಅಭಿಮಾನಿಗಳಿಗೆ ಹಿರಿಯರು, ಅಂತೆಯೇ ಆತ್ಮೀಯರು. 'ಪ್ರಭು'ವೂ ಕೂಡ ಒಂದು ದೃಷ್ಟಿಯಿಂದ ಹಿರಿಯನೇ; ಆದರೆ ಅವನು ಆತ್ಮೀಯ ಅಲ್ಲ; ಜನರು ಅವನ ಸ್ಥಾನವನ್ನು ಗಮನಿಸಿ ವಿಧೇಯತೆಯನ್ನು ತೋರಿಸಬೇಕಾದ ವ್ಯಕ್ತಿ ಅವನು.

ಬಸವಣ್ಣನ ಹುಟ್ಟು ಹೆಸರು ಬಹುಶಃ 'ಬಸವ' ಮಾತ್ರ. ಅವನ ತಂದೆ ಮಾದಿರಾಜ ಅಥವಾ ಮಾದರಸ; ಸೋದರ ಮಾವ ಸಿದ್ಧರಸ ಎಂಬುದನ್ನು

ಗಮನಿಸಿದರೆ ಬಸವರಸ ಅಥವಾ ಬಸವರಾಜ ಎಂಬುದೇ ಮುಂದಿನ ಅವನ ಅಧಿಕೃತ ನಾಮ; ಮತ್ತು ಅವನು ಅಧಿಕಾರಿಯಾಗಿ ದಾಖಲೆಗಳಲ್ಲಿ ಹಾಕುತ್ತಿದ್ದ 'ಒಪ್ಪ' ಬಹುಶಃ 'ಬಸವರಾಜ.' ಅವನ ತಂದೆ 'ಮಾದಿರಾಜ'ನ ಹೆಸರು ಸಮಕಾಲೀನ ಘಟ್ಟಿವಾಳಯ್ಯನ ವಚನದಲ್ಲಿ ದಾಖಲಾಗಿದೆ (I. ವ. 451) (ಒಪ್ಪ=ರುಜು. 'ಒಪ್ಪು'ವಿನಿಂದ ಬಂದ ಪದ ಒಪ್ಪ.) ಅಕ್ಕ ಮಹಾದೇವಿಯ ಮೂಲ ಹೆಸರು ಮಹಾದೇವಿ – ಇದು ಶ್ರೀಶೈಲದ ಮಲ್ಲಿಕಾರ್ಜುನನ ಪತ್ನಿಯ ಹೆಸರಾದ 'ಮಹಾದೇವಿ'ಯಿಂದ ಬಂದಿರಬಹುದೆಂದು ನಾನು ಒಂದೆಡೆ ಸಾಧಾರವಾಗಿ ಊಹಿಸಿದ್ದೇನೆ. ಅವಳ ತಂದೆ ತಾಯಂದಿರು ಶ್ರೀಶೈಲದ ಮಲ್ಲಿಕಾರ್ಜುನನ ಭಕ್ತರಾಗಿದ್ದಿರುವ ಸಾಧ್ಯತೆ ಇದೆ.

ಅದೇನೇ ಇರಲಿ – ಅವಳ ಮೂಲ ಹೆಸರು ಮಹಾದೇವಿ; 'ಅಕ್ಕ' ಎಂಬುದು ಜನ ಆಮೇಲೆ ಅವಳ ಹೆಸರಿನ ಜೊತೆ ಬಳಸಿದ್ದು. ಅಲ್ಲಮ ಎಂಬುದೇ ಅವನ ಮೂಲ ಹೆಸರು. ಆ ಹೆಸರು ಅವನಿಗಿಂತ ಹಿಂದೆಯೇ ಕರ್ನಾಟಕದಲ್ಲಿ ಪ್ರಚುರ ವಾಗಿತ್ತು (ಅಲ್ಲ+ಮ=ಅಲ್ಲಪ್ಪ. ಅಮ್ಮನ್=ತಂದೆ, ಅಪ್ಪ). ಬಸವ, ಮಹಾದೇವಿ, ಅಲ್ಲಮ ಇವರ ಹೆಸರುಗಳ ಜೊತೆ –ಅಣ್ಣ, –ಅಕ್ಕ, –ಪ್ರಭು ಈ ಉತ್ತರಾರ್ಧಗಳನ್ನು ಜನರು ಪ್ರಜ್ಞಾ ಪೂರ್ವಕವಾಗಿ ಸೇರಿಸಿದ್ದು ಅಲ್ಲ. ಬಸವ, ಮಹಾದೇವಿ, ಅಲ್ಲಮ ಇವರ ಜೀವನ ವಿಧಾನ, ನಡೆ, ನುಡಿ, ಇವುಗಳಿಂದಾಗಿ ಜನಮಾನಸದಲ್ಲಿ ಅವರಿಗಿದ್ದ, ಈಗಲೂ ಇರುವ ಸ್ಥಾನವನ್ನು –ಅಣ್ಣ, –ಅಕ್ಕ, –ಪ್ರಭು ಈ ಉತ್ತರಾರ್ಧಗಳು ಸೂಚಿಸುತ್ತವೆ. –ಅಣ್ಣ, –ಅಕ್ಕ ಇವು ಮುಖ್ಯವಾಗಿ ಆತ್ಮೀಯತೆಯ ಸಂಕೇತ (ಅವು ಭಕ್ತಿ ಸೂಚಕಗಳೂ ಆಗಬಹುದು); –ಪ್ರಭು(ದೇವ) ಮುಖ್ಯವಾಗಿ ಭಕ್ತಿ ಸೂಚಕ (ಅದು ಆತ್ಮೀಯತೆಯ ವಿರೋಧವಲ್ಲ).

ನನ್ನ ಮೇಲಿನ ಮಾತುಗಳು ನನ್ನ ಭಾವನೆಯನ್ನು ತಕ್ಕಮಟ್ಟಿಗೆ ಬಿಂಬಿಸುತ್ತವೆ. ಬಸವಣ್ಣ ದೊಡ್ಡ ಅಧಿಕಾರಿಯಾಗಿದ್ದರೂ ಅವನು ಜನರಿಗೆ ಆತ್ಮೀಯ; ಹುಟ್ಟಿನಿಂದ ಅಲ್ಲಮ ಸಾಮಾನ್ಯನಾಗಿದ್ದರೂ ಅವನು ಜನರ ವಿಧೇಯತೆಗೆ, ಭಕ್ತಿಗೆ ಪಾತ್ರ. ಅಕ್ಕ ಮಹಾದೇವಿಯ ಬದುಕೇ ಅವಳನ್ನು ಜನರ ಹೃದಯದ ಸಮೀಪಕ್ಕೆ ತಂದಿದೆ. ನಾನು ಮತ್ತೊಮ್ಮೆ ಸ್ಪಷ್ಟಪಡಿಸುತ್ತೇನೆ : –ಅಣ್ಣ, –ಅಕ್ಕ, –ಪ್ರಭು ಈ ಪದಗಳು ಹನ್ನೆರಡನೆಯ ಶತಮಾನದ ಅತ್ಯಂತ ಪ್ರಮುಖ ವ್ಯಕ್ತಿಗಳಾದ ಬಸವ, ಮಹಾದೇವಿ, ಅಲ್ಲಮ ಇವರ ಬಗ್ಗೆ ಅಂದಿನ ಜನ ಹೊಂದಿದ್ದ ಭಾವನಾತ್ಮಕ ಸಂಬಂಧದ ಸಂಕೇತಗಳು, ಮತ್ತು ಆ ಸಂಬಂಧಗಳು ಅತ್ಯಂತ ಅರ್ಥಪೂರ್ಣ, ಧ್ವನಿಪೂರ್ಣ.



# 21

# ಸಮಕಾಲೀನರು, ಮುಂದಿನವರು 'ಕಂಡ' ಬಸವಣ್ಣ : ಕೆಲವು ಭಾವನೆಗಳು

ಬಸವಣ್ಣನ ಬಗ್ಗೆ ಅವನ ಸಮಕಾಲೀನರು ವ್ಯಕ್ತಪಡಿಸಿರುವ ಕೆಲವು ಭಾವನೆಗಳ ಒಂದು ಸಂಕ್ಷಿಪ್ತ ಪಟ್ಟಿ ಹೀಗಿದೆ; ಅವು ವಾಚಕರ ಗಮನಕ್ಕೆ ಬರಲು ಯೋಗ್ಯವಾಗಿವೆ; ಮತ್ತು ಅವು ಬಸವನನ್ನು ಅರ್ಥಮಾಡಿಕೊಳ್ಳಲು ಸಹಾಯಕ.

**ಅಲ್ಲಮ :**

1. ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆರೆದು
ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು
ತೊಳಗಿ ಬೆಳಗುತ್ತಿದ್ದಿತಯ್ಯಾ ಶಿವನ ಪ್ರತಾಪ.
ಆ ಬೆಳಗಿನೊಳಗೆ ಒಪ್ಪುತ್ತಿದ್ದರಯ್ಯಾ ಅಸಂಖ್ಯಾತ ಭಕ್ತಗಣಂಗಳು.
ಶಿವಭಕ್ತರಿರ್ದ ಕ್ಷೇತ್ರವೆ ಅವಿಮುಕ್ತ ಕ್ಷೇತ್ರೆಂಬುದು ಹುಸಿಯೆ?
ಶಿವಭಕ್ತರಿರ್ದ ದೇಶ ಪಾವನವೆಂಬುದು ಹುಸಿಯೆ?
ಗುಹೇಶ್ವರಲಿಂಗದಲ್ಲಿ ಎನ್ನ ಪರಮಾರಾಧ್ಯ ಸಂಗನಬಸವಣ್ಣನ ಕಂಡು
ಬದುಕಿದೆನು ಕಾಣಾ ಸಿದ್ಧರಾಮಯ್ಯ

ಇದೊಂದು ಅತ್ಯಂತ ಅರ್ಥಪೂರ್ಣ ಮಾತು. ಕಲ್ಯಾಣವೆಂಬ ಹಣತೆಯಲ್ಲಿದ್ದುದು ಭಕ್ತಿರಸವೆಂಬ ಎಣ್ಣೆ; ಅಲ್ಲಿ ಆಚಾರವೆಂಬ ಬತ್ತಿಗೆ ಬಸವಣ್ಣನು ಜ್ಯೋತಿಯಾದ ಬಸವಣ್ಣ ಬರೀ ಮಾತಿನವನಲ್ಲ – ಶುಭ್ರ ಚಾರಿತ್ರ್ಯದವನು. ಅವನಿಂದಾಗಿ ಶಿವನ ಮಹಿಮೆ ಎಲ್ಲರಿಗೂ ತಿಳಿಯಿತು. ಆ ಕಾಲದಲ್ಲಿ ಎಲ್ಲರಿಗೂ ಅನುಭಾವ ಪ್ರಪಂಚದ ಆದರ್ಶ ವ್ಯಕ್ತಿಯಾಗಿದ್ದ ಅಲ್ಲಮನೇ ಬಸವಣ್ಣನನ್ನು ತನ್ನ 'ಪರಮಾರಾಧ್ಯ ಗುರು' ಎಂದು ಭಾವಿಸಿರುವುದು ಅತ್ಯಂತ ರೋಚಕ.

**ಚನ್ನಬಸವಣ್ಣ :**

1. "ಪ್ರಭುವೆಂಬ ಜಂಗಮವ ನಿರ್ಮಿಸಿದಾತ ನಮ್ಮ ಬಸವಣ್ಣ."

2. "ಬಸವಣ್ಣ ಬೋನ, ನಾನೆ ಮೇಲೋಗರವಾಗಿ
ನಿಮ್ಮ ಪರಿಯಾಣಕ್ಕೆ ವೇದಿಸಿದೆನು
ಆರೋಗಣೆಯ ಮಾಡಯ್ಯಾ ಕೂಡಲಚೆನ್ನಸಂಗಮದೇವಾ"
[ಬೋನ=ಅನ್ನ, ಆಹಾರ; ಮೇಲೋಗರ=ಸಾರು, ಹುಳಿ]

3. "ಎನ್ನಂತರಂಗವೆ ಬಸವಣ್ಣ, ಬಹಿರಂಗವೆ ಮಡಿವಾಳಯ್ಯಾ
ಈ ಉಭಯದ ಸಂಗವೆ ಪ್ರಭುದೇವರು.
ಇಂತೀ ಮೂವರ ಕರುಣದ ಕಂದನಾಗಿ ಬದುಕಿದೆ ಕಾಣಾ
ಕೂಡಲಚೆನ್ನಸಂಗಮದೇವಾ"

4. "ಬಸವ ಮೈದೊಡಿಗೆ, ಸಂಗಯ್ಯ ಮದುವಣಿಗ,
ವಸುಧೆಯ ಭಕ್ತರೆಲ್ಲರು ಮದವಳಿಗೆಯರಾಗಿ
ಅಂಗವಿಸಿಂ ಭೋ! ಶುದ್ಧ ಶಿವಾಚಾರಿಗಳೆಲ್ಲ.
ಕೂಡಲಚೆನ್ನಸಂಗಯ್ಯನು ಒಬ್ಬನೇ ಅಚಳ,
ನಾವೆಲ್ಲರೂ ನಿತ್ಯ ಮುತ್ತೈದೆಯರಾಗಿ"

5. "ಲಿಂಗದ ಪೂರ್ವಾಶ್ರಯವ ಕಳೆದು,
ಇದು ಪ್ರಾಣಲಿಂಗವೆಂದು ತೋರಬಂದನಯ್ಯಾ ಬಸವಣ್ಣನು.
ಲಾಂಛನದ ಪೂರ್ವಾಶ್ರಯವ ಕಳೆದು
ಇದು ಲಿಂಗಜಂಗಮ(ಜಂಗಮಲಿಂಗ?)ವೆಂದು
ತೋರಬಂದನಯ್ಯಾ ಬಸವಣ್ಣನು
ಪ್ರಸಾದದ ಪೂರ್ವಾಶ್ರಯವ ಕಳೆದು
ಇದು ಪ್ರಸಾದವೆಂದು ಸಮವ ಮಾಡಿ ತೋರಬಂದನಯ್ಯಾ ಬಸವಣ್ಣನು.
[ಇಂತು] ಲಿಂಗ ಜಂಗಮದ ಪ್ರಸಾದದ ಪೂರ್ವಾಶ್ರಯವ ಕಳೆಯಲೆಂದು
ಮರ್ತ್ಯಕ್ಕೆ ಜನಿಸಿದನಯ್ಯಾ ಕೂಡಲಚೆನ್ನಸಂಗನಲ್ಲಿ ಬಸವಣ್ಣನು."

**ಸಿದ್ಧರಾಮ :**

1. "ಪರಮಗುರು ಬಸವಣ್ಣ ಜಗವ ಪಾಲಿಸ ಬರಲು
ಎನ್ನ ಪರಿಭವದ ದಂದುಗ ಹರಿಯಿತ್ತಯ್ಯಾ
.......................................
ಬಸವಣ್ಣನ ನೆನಹು ಸುಖ ಸಮುದ್ರವಯ್ಯಾ
......................................."

2. "ಅಂದು ಬಸವಣ್ಣ ಬಂದು ಜರಿಯ ಹೋದುದ
ಮರೆವೆನೆ ಆ ನೋವ!
ಜರಿದುದೆ ಎನಗೆ ದೀಕ್ಷೆಯಾಯಿತ್ತು!
ಆ ದೀಕ್ಷೆಯ ಗುಣದಿಂದ ಫಲವಿದಕ್ಕೆ ದೂರವಾದೆ.
ಕಪಿಲಸಿದ್ಧಮಲ್ಲಿಕಾರ್ಜುನಯ್ಯ
ಬಸವಣ್ಣನೆನ್ನ ಪರಮಾರಾಧ್ಯ"

[ಅಲ್ಲಮನು ಸೊನ್ನಲಿಗೆಗೆ ಹೋಗಿ ಸಿದ್ಧರಾಮನಿಗೆ ಲಿಂಗದೀಕ್ಷೆ ಆಗಿಲ್ಲವೆಂದು ಆಕ್ಷೇಪಿಸಿ ಅವನನ್ನು ಕಲ್ಯಾಣಕ್ಕೆ ಕರೆತಂದು ಚನ್ನಬಸವಣ್ಣನಿಂದ ಲಿಂಗದೀಕ್ಷೆ ಕೊಡಿಸಿದ್ದು ಒಂದು ಐತಿಹಾಸಿಕ ಸತ್ಯ. ಮೇಲಿನ ವಚನ ನೋಡಿದರೆ, ಅಲ್ಲಮನಿಗಿಂತ ಮುನ್ನವೇ ಸಿದ್ಧರಾಮನ ಸಮಾಜ ಸೇವಾಕಾರ್ಯದ ವಿಷಯ ಕೇಳಿದ್ದ ಬಸವಣ್ಣ ಸೊನ್ನಲಿಗೆಗೆ ಹೋಗಿ ಅವನ ಮೈ ಮೇಲೆ ಇಷ್ಟಲಿಂಗವಿಲ್ಲದಿರುವ ವಿಷಯ ತಿಳಿದು ಅವನನ್ನು 'ಜರಿ'ದಂತೆ ಕಾಣುತ್ತದೆ. ಹಾಗೇ 'ಜರಿ'ದುದೇ ತನಗೆ ಒಂದು ಬಗೆಯ 'ದೀಕ್ಷೆ' ಎಂದು ಸಿದ್ಧರಾಮ ಕೃತಜ್ಞತೆಯಿಂದ ಸ್ಮರಿಸಿದ್ದಾನೆ. ಇನ್ನೊಬ್ಬ ವ್ಯಕ್ತಿಯ ನಿಂದೆಯು ನಿಂದೆಗೊಳಗಾದವನಿಗೆ ಒಮ್ಮೊಮ್ಮೆ ಬೆಳೆಯಲು ಸಹಾಯಕವೂ ಆಗುತ್ತದೆ! ಜರೆದವನು ಗುರು; ಜರಿಯಿಸಿಕೊಂಡವನು ಶಿಷ್ಯ!]

3. "ಅಣ್ಣನ ನೋಡಿರೆ,
ಲೋಕಕ್ಕೆ ಜಗದ ಕಣ್ಣ ಮದವ ಕಳೆವನು
ಮುಕ್ಕಣ್ಣನಿಪ್ಪೆಡೆಯ ತೋರಿಸಿದನು.
ಅಣ್ಣ ಬಸವಣ್ಣ ವಾಙ್ಮನಕ್ಕಗೋಚರನು.
......................................"

4. "...ಬಸವಾಕ್ಷರ ತ್ರಯವು ಮಂತ್ರವಯ್ಯಾ..."

[ಇಂದಿಗೂ ಈ ಮಾತು ನಿಜ.]

5. "ಭಕ್ತನಾದಡೆ ಬಸವಣ್ಣನಂತಾಗಬೇಕು
ಜಂಗಮನಾದಡೆ ಪ್ರಭುವಿನಂತಾಗಬೇಕು
ಭೋಗಿಯಾದಡೆ ನಮ್ಮ ಗುರು ಚೆನ್ನಬಸವಣ್ಣನಂತಾಗಬೇಕು
ಯೋಗಿಯಾದಡೆ ನನ್ನಂತಾಗಬೇಕು ನೋಡಯ್ಯಾ
ಕಪಿಲಸಿದ್ಧಮಲ್ಲಿಕಾರ್ಜುನಾ"

6. "ಬಸವನ ಹಾಡದರ, ಬಸವನ ಹೊಗಳದರ,
ಬಸವಾಕ್ಷರತ್ರಯ ಜಪವಿಲ್ಲದ ನೆಗೆಗೇಡಿ ಮನುಜರ
ಎನ್ನತ್ತ ತೋರದಿರಯ್ಯಾ, ತಂದೆ
ವಿಷಮಾಕ್ಷ ಕಪಿಲಸಿದ್ಧಮಲ್ಲಿಕಾರ್ಜುನಯ್ಯ"

**ನೀಲಲೋಚನೆ :**

"ಅರಿಯದ ಶಬ್ದವ ಕುರುಹಿಂಗೆ ತಂದ ಬಸವಯ್ಯನು"

**ಮುಕ್ತಾಯಕ್ಕ :**

"ಸುಮ್ಮನೇಕೆ ದಿನ ಕಳೆವಿರಿ, ಸುಮ್ಮನೇಕೆ ಹೊತ್ತುಗಳೆವಿರಿ?
ಸುಮ್ಮನೇಕೆ ಹೊತ್ತುಗಳೆವಿರಿ ಸ್ವಾಮಿಗಳಿರಾ?
ಮಾಡ ಬನ್ನಿ ದಿನ ಶಿವರಾತ್ರಿಯ, ಕೇಳ ಬನ್ನಿ ಶಿವಾನುಭವವ,
ನೋಡ ಬನ್ನಿ ಅಜಗಣ್ಣನಿರವ, ಬಸವಣ್ಣ ತಂದೆ"

[ಮಹಾ ಅನುಭಾವಿ, ಐಕ್ಯಸ್ಥಲದ ಸಂಕೇತ ಅಜಗಣ್ಣನ ಸಾವಿನಿಂದ ದುಃಖಿತಳಾದ ಅವನ ತಂಗಿ ಮುಕ್ತಾಯಕ್ಕನನ್ನು ಸಮಾಧಾನ ಪಡಿಸಲು ಬಸವಣ್ಣ ಗದಗ ಜಿಲ್ಲೆಯ ಲಕ್ಕುಂಡಿ ಪ್ರದೇಶಕ್ಕೆ ಬಂದಿದ್ದನೆಂಬುದಕ್ಕೆ ಮೇಲಿನ ವಚನ ಒಳ್ಳೆಯ ಆಧಾರ.]

**ಅಕ್ಕಮಹಾದೇವಿ :**

1. "ಸಂಗನ ಬಸವಣ್ಣನ ಪಾದವ ಕಂಡೆನಾಗಿ
ಎನ್ನ ಅಂಗ ನಾಸ್ತಿಯಾಯಿತ್ತು..."

2. "...ದೇವ ದಾನವ ಮಾನವರೆಲ್ಲರೂ
ಕಾಣಲರಿಯದೆ ಅಜ್ಞಾನದಿಂದ ಭವಭಾರಿಗಳಾದರು.
ಈ ಪರಿಯಲ್ಲಿ ಬಯಲಾಗಿ ಹೋಗಬಾರದೆಂದು ನಮ್ಮ ಬಸವಣ್ಣನು
ಜಗದ್ಧಿತಾರ್ಥವಾಗಿ ಮರ್ತ್ಯಕ್ಕೆ ಅವತರಿಸಿ
ವೀರಶೈವ ಮಾರ್ಗವನರುವುದಕ್ಕೆ
ಬಾವನ್ನ ವಿವರವನೊಳಕೊಂಡು ಚರಿಸಿದನದೆಂತೆಂದೊಡೆ..."
[ಬಾವನ್ನ=ಐವತ್ತೆರಡು]

3. "ಕಲ್ಯಾಣ ಕೈಲಾಸವೆಂಬ ನುಡಿ ಹಸನಾಯಿತ್ತು
ಒಳಗೂ ಕಲ್ಯಾಣ ಹೊರಗೂ ಕಲ್ಯಾಣ
ಇದರಂತುವನಾರು ಬಲ್ಲರಯ್ಯಾ?
ನಿಮ್ಮ ಸತ್ಯ ಶರಣರ ಸುಳುಹು ತೋರುತ್ತಿದೆಯಯ್ಯಾ
ನಿಮ್ಮ ಶರಣ ಬಸವಣ್ಣನ ಕಾಂಬೆನೆಂಬ ತವಕವೆನಗಾಯಿತ್ತು
ಕೇಳಾ ಚನ್ನಮಲ್ಲಿಕಾರ್ಜುನಾ."

**ಏಲೇಶ್ವರ ಕೇತಯ್ಯ :**

"ಬಸವೇಶ್ವರಂಗೆ ಸರ್ವಗುಣ ಶೀಲ, ಚನ್ನಬಸವಣ್ಣಂಗೆ ದಿವ್ಯಜ್ಞಾನಗುಣ ಶೀಲ
ಪ್ರಭುದೇವರಿಗೆ ಬಸವಣ್ಣ ಚೆನ್ನಬಸವಣ್ಣನ ಉಭಯಗುಣ ಶೀಲ
... ಅಕ್ಕಗಳಿಗೆ ನಿರ್ವಾಣಗುಣ ಶೀಲ..."

**ಉರಿಲಿಂಗ ಪೆದ್ದಿ :**

1. "...ಮಹಾಸತ್ಯನೂ ಬಸವಣ್ಣನೇ, ಮಹಾನಿತ್ಯನೂ ಬಸವಣ್ಣನೇ,
ಮಹಾಶಾಂತನೂ ಬಸವಣ್ಣನೇ, ಮಹಾಸುಖಿಯೂ ಬಸವಣ್ಣನೇ,
.......................................
ಬಸವ ಗುರುವೇ, ಬಸವ ಲಿಂಗವೇ, ಬಸವ ತಂದೆಯೇ
ಬಸವ ಪ್ರಭುವೇ, ನಮೋ ನಮೋ ಎನುತಿರ್ದೆನಯ್ಯಾ
ಉರಿಲಿಂಗಪೆದ್ದಿ ವಿಶ್ವೇಶ್ವರ"

2. "...ಈ ಸದ್ಭಕ್ತಿ ಬಸವಣ್ಣಂಗಲ್ಲದೆ
ಸರ್ವ ಬ್ರಹ್ಮಾಂಡದೊಳಗಣ ಸರ್ವಲೋಕದ
ದೇವ ದಾನವ ಮಾನವರಾರಿಗೂ ಅಳವಡದು, ಆರಿಗೂ ಆಗದು.
ಸದ್ಭಕ್ತಿ ಬಸವಂಗಳವಟ್ಟಿತ್ತು, ಬಸವಣ್ಣನೇ ಭಕ್ತಿಯ ಪಥವು,
ಬಸವಣ್ಣನ ನೆನೆವುದೇ ಮುಕ್ತಿಯ ಪಥವು
......................................."
[ಉರಿಲಿಂಗ ಪೆದ್ದಿ ಹುಟ್ಟಿನಿಂದ ಒಬ್ಬ ಅಸ್ಪೃಶ್ಯ]

**ಉಗ್ಘಡಿಸುವ ಗಬ್ಬಿದೇವಯ್ಯ :**

"ಜ್ಞಾನ ಬಾ, ಮಾಯೆ ಹೋಗೆಂದು ಕಳುಹುತ್ತಿದ್ದೇನೆ
ಅರಿವು ಬಾ, ಅಜ್ಞಾನ ಹೋಗೆಂದು ಕಳುಹುತ್ತಿದ್ದೇನೆ.
...ಕೂಡಲಸಂಗಮ ದೇವರಲ್ಲಿ ಬಸವಣ್ಣನ ಬಲ್ಲವರನೊಳಗೆ ಕೂಡಿ
ಅರಿಯದವರ ಹೊರಗೆ ತಡೆವುತ್ತಿದ್ದೇನೆ"

[ಈ ಶರಣ ಬಹುಶಃ ಬಸವಣ್ಣನ ಮನೆಯ ಕಾವಲುಗಾರ. ಅವನ ಅಂಕಿತ "ಕೂಡಲಸಂಗಮ ದೇವರಲ್ಲಿ ಬಸವಣ್ಣ" ಎಂಬುದು ಗಮನಾರ್ಹ.]

**ಆಯ್ದಕ್ಕಿ ಮಾರಯ್ಯ :**

"...ಅಮುಗೇಶ್ವರ ಲಿಂಗದ ಒಡಲು ಸಂಗನ ಬಸವಣ್ಣನೆಂಬುದನು
ಮಡಿವಾಳ ಮಾಚಿ ತಂದೆಗಳೆ ಬಲ್ಲರು ಕಾಣಾ ಸಂಗನ ಬಸವಣ್ಣ"

**ಆದಯ್ಯ :**

"ಶುದ್ಧ ಶೈವಂಗೆ ನೆನಹು, ವೀರಶೈವಂಗೆ ಸಂಗವೆಂತೆಂದಡೆ;
ಅತ್ಯಂತ ಮನೋರಮಣನಪ್ಪಂತಹ ಪುರುಷನ ಒಲುಮೆಯಲ್ಲಿಹ ಸ್ತ್ರೀಗೆ
ನೆನಹಿನ ಸುಖಕ್ಕಿಂತ ಸಂಗಸುಖವು ಅತ್ಯಧಿಕವಯ್ಯ"

[ಟಿಪ್ಪಣಿ : ಆದಯ್ಯನ ಈ ವಚನ ಭಾಗಕ್ಕೂ ಬಸವಣ್ಣನಿಗೂ ನೇರ ಸಂಬಂಧ ವಿಲ್ಲದಿದ್ದರೂ ಓದುಗರ ಅವಗಾಹನೆಗಾಗಿ ಮೇಲ್ಕಂಡ ವಚನ ಭಾಗವನ್ನು, ಅದರ

ಸ್ವಾರಸ್ಯಕ್ಕಾಗಿ ಕೊಟ್ಟಿದ್ದೇನೆ. ಶುದ್ಧಶೈವನು ದೂರದ ದೇವಾಲಯದ ಶಿವಲಿಂಗ ಪೂಜಿಸಿ ಬರುವವನು; ವೀರಶೈವ ಇಷ್ಟಲಿಂಗವನ್ನು ಸದಾ ಧರಿಸಿರುವವನು. ಸ್ತ್ರೀಗೆ ಪುರುಷನ ನೆನಹಿನ ಸುಖಕ್ಕಿಂತ ಸಂಗಸುಖವೇ ಶ್ರೇಷ್ಠ – ಅರ್ಥಾತ್ ಶುದ್ಧ ಶೈವಕ್ಕಿಂತ ವೀರಶೈವವೇ ಶ್ರೇಷ್ಠ.]

**ಅರಿವಿನ ಮಾರಿತಂದೆ :**

"ಸದ್ಯೋಜಾತ ಮುಖನೆ ಎನಗೆ ಬಸವಣ್ಣನಯ್ಯಾ,
ವಾಮದೇವ ಮುಖನೆ ಎನಗೆ ಚನ್ನಬಸವಣ್ಣನಯ್ಯಾ,
ಅಘೋರ ಮುಖನೆ ಎನಗೆ ಮಡಿವಾಳನಯ್ಯಾ,
ತತ್ಪುರುಷ ಮುಖನೆ ಎನಗೆ ಸಿದ್ಧರಾಮನಯ್ಯಾ,
ಈಶಾನ ಮುಖನೆ ಎನಗೆ ಪ್ರಭುದೇವರಯ್ಯಾ,
ಹೃದಯ ಮುಖನೆ ಎನಗೆ ಗಣಂಗಳಯ್ಯಾ,
ಇಂತಿವರ ಶ್ರೀಚರಣದಲ್ಲಿ ಉರಿಯುಂಡ ಕರ್ಪುರದಂತೆ ಬೆರಸಿದೆನಯ್ಯಾ
ಸದಾಶಿವಮೂರ್ತಿಲಿಂಗದಲ್ಲಿ."

**ಅಂಗಸೋಂಕಿನ ಲಿಂಗತಂದೆ :**

"ಎನ್ನ ಕಾಯದ ಕದಳಿಯೆ ಸಂಗನಬಸವಣ್ಣನು,
ಎನ್ನ ಜೀವನದ ಸುಮನವೆ ಚೆನ್ನಬಸವಣ್ಣನು,
ನನ್ನ ಭಾವದ ಬಲುಹೆ ಪ್ರಭುದೇವರು,
.......................................
......................................."

**ಡೋಹರ ಕಕ್ಕಯ್ಯ :**

"ಎನಗೆ ಗುರುಸ್ಥಲವ ತೋರಿದಾತ ಸಂಗನಬಸವಣ್ಣನು
ಎನಗೆ ಲಿಂಗಸ್ಥಳವ ತೋರಿದಾತ ಚನ್ನಬಸವಣ್ಣನು,
.......................................
ಎನಗೆ ನಿಜಸ್ಥಲವ ತೋರಿದಾತ ಪ್ರಭುದೇವರು
......................................."

**ಗಾವುದಿ ಮಾಚಯ್ಯ :**

"ಎನ್ನಂತರಂಗವೆ ಬಸವಣ್ಣನಯ್ಯಾ,
ಎನ್ನ ಬಹಿರಂಗವೆ ಚನ್ನಬಸವಣ್ಣನಯ್ಯಾ,
ಎನ್ನ ಸರ್ವಾಂಗವೆ ಪ್ರಭುದೇವರಯ್ಯಾ,

ಇಂತಿವರ ಕರುಣದ ಕಂದನಾಗಿ ಬದುಕಿದೆನಯ್ಯಾ,
ತ್ರಿಪುರಾಂತಕ ಲಿಂಗದಲ್ಲಿ ಗಾವುದಿ ಮಾಚಯ್ಯ ಹೇಳಿದುದ ದಿಟವೆನ್ನಿರಣ್ಣಾ"

[ಇವನ ಅಂಕಿತವು ಬಸವಕಲ್ಯಾಣದ ಹೊರ ಅಂಚಿನ ತ್ರಿಪುರಾಂತಕೇಶ್ವರ, ತ್ರಿಪುರಾಂತಕ ಕೆರೆ ಅವಲಂಬಿಸಿ ರೂಪಿತವಾದದ್ದು.]

**ಮೋಳಿಗೆ ಮಾರಯ್ಯ :**

"ಬ ಎಂಬಲ್ಲಿ ಬಳಿಸಂದೆನು
ಸ ಎಂಬಲ್ಲಿ ಸಯವಾದೆನು
ವ ಎಂಬಲ್ಲಿ ನಿರವಯವಾದೆನು
ನಿಃಕಳಂಕ ಮಲ್ಲಿಕಾರ್ಜುನಾ,
ಬಸವಣ್ಣನ ನಿಜಪದದಲ್ಲಿ ಸಂದಿಲ್ಲದೆ ಬೆರಸಿ
ನಮೋ ನಮೋ ಎಂಬ ಹಂಗಳಿದುಳಿದೆನು"

**ಮೇದರ ಕೇತಯ್ಯ :**

"ಎನ್ನ ಭಕ್ತಿ ಬಸವಣ್ಣನಲ್ಲಿ ಬಯಲಾಯಿತ್ತು;
ಎನ್ನ ಜ್ಞಾನ ಚನ್ನಬಸವಣ್ಣನಲ್ಲಿ ಬಯಲಾಗಿತ್ತು;
ಎನ್ನ ವೈರಾಗ್ಯ ಪ್ರಭುದೇವರಲ್ಲಿ ಬಯಲಾಗಿತ್ತು;
ಇಂತೀ ಮೂವರು ಒಬ್ಬರೊಂದು ಬಯಲ ಮಾಡಿದರಾಗಿ
ಗವರೇಶ್ವರ ಲಿಂಗದಲ್ಲಿ ನಿಶ್ಚಿಂತವಾಯಿತ್ತು."

**ಮಾದಾರ ಧೂಳಯ್ಯ :**

"ಬಸವಣ್ಣನ ಡಿಂಗರಿಗನಯ್ಯಾ,
ಚನ್ನಬಸವಣ್ಣನ ಹಳೆಯನಯ್ಯಾ
ಪ್ರಭುದೇವರ ಬಂಟನಯ್ಯಾ
ಮಡಿವಾಳಯ್ಯನ ಲೆಂಕನಯ್ಯಾ
ಸಿದ್ಧರಾಮಯ್ಯನ ಭೃತ್ಯನಯ್ಯಾ
ಇಂತೀ ಐವರ ಒಕ್ಕು-ಮಿಕ್ಕ ಶೇಷಪ್ರಸಾದವನುಂಡು
ಬದುಕಿದೆನಯ್ಯಾ..."

**ಮಡಿವಾಳ ಮಾಚಿದೇವ :**

1. "ಹೊಗಬಾರದು ಕಲ್ಯಾಣವನಾರಿಗೆಯೂ
ಹೊಕ್ಕಡೇನು? ಕಲ್ಯಾಣದ ಸ್ಥಾನಮಾನಂಗಳ ನುಡಿಯಬಾರದು
ಈ ಕಲ್ಯಾಣದ ಕಡೆಯ ಕಾಣಬಾರದು.

ಕಲ್ಯಾಣದೊಳಗೆ ಹೊಕ್ಕೆಹೆವೆಂದು ಕಲ್ಯಾಣಚರಿತ್ರರಾದೆಹೆವೆಂದು
ದೇವ ಮಾನವ ದಾನವರೆಲ್ಲರೂ ಭಾವಿಸುತ್ತಿರ್ದರು ನೋಡಯ್ಯಾ ಕಲ್ಯಾಣವನು
ಅನಂತಮೂರ್ತಿಗಳು ಅನಂತ ಸ್ಥೂಲಮೂರ್ತಿಗಳು
ಅನಂತ ಸೂಕ್ಷ್ಮಮೂರ್ತಿಗಳು ಅನಂತ ಮಂತ್ರಧ್ಯಾನರೂಪರು
ಪುಣ್ಯಕ್ಕೆ ಅಭಿಲಾಷೆಯ ಮಾಡುವವರು ಪೂಜ್ಯರು ಯೋಗಿಗಳು
ಭೋಗಿಗಳು ದ್ವೈತರು ಅದ್ವೈತರು ಕಾಮಿಗಳು ನಿಷ್ಕಾಮಿಗಳು ಆಶ್ರಿತರು
ಅದೆಂತು ಹೊಗಬಹುದಯ್ಯಾ ಕಲ್ಯಾಣವನು?
ಲಿಂಗದೃಷ್ಟಾಂಗಲ್ಲದೆ ಲಿಂಗವೇದ್ಯಂಗಲ್ಲದೆ
ಲಿಂಗಗಂಭೀರಂಗಲ್ಲದೆ ಪ್ರಸಾದ ಕುಳಾನ್ವಯಂಗಲ್ಲದೆ
ಆಸೆಗೆಡೆಗುಡದಿಪ್ಪುದೆ ಕಲ್ಯಾಣ.
ಸರ್ವಾಂಗ ವರ್ಣವಳಿದು ಕುಲಮದ ತಲೆದೋರದೆ
ಭಕ್ತಿ ನಿತ್ಯವಾದುದೆ ಕಲ್ಯಾಣ
ಈ ಕಲ್ಯಾಣವೆಂಬ ಮಹಾಪುರದೊಳಗೆ
ಬಸವಣ್ಣನೂ ನಾನೂ ಕೂಡಿ ಹದುಳಿರ್ದೆವು ಕಾಣಾ ಕಲಿದೇವಯ್ಯಾ"

[ಈ ವಚನದಲ್ಲಿ ರಾಜಧಾನಿ ಕಲ್ಯಾಣದಲ್ಲಿದ್ದ ವಿವಿಧ ಧರ್ಮ, ವೃತ್ತಿ, ಸ್ವಭಾವದ ಜನರ ಸೂಚನೆಯ ಜೊತೆಗೆ, ಮನುಷ್ಯ ನಿಜವಾದ 'ಕಲ್ಯಾಣ'ದಲ್ಲಿರ ಬೇಕಾದ ಮಾನಸಿಕ ಸ್ಥಿತಿಯನ್ನೂ ಹೇಳಿದ್ದಾನೆ.]

2. "ಬಿಂದುವ ಹರಿದೆಯಲ್ಲಾ ಬಸವಣ್ಣ
ನಾದವ ಸಿಂಹಾಸನವ ಮಾಡಿಕೊಂಡು
ಇದ್ದೆಯಲ್ಲಾ ಬಸವಣ್ಣಾ
......................................
ಭಕ್ತಿಯ ಹರಹಿ ಹೋದೆಯಲ್ಲಾ ಬಸವಣ್ಣ
......................................
ಬೆಳಗನುಟ್ಟು ಬಯಲಾಗಿ ಹೋದನು ನಮ್ಮ ಬಸವಲಿಂಗನು
ಬಸವಣ್ಣ ಬಸವಣ್ಣ ಬಸವಣ್ಣ ಎನಲಮ್ಮೆನು
ಎನ್ನ ವಾಙ್ಮನಕ್ಕಗೋಚರನಾಗಿ,
ಬಸವಣ್ಣಂಗೆ ಶರಣೆಂಬ ಪಥವ ತೋರಯ್ಯಾ
ಕಲಿದೇವರ ದೇವಾ."

[ಬಸವಣ್ಣನು ಲಿಂಗೈಕ್ಯನಾದ ಬಳಿಕ ರಚಿತವಾಗಿದೆ ಈ ವಚನ.]

3. "ಬಸವಣ್ಣನ ನೆನೆವುದೆ ಷೋಡಶೋಪಚಾರ.
ಬಸವಣ್ಣನ ನೆನೆವುದೆ ಪರಮತತ್ವ
ಬಸವಣ್ಣನ ನೆನೆವುದೆ ಮಹಾನುಭಾವ

ಕಲಿದೇವಾ, ನಿಮ್ಮ ಶರಣ ಬಸವಣ್ಣನ ನೆನೆದು
ಸಮಸ್ತಗಣಂಗಳೆಲ್ಲರೂ ಅತಿಶುದ್ಧರಾದರಯ್ಯಾ."

4. "...ದ್ವೈತನಲ್ಲ ಅದ್ವೈತನಲ್ಲ ಬಸವಣ್ಣ
ಭಾವಿಯಲ್ಲ ನಿರ್ಭಾವಿಯಲ್ಲ ಬಸವಣ್ಣ
ದೇಹಿಯಲ್ಲ ನಿರ್ದೇಹಿಯಲ್ಲ ಬಸವಣ್ಣ, ಖಂಡಿತನಲ್ಲ ಅಖಂಡಿತನಲ್ಲ ಬಸವಣ್ಣ
ಇಂತಪ್ಪ ಬಸವಣ್ಣಂಗೆ ಆವ ಗುಣಂಗಳೂ ಇಲ್ಲ.
ನಿರ್ಗುಣ ನಿರಂಜನ ನಿಸ್ಸೀಮ ಶಿವನು
ಬಸವಣ್ಣನೊಡನೆ ಆಡುತಿಪ್ಪನು ಹಾಡುತಿಪ್ಪನು
......................................."

[ಬಸವಣ್ಣನೊಡನೆ ಭಾವುಕ ಸಂಬಂಧ ಹೊಂದಿದ್ದ ಸ್ತ್ರೀಯರಲ್ಲಿ ಪತ್ನಿ ನೀಲಲೋಚನೆ ಪ್ರಥಮಳು; ಪುರುಷರಲ್ಲಿ ಮಡಿವಾಳ ಮಾಚಿದೇವ ಪ್ರಥಮ.]

**ಬಾಹೂರ ಬೊಮ್ಮಣ್ಣ :**

"...ಇಂತಿವು ಭಾವದ ಬಲ್ಮೆ, ಸತ್ಯದ ಚಿತ್ತ, ಚಿತ್ತದ ಹೆಚ್ಚುಗೆ,
ಇಂತೀ ಗುಣ ಸಂಗನಬಸವಣ್ಣನ ಉತ್ಸಾಹ
ಬ್ರಹ್ಮೇಶ್ವರ ಲಿಂಗವನರಿವುದಕ್ಕೆ ನಿಶ್ಚಯದ ವಿಶ್ವಾಸ"

**ಬಹುರೂಪಿ ಚೌಡಯ್ಯ :**

"ಇನ್ನಾಡುವೆ ಜಂಗಮ ಬಹುರೂಪ
ಕಲ್ಯಾಣವೆಲ್ಲಾ ಅರಿಯಬೇಕೆಂದು
ಎನ್ನ ಬಹುರೂಪ ಕಾಮ ಹೊಯ್ದುಕೊಂಡಿದೆಯೆಂದಡೆ
ಪ್ರಸಾದವ ಮಾಡಿಕೊಟ್ಟಡೆ, ಇದು ಬಸವನ ಪ್ರಸಾದವೆಂದು ಕೈಗೊಂಡೆ ಕಾಣಾ
ರೇಕಣ್ಣಪ್ರಿಯ ನಾಗಿನಾಥಾ, ಬಸವನಿಂದ ಬದುಕಿತೀ ಲೋಕವೆಲ್ಲ"
[ಬಹುರೂಪ=ಹಲವು ವೇಷ ಧರಿಸಿ ಆಡುವ ಏಕಪಾತ್ರಾಭಿನಯದ ಆಟ]

**ದಾಸೋಹದ ಸಂಗಣ್ಣ :**

"...ಸ್ಥಲವೆರಡು, ಆಚರಣೆ ನಾಲ್ಕು,
ಇಂತೀ ಭೇದವಾರರಲ್ಲಿ ಷಡುಸ್ಥಲ ಸಂದು,
ಸಂಗನಬಸವಣ್ಣ ಚನ್ನಬಸವಣ್ಣನಿಂದ
ಪ್ರವಾಹವಾಗಿ ಭಕ್ತಿ ರೂಪವಾಯಿತ್ತು.
ಶಂಭುವಿನಿಂದಿತ್ತ ಸ್ವಯಂಭುವಿನಿಂದತ್ತ ಅತಿಬಳ ನೋಡಾ
ಮಾತುಳುಂಗ ಮಧುಕೇಶ್ವರನು."

[ದಾಸೋಹ ಸಂಗಣ್ಣ ಬನವಾಸಿಯ ಮಧುಕೇಶ್ವರನ ಭಕ್ತ. ಅವನ ಅಂಕಿತ

"ಮಾತುಳುಂಗ ಮಧುಕೇಶ್ವರ" ಗಮನಿಸಿದರೆ, ಲಕುಲೀಶನ ವಿಗ್ರಹಗಳಲ್ಲಿ ಕಾಣ ಬರುವ ಮಾತುಳಂಗ ಫಲವು ಜ್ಞಾಪಕಕ್ಕೆ ಬರುವುದಲ್ಲದೆ, ಬಳ್ಳಿಗಾವೆಯ ಸಮೀಪದ ಬನವಾಸಿಯೂ ಕೂಡ ಒಂದು ಲಕುಲೀಶ ಪಾಶುಪತರ ಕೇಂದ್ರವಾಗಿದ್ದಿತೆಂದು ಹೇಳಿದರೆ ಅದು ಊಹೆಯಾಗುವುದಿಲ್ಲ. ಬನವಾಸಿಯ ಮಧುಕೇಶ್ವರನ ಅರ್ಚಕರು ಸ್ಮಾರ್ತ ಬ್ರಾಹ್ಮಣರಾದರೂ ಅದರ ಉಸ್ತುವಾರಿ 'ಒಡೆಯರು' ಎಂಬ ವೀರಶೈವ ವರ್ಗ ದವರ ಕೈಲಿದೆ. 'ಒಡೆಯರ್' ಎಂಬುದು ದೇವಾಲಯದ ಮುಖ್ಯಾಧಿಕಾರಿಗಳಾಗಿದ್ದ ಶಾಸನೋಕ್ತ 'ಸ್ಥಾನಪತಿ' ಅಥವಾ 'ಸ್ಥಾನಿಕ'ರನ್ನು ಜ್ಞಾಪಿಸುತ್ತದೆ.]

**ಅಜ್ಞಾತ ಶರಣ :**

"ಬಸವಣ್ಣನ ನೆನೆವುತ್ತ ನೆನೆವುತ್ತ ಗುರುವ ಕಂಡೆ"

**ಸೊಡ್ಡಳ ಬಾಚರಸ :**

"ನಿಜತತ್ವದ ನಿರ್ವಯಲು ನಿರ್ವಾಹವಾಯಿತ್ತು.
ನೆನೆವರ ಪರುಷ ಘನವನೊಡಗಲಿಸಿತ್ತು
ಭಕ್ತರ ಭಾಗ್ಯ ಮುಕ್ತಿಯನ್ನೈದಿತ್ತು
ಬಸವಣ್ಣ ಚನ್ನಬಸವಣ್ಣನ ಮಹಾಮನೆಯಲ್ಲಿ
ಮಹಾದಾನಿ ಸೊಡ್ಡಳನ ಶರಣ ಪ್ರಭುದೇವರು
ನಿರವಯ ಬೆರಸಲೊಡನೆ, ಸತ್ಯಲೋಕದ ಬಾಗಿಲ ಕದವು ತೆರೆದಿತ್ತು"

**ಸಂಗಮೇಶ್ವರದ ಅಪ್ಪಣ್ಣ :**

"ಉಪ್ಪರಗುಡಿ ತೋರಣ ಕಟ್ಟಿತ್ತು ಕಲ್ಯಾಣದಲ್ಲಿ
ಅಷ್ಟದ್ವಾರದಂಗಡಿ ರಾಜವೀಥಿಯೊಳೆಲ್ಲಾ ವ್ಯಾಸನ ಬಾಹುಗಳುಪ್ಪರಿಸಿದುವು
ಎಂಟು ಬಾಗಿಲಲ್ಲಿ ನಡೆಮಡಿಗಳ ಹಾಸಿ
ಸಂಕಲ್ಪ ಸಂತೋಷವ ಮಾಡಿದನು ವೃಷಭೇಶ್ವರನು
ಬಸವ ಪ್ರಿಯ ಕೂಡಲಸಂಗಯ್ಯ ಬಂದಾನೆಂದು."

[ಇಲ್ಲಿಯ 'ವೃಷಭೇಶ್ವರ'ನು ಬಸವಣ್ಣ ಎಂದು ಅರ್ಥೈಸಿದರೆ, ಈ ವಚನವು ಮಂಗಳವಾಡದಿಂದ ಕಲ್ಯಾಣಕ್ಕೆ ಬಿಜ್ಜಳನು ರಾಜಧಾನಿ ಸ್ಥಳಾಂತರಿಸಿದಾಗ ಅವನ ಜೊತೆ ಬಸವಣ್ಣನೂ ಬರುವ ಸುದ್ದಿ ಕೇಳಿ ಅಪ್ಪಣ್ಣ ಅತ್ಯಂತ ಹರ್ಷಗೊಂಡ ಸಂಗತಿ ಮೇಲಿನ ವಚನದಲ್ಲಿರುವಂತಿದೆ.]

**ವೈದ್ಯ ಸಂಗಣ್ಣ :**

"ಕಕ್ಕಯ್ಯನೆನಗೆ ಕಾಮಧೇನುವಯ್ಯಾ, ಚೆನ್ನಯ್ಯನೆನಗೆ ಕಲ್ಪವೃಕ್ಷವಯ್ಯಾ
ಹಳ್ಳಯ್ಯನೆನಗೆ ಚಿಂತಾಮಣಿಯಯ್ಯಾ

ಕೆಂಬಾವಿಯ ಭೋಗಯ್ಯನೆನಗೆ ಸುಧಾಬ್ಧಿಯಯ್ಯಾ
ಶಿವನಾಗಯ್ಯನೆನಗೆ ಪರುಷದ ಗಿರಿಯಯ್ಯಾ
ಇಂತೀ ಐವರ ಕಾರುಣ್ಯ ಪ್ರಸಾದವ ಕೊಂಡು ಬದುಕಿದೆನಯ್ಯಾ
ಮರುಳ ಶಂಕರ ಪ್ರಿಯ ಸಿದ್ಧರಾಮೇಶ್ವರಯ್ಯಾ"

[ಇವರಲ್ಲಿ ಕಕ್ಕಯ್ಯ, ಚನ್ನಯ್ಯ, ಹಳ್ಳಯ್ಯ (ಹರಳಯ್ಯ), ಶಿವನಾಗಿಮಯ್ಯ ಹುಟ್ಟಿನಿಂದ ಅಸ್ಪೃಶ್ಯ ಶಿವಭಕ್ತರಾದರೆ, ಕೆಂಬಾವಿ ಭೋಗಣ್ಣ ಹುಟ್ಟಿನಿಂದ ಮೇಲ್ಜಾತಿಯವನಾದರೂ ಶಿವಭಕ್ತರಲ್ಲಿ ಜಾತಿ ಭೇದವನ್ನೆಣಿಸದಿದ್ದ ವ್ಯಕ್ತಿ; ಆ ಅವನೂ ಇತರರ ದೃಷ್ಟಿಯಿಂದ ಅಸ್ಪೃಶ್ಯನೇ. ಒಂದು ರೀತಿಯಲ್ಲಿ 'ವೈದ್ಯ' ಸಂಗಣ್ಣ ತನ್ನ ವಚನದಲ್ಲಿ ಐವರು ಅಸ್ಪೃಶ್ಯರ ಕರುಣೆಯ ಪ್ರಸಾದವನ್ನು ಸ್ವೀಕರಿಸಿದವನು ತಾನು ಎಂದು ಹೇಳಿಕೊಂಡಿದ್ದಾನೆ. ಈ ಜಾತಿ ಸಮಾನತೆಗೆ ಬಸವಣ್ಣ ಮುಖ್ಯ ಕಾರಣ.]

**ಲದ್ದೆಯ ಸೋಮ :**

"ಆವ ಕಾಯಕವಾದರೂ ಸ್ವಕಾಯಕವ ಮಾಡಿ
ಗುರುಲಿಂಗ ಜಂಗಮದ ಮುಂದಿಟ್ಟು
ಒಕ್ಕುದ ಹಾರೈಸಿ, ಮಿಕ್ಕಿದ ಕೈಕೊಂಡು,
ವ್ಯಾಧಿ ಬಂದಡೆ ನರಳು, ಬೇನೆ ಬಂದಡೆ ಒರಲು,
ಜೀವ ಹೋದರೆ ಸಾಯಿ, ಇದಕ್ಕಾ ದೇವರ ಹಂಗೇಕೆ?
ಭಾಪು ಲದ್ದೆಯ ಸೋಮಾ!"

[ಬಂದದ್ದನ್ನು ನೇರವಾಗಿ ಎದುರಿಸುವ ಧೈರ್ಯವನ್ನು ತುಂಬುವ ಈ ವಚನ ಅಪೂರ್ವವಾದುದು. ಎಲ್ಲ ಭಾರವನ್ನೂ ದೇವರ ಮೇಲೆ ಹೊರಿಸುವ 'ವಿಧಿವಾದ' ವನ್ನು ಇವನು ಒಪ್ಪುವುದಿಲ್ಲ.]

**ಸತ್ತಿಗೆ ಕಾಯಕದ ಮಾರಯ್ಯ :**

"...ಸಂಗನ ಬಸವಣ್ಣಂಗೆ ನೆಳಲು ಹಿಂಗಿದಾಗಲೇ ಕಾಯಕ
ಕಾಯಕ ನಿಂದುದೆಂಬ ಭಾಷೆ.
ಎನಗೆ ಐಘಂಟೇಶ್ವರ ಅಂಗವಿಲ್ಲ ಎಂಬ ಶಪಥ."

**ಸಕಲೇಶ ಮಾದರಸ :**

1. "ಈಶನಿಂದತ್ತ ಹಿರಿಯರಿಲ್ಲ, ಆಸೆಯಿಂದತ್ತ ಕಿರಿಯರಿಲ್ಲ.
ದೆಸೆಯಿಂದತ್ತ ದಿಕ್ಕಿಲ್ಲ, ಜಪದಿಂದತ್ತ ಪುಣ್ಯವಿಲ್ಲ
ಸಚರಾಚರದೊಡೆಯ ಸಕಳೇಶ್ವರ ದೇವರ ವಿಚಾರದಿಂದತ್ತ ಸಹಾಯವಿಲ್ಲ."

2 "ಆಸೆಯಿಂದ ಬಿಟ್ಟು ಕಿರಿಯರಿಲ್ಲ, ನಿರಾಶೆಯಿಂದ ಬಿಟ್ಟು ಹಿರಿಯರಿಲ್ಲ
ದಯದಿಂದ ಬಿಟ್ಟು ಧರ್ಮವಿಲ್ಲ, ವಿಚಾರದಿಂದ ಬಿಟ್ಟು ಸಹಾಯಿಗಳಿಲ್ಲ
ಸಚರಾಚರಕ್ಕೆ ಸಕಳೇಶ್ವರನಿಂದ ಬಿಟ್ಟು ದೈವನಿಲ್ಲ"

[ಈ ವಚನಗಳಲ್ಲಿ ಬಸವಣ್ಣನ ಉಲ್ಲೇಖವಿಲ್ಲ. ಮನುಷ್ಯನಿಗೆ ನಿಜವಾದ ಸಹಾಯಕ ಅಥವಾ ಮಾರ್ಗದರ್ಶಿ ಅವನ ವೈಚಾರಿಕ ಶಕ್ತಿಯೊಂದೇ ಎಂಬ ಮಾತು ಬಹು ಅರ್ಥಪೂರ್ಣ.]

## ವಚನೋತ್ತರ ಕಾಲದವರ ಕೆಲವು ಭಾವನೆಗಳು

**ಹರಿಹರ :**

"ಬಸವನ ಮಾತೆ ಮಾತು ಬಸವಣ್ಣನ ಭಕ್ತಿಯ ಓಜೆಯೋಜೆ ಕೇಳ್
ಬಸವನ ರೀತಿ ರೀತಿ ಬಸವಣ್ಣನ ಕಿಂಕರ ವೃತ್ತಿ ವೃತ್ತಿ ಮೇಣ್
ಬಸವನ ಬಟ್ಟೆ ಬಟ್ಟೆ ಬಸವಣ್ಣನ ಬಿಂಕದ ಭಾಷೆ ಭಾಷೆ ಹೋ
ಬಸವನ ನಿಷ್ಠೆ ನಿಷ್ಠೆ ಬಸವಣ್ಣನ ನೇಮವೆ ನೇಮವುರ್ವಿಯೊಳ್ ॥"

[ಹರಿಹರನ ಪ್ರಕಾರ, ಶರಣರು ಬಸವನನ್ನು ಹೊಗಳಿದ ರೀತಿ ಇದು; ಅದು ಹರಿಹರನ ಮನದಾಳದ ಬಸವಸ್ತೋತ್ರ.]

**ಸ್ವತಂತ್ರ ಸಿದ್ಧಲಿಂಗೇಶ್ವರ :**

"ಸೋಹಂ ಎನ್ನದೆ ದ್ವೈತಾದ್ವೈತವ ಮೀರಿದ
ಪ್ರಸಾದಿ ಸಂಗನ ಬಸವಣ್ಣನ ಸುಖಾತಿಶಯವೆನೇನೆಂದುಪಮಿಸುವೆನಯ್ಯಾ
ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ"

**ಗುಮ್ಮಳಾಪುರದ ಸಿದ್ಧಲಿಂಗದೇವ :**

"ಆ ಬಸವಣ್ಣನೆ ಎನಗೆ ಇಷ್ಟ ಬ್ರಹ್ಮ"
"ಇಷ್ಟಾರ್ಥಸಿದ್ಧಿಯನೀವುತಿಪ್ಪ ಬಸವಣ್ಣನ ಭೃತ್ಯರ ಭೃತ್ಯರ ತದ್ ಭೃತ್ಯನಾಗಿರಿಸಿ
ಬಸವಣ್ಣನ ಪಡುಗ ಪಾದರಕ್ಷೆಯ ಹಿಡಿವ ಭಾಗ್ಯವಯೆನಗೀವುದಯ್ಯಾ..."

**ತೋಂಟದ ಸಿದ್ಧಲಿಂಗ ಶಿವಯೋಗಿ :**

"ಬಸವಣ್ಣ ಪ್ರಸಾದದಿಂದ ಭಕ್ತಿಜ್ಞಾನ ವೈರಾಗ್ಯ ಸಂಪನ್ನನಾದೆನಯ್ಯಾ,
ಚೆನ್ನಬಸವಣ್ಣನ ಪ್ರಸಾದದಿಂದ ಷಟ್ಸ್ಥಲಜ್ಞಾನ ಸಂಪನ್ನನಾದೆನಯ್ಯ
ಪ್ರಭುದೇವರ ಪ್ರಸಾದದಿಂದ ಪರಶಿವತತ್ವ ಸ್ವರೂಪವೇ

ಎನ್ನ ಸ್ವರೂಪವೆಂದರಿದು
ಸಮಸ್ತ ಸಂಸಾರ ಪ್ರಪಂಚ ಕೊಡಹಿದೆನು ನೋಡಾ..."

**ದೇಶಿಕೇಂದ್ರ ಸಂಗನಬಸವಯ್ಯ :**

"ಬಸವಣ್ಣನ ಮುಖದಿಂದ ಅಸಂಖ್ಯಾತ ಪ್ರಮಥರ ಕಂಡೆನಯ್ಯಾ
ಚನ್ನಬಸವಣ್ಣನ ಮುಖದಿಂದ ಗಣಸನ್ನಿಹಿತ ಮಹಾನುಭಾವ ಸುಖಿಯಾದೆನಯ್ಯ
ಪ್ರಭುವಿನ ಮುಖದಿಂದ ಮಹದಾನಂದ ಪರಿಣಾಮಿಯಾಗಿರ್ದೆನಯ್ಯಾ..."

**ಹೇಮಗಲ್ಲ ಹಂಪ :**

"ಬಸವಣ್ಣನ ಸೆರಗ ಸೋಂಕಿದ ಮನುಜರೆಲ್ಲ
ಶಿವಗಣಂಗಳಾಗದಿಹರೇನಯ್ಯಾ?
ಇದು ಕಾರಣ,
ಬಸವಣ್ಣನ ವಚನಾಮೃತವ ದಣಿಯಲುಂಡು ತೇಗಿದರೆ
ಪಾತಕಕೋಟಿ ಪರಿಹಾರವಾಗದಿಹುದೇನಯ್ಯಾ
ಪರಮಗುರು ಪಡುವಿಡಿ ಸಿದ್ಧಮಲ್ಲಿನಾಥ ಪ್ರಭುವೇ"

**ತೆಲುಗು ಕವಿ ಪಾಲ್ಕುರಿಕೆ ಸೋಮನಾಥ**
**(ಕ್ರಿ.ಶ. 1250–1300) :**

ತೆಲುಗಿನಲ್ಲಿ "ಬಸವಪುರಾಣಮು" ಬರೆದಿರುವ ಪಾಲ್ಕುರಿಕೆ ಸೋಮನಾಥ ತನ್ನ ಇತರ ಕೃತಿಗಳಲ್ಲಿಯೂ ಬಸವನನ್ನು ಭಾವುಕವಾಗಿ ಸ್ತೋತ್ರ ಮಾಡಿದ್ದಾನೆ. ಉದಾಹರಣೆಗೆ –

1. "ಬಸವ ಗೋತ್ರುಂಡನು ಬಸವನಿ ಕರುಣ
ಬಸವವೇಶು ಶ್ರೀ ಪಾದಪದ್ಮ ಸೇವಕುಂಡ
ಬಸವನ್ನ ಬೊಗಡ ಬಾಲ್ಪಡು ಕವೀಂದ್ರುಡಮು
ಬಸವನ್ನ ಬೊಗಡ ಬಾಲ್ಯಡು ಪಾಠಕುಂಡ
ಬಸವನ್ನ ದೂತ ನೇ ಬಸವನ್ನ ಬಂಟ
ಬಸವನ್ನ ಲೆಂಕ ನೇ ಬಸವನ್ನ ಲೆಂಗಿ
ಬಸವನ್ನಯಿಲವುಟ್ರು ಬಾನಿಸ ಕೊಡುಗ..."

(–ಪಂಡಿತಾರಾಧ್ಯ ಚರಿತ್ರಮು)

[ನಾನು ಬಸವ ಗೋತ್ರದವನು, ಬಸವನ ಪಾದಪದ್ಮ ಸೇವಕ, ಬಸವನ ಸ್ತುತಿ ಪಾಠಕ, ಬಸವನ ದೂತ, ಬಸವನ ಲೆಂಕ, ಬಸವನ ಮನೆಮಗನ ದಾಸ ಇತ್ಯಾದಿ.]

2. "ನಾ ಯೆಡಮುಂಡ ನಾ ವಿಭುಡ ನಾ ಹೃದಯೇಶ್ವರ ನಾ ಮನೋರಮಾ
ನಾ ಯಿಲವೇಲ್ಪು ನಾ ವರುಡ ನಾ ಗುರುಲಿಂಗಮು ನಾದು ಜಂಗಮಾ
ನಾ ಯಧಿನಾಥ ನಾ ವರದನನ್ನುಗೃಪಾಮತಿ ಭೋವುಮಯ್ಯ ದೇ
ನಾ, ಯಮಿ ಬೃಂದವಂದ್ಯ ಬಸವಾ! ಬಸವಾ! ಬಸವಾ! ವೃಷಾಧಿಪಾ ॥"

(–ವೃಷಾಧಿಪಶತಕಂ)

[ನೀನೇ ನನ್ನ ದೈವ, ನೀನೇ ಗುರು, ನೀನೇ ಹೃದಯೇಶ್ವರ, ನೀನೇ ನನ್ನ ಗುರುಲಿಂಗ ಜಂಗಮ, ನೀನೇ ನನ್ನ ಆದಿನಾಥ, ದಯಾಪಾಲ, ಓ ಬಸವಾ ಬಸವಾ ಬಸವಾ – ನಾನು ಹೊಗಳಲಾರೆ, ನನ್ನನ್ನು ರಕ್ಷಿಸು, ನೀನೇ ಅನುಗ್ರಹಿಸು ಬಸವಾ, ಬಸವಾ, ವೃಷಾಧಿಪ.]

3. "ಕುಣಿಯುತಿರ್ಪೆ ನಾನು ನೀನು ಕುಣಿಸಿದಂತೆ ಬಸವಲಿಂಗ
ಮರೆತು ಬಿಡದೆ ಕರವ ಪಿಡಿದು ರಕ್ಷಿಸೆನ್ನ ಬಸವಲಿಂಗ
ಕಣ್ಣಮನಕೆ ತೆರಪು ಕೊಟ್ಟು ಎನ್ನ ಕಾಯೊ ಬಸವಲಿಂಗ
ಸೆರಗನೊಡ್ಡಿ ಬೇಡಿಕೊಂಬೆ ಕರುಣಿಸಯ್ಯ ಬಸವಲಿಂಗ
ಹೀನ ದೆಸೆಯ ಬಿಡಿಸಿ ಎನಗೆ ದೃಶ್ಯನಾಗೊ ಬಸವಲಿಂಗ
ಊನವಿರದ ತೆರದೆ ಸಮಾಧಾನಮಾಡೊ ಬಸವಲಿಂಗ
ಅಭಯವಿತ್ತು ಎನ್ನ ಇಷ್ಟ ಆಲಿಸಯ್ಯ ಬಸವಲಿಂಗ
ಅಭವ ನಿನ್ನ ಹೊರತು ಕಾಯ್ವೊರಾರೊ ಕಾಣೆ ಬಸವಲಿಂಗ
ಅಕ್ಕರಾದಿಗಳಿಗೆ ಇನ್ನವದೆಸೆಯುಂಟೆ ಬಸವಲಿಂಗ
ಬೇಡ ಪರರ ಒಲುಮೆ ನಿನ್ನ ಬೇಡಿಕೊಂಬೆ ಬಸವಲಿಂಗ

(–ಬಸವಲಿಂಗ ನಾಮಾವಳಿ)

[ಆಧುನಿಕ ಪೂರ್ವ ಕಾಲದ ಕನ್ನಡಿಗರಿಗೆ ಬಸವಣ್ಣನ ಪರಿಚಯವಾದದ್ದು ಭೀಮ ಕವಿಯ 'ಬಸವ ಪುರಾಣ'ದ ಪ್ರವಚನಗಳ ಮೂಲಕ, ಕನ್ನಡ "ಬಸವ ಪುರಾಣ"ದ ಮೂಲ ಪಾಲ್ಕುರಿಕೆ ಸೋಮನಾಥನ ತೆಲುಗು "ಬಸವ ಪುರಾಣಮು."]

**ಆಮೇಲೆ ಸೇರಿಸಿದ್ದು** : ಶಿವಮೊಗ್ಗದ ಶ್ರೀ ಕತ್ತಿಗಿ ಚನ್ನಪ್ಪನವರಿಂದ ದೊರೆತ ಮಾಹಿತಿ ಇದು : ಹೊನ್ನಾಳಿ ತಾಲೂಕಿನಲ್ಲಿ ಸುಗ್ಗಿ ಕಾಲದಲ್ಲಿ 'ಬಾಲ ಬಸವ' ವೇಷ ಧರಿಸಿ ಹರಿಜನರು ಹಳ್ಳಿ ಜನರನ್ನು ರಂಜಿಸುತ್ತಿದ್ದರು. ಉದ್ದನೆಯ ನಿಲುವಂಗಿ, ತಲೆಗೆ ಗೋಳಾಕಾರದ ಉದ್ದನೆಯ ತುದಿಯಲ್ಲಿ ಚೂಪಾಗಿರುವ ರುದ್ರಾಕ್ಷಿ ಮಾಲೆಯ ಟೋಪಿ ಧರಿಸಿ, ಕೈಯಲ್ಲಿ ತಂತಿವಾದ್ಯ ಹಿಡಿದು 'ಬಾಲ ಬಸವ' ಹರಿಜನ ವ್ಯಕ್ತಿ ಹಾಡುತ್ತ ಜನರಿಗೆ "ಕಾರ್ನಿಕ" (ಭವಿಷ್ಯ) ಹೇಳುತ್ತಿದ್ದ. ಜನರಿಂದ ಸಂಗ್ರಹವಾದ

ಧಾನ್ಯವನ್ನು ಊರ ಹರಿಜನರಿಗೆ ಹಂಚುತ್ತಿದ್ದ. ಆ 'ಬಾಲ ಬಸವ' ಹಿಂದಿನ ಕಾಲದ ಶರಣ ಬಸವಣ್ಣ ಎಂದೇ ಎಲ್ಲರೂ ಭಾವಿಸಿದ್ದರು.

ಎಂದರೆ, ಒಂದು ನಂಬಿಕೆ ಪ್ರಕಾರ ಬಸವಣ್ಣ ಅಸ್ಪೃಶ್ಯರಿಗೂ ಪೂಜ್ಯ; ಅಸ್ಪೃಶ್ಯರ ಜೊತೆ ಇರುವವನು; ಜನರಿಗೆ ಮುಂದಿನ ಭವಿಷ್ಯ ಹೇಳಿ ರಕ್ಷಿಸುವವನು, ಧೈರ್ಯ ನೀಡುವವನು; ಅವನು ಹಿಂದಿನದನ್ನು ಮುಂದಿನದನ್ನು ಎಲ್ಲವನ್ನೂ ಬಲ್ಲ ಸರ್ವಜ್ಞ.






**ಚಿತ್ರ 1 : ಬಸವಣ್ಣ**



**ಚಿತ್ರ 2 : ಲಕುಲೀಶನ ಪೂಜಾಮೂರ್ತಿ (ಗುಜರಾತ್)**




**ಚಿತ್ರ 3 : ಲಕುಲೀಶನ ಹಿನ್ನೆಲೆಯಲ್ಲಿ ಈಗಿನ ಪ್ರೀತಂ ಮಹಾರಾಜ್**



**ಚಿತ್ರ 4 : ಇಂಗುಳೇಶ್ವರ (ಬಿಜಾಪುರ ಜಿಲ್ಲೆ) : ರೇವಣಸಿದ್ಧನ ಗವಿ**



**ಚಿತ್ರ 5 : ಬಸವಕಲ್ಯಾಣ : ರುದ್ರಮುನಿ ಗವಿ ದೇವಾಲಯ**



**ಚಿತ್ರ 6 : ಮುದನೂರು (ಸುರಪುರ ತಾಲ್ಲೂಕು) : ರಾಮನಾಥ ದೇವಾಲಯ**
**(ಜೇಡರ ದಾಸಿಮಯ್ಯನ ಗುಡಿ)**



**ಚಿತ್ರ 7 : ಕೊಂಡಗುಳಿ (ಬಿಜಾಪುರ ಜಿಲ್ಲೆ) : ಕೇಶಿರಾಜನ ಸಮಾಧಿ**



**ಚಿತ್ರ 8 : ಇಂಗುಳೇಶ್ವರ : ಬಸವಣ್ಣನ ತಾಯಿ ತೌರ್ಮನೆ**



**ಚಿತ್ರ 9 : ಬಸವನ ಬಾಗೇವಾಡಿ (ಬಿಜಾಪುರ ಜಿಲ್ಲೆ) : ಬಸವಣ್ಣನ ತಂದೆ ಮನೆ ಜಾಗ (ಆಧುನಿಕ ಕಟ್ಟಡ)**



**ಚಿತ್ರ 10 : ಕೂಡಲಸಂಗಮ (ಬಿಜಾಪುರ ಜಿಲ್ಲೆ) : ಶ್ರೀ ಸಂಗಮೇಶ್ವರ ದೇವಾಲಯ**



ಚಿತ್ರ 11 : ಬಸವಕಲ್ಯಾಣ : ಬೆಟ್ಟದ ಮೇಲಿನ ಕೋಟೆಯ ಒಳಾಂಗಣ



ಚಿತ್ರ 12 : ಬಸವಕಲ್ಯಾಣ : ಅರಿವಿನ ಮನೆ (ಬಸವಣ್ಣ ಧ್ಯಾನ ಮಾಡಿದ ಜಾಗ)




**ಚಿತ್ರ 13 : ಆಧುನಿಕ ಪೂರ್ವ ವರ್ಣಚಿತ್ರ : ಗಂಗಾಂಬಿಕೆ, ನೀಲಲೋಚನೆ, ಬಸವಣ್ಣ, ಅಲ್ಲಮ, ಚನ್ನಬಸವಣ್ಣ, ಅಕ್ಕನಾಗಮ್ಮ, ಅಕ್ಕಮಹಾದೇವಿ**



**ಚಿತ್ರ 14 : ಇನ್ನೊಂಮ ಆಧುನಿಕ ಪೂರ್ವ ವರ್ಣಚಿತ್ರ :**
**ಮೇಲೆ ಮಧ್ಯದಲ್ಲಿ ಅಲ್ಲಮಪ್ರಭು – ಬಲಕ್ಕೆ ಬಸವಣ್ಣ; ಅಲ್ಲಮನ ಕೆಳಗೆ – ರೇವಣಸಿದ್ಧ, ಮರುಳಸಿದ್ಧ, ಏಕೋರಾಮಾರಾಧ್ಯ, ಪಂಡಿತಾರಾಧ್ಯ ಹೆಸರಿನ ಚತುರಾಚಾರ್ಯರು**



ಚಿತ್ರ 15 : ಕೂಡಲ ಸಂಗಮ : ಸಂಗಮೇಶ್ವರ ದೇವಾಲಯ



ಚಿತ್ರ 16 : ಕೂಡಲ ಸಂಗಮ : ಬಸವಣ್ಣನ ಐಕ್ಯ ಮಂಟಪ



ಚಿತ್ರ 17 : ಮಗುಟಖಾನ ಹುಬ್ಬಳ್ಳಿ (ಬೆಳಗಾವಿ ಜಿಲ್ಲೆ) : ಮಲಪ್ರಭಾ ನದಿ ಮಧ್ಯೆ –
ಗಂಗಾಂಬಿಕೆಯ ಸಮಾಧಿ



ಚಿತ್ರ 18 : ತಂಗಡಗಿ (ಬಿಜಾಪುರ ಜಿಲ್ಲೆ) : ನೀಲಲೋಚನೆ ಗುಡಿ



ಚಿತ್ರ 19 : ಬಳ್ಳಿಗಾವೆ (ಶಿವಮೊಗ್ಗ ಜಿಲ್ಲೆ) : ಅಲ್ಲಮಪ್ರಭು ಹುಟ್ಟಿದ ಮನೆಯ ನಿವೇಶನ



ಚಿತ್ರ 20 : ಬಸವಕಲ್ಯಾಣ : ಪ್ರಭುದೇವರ ಗದ್ದುಗೆ ಮಠ



ಚಿತ್ರ 21 : ಬಸವಕಲ್ಯಾಣ : ಪ್ರಭುದೇವರ ಗದ್ದುಗೆ ಮಠ (ಒಳಾಂಗಣ)



ಚಿತ್ರ 22 : ಬಳ್ಳಿಗಾವೆ ಸಮೀಪ – ಉಡುಗಣಿ ತಡಗಣಿ – ಮಹಾದೇವಿಯಕ್ಕನ ಗುಡಿ



ಚಿತ್ರ 23 : ಶ್ರೀಶೈಲ (ಆಂಧ್ರ ಪ್ರದೇಶ) : ಮಲ್ಲಿಕಾರ್ಜುನ ದೇವಾಲಯ



ಚಿತ್ರ 24 : ಶ್ರೀಶೈಲ : ಮಹಾದೇವಿಯಕ್ಕನ ಗವಿ



ಚಿತ್ರ 25 : ಶ್ರೀಶೈಲ : ಕದಳಿವನದಲ್ಲಿ ಗುಹೆ (ಬಾಳೆಗಿಡಗಳನ್ನು ಗಮನಿಸಿ, ಕದಳಿ=ಬಾಳೆ)



ಚಿತ್ರ 26 : ಸೊಲ್ಲಾಪುರ (ಮಹಾರಾಷ್ಟ್ರ) : ಸಿದ್ಧರಾಮ ಕಟ್ಟಿಸಿದ ಕೆರೆ



ಚಿತ್ರ 27 : ಬಳ್ಳಿಗಾವೆ ಪಕ್ಕದ ಅನಿಮಿಷಯ್ಯನ ಕೊಪ್ಪಲು : ಅನಿಮಿಷನ ಸಮಾಧಿ ಗದ್ದುಗೆ



ಚಿತ್ರ 28 : ಮಸಳಿ ಕಲ್ಲು (ರಾಯಚೂರು ಜಿಲ್ಲೆ) : ಅಜಗಣ್ಣನ ಗವಿ – ಗುಡ್ಡ



ಚಿತ್ರ 29 : ಮಸಳಿ ಕಲ್ಲು (ರಾಯಚೂರು ಜಿಲ್ಲೆ) : ಮುಕ್ತಾಯಕ್ಕನ ಸಮಾಧಿ ಗುಡಿ